

ಹಂಪೆಯ ಒಂದು ದೃಶ್ಯ



ಕೊಳಲು ನಾದ



ಬಂಗಾರದ ಪಂಜರ



ಭಾರತೀಯ ನೃತ್ಯಗಾತಿ



ಚಿತ್ರದುರ್ಗದ ಕೋಟೆ

# ಕಲಾವಿದೆ ಉಷಾ ರೈ ಕೃತಿಗಳು

ಚಿಕ್ಕಂದಿನಿಂದ ಚಿತ್ರಕಲೆಯಲ್ಲಿ ಆಸಕ್ತಿ ಹೊಂದಿದ್ದ ಶ್ರೀಮತಿ ಉಷಾ ರೈ ಅವರು ೧೬ನೆಯ ವಯಸ್ಸಿನಲ್ಲಿ ವಾಟರ್ ಕಲರ್ ಪೇಂಟಿಂಗ್ ಮಾಡಿದ್ದರು. ೨೦೦೫ರಲ್ಲಿ ರಸ್ತೆ ಅಪಘಾತದಿಂದಾಗಿ ಹಾಸಿಗೆ ಹಿಡಿದ ಇವರು ಭವಿಷ್ಯದ ಕರಾಳತೆಯ ನಿರಾಸೆಯಿಂದ ಬಾಧಿತರಾಗಿದ್ದು ಸ್ತಬ್ಧ ಮನಸ್ಸಿನಿಂದ ಕುಂಚ ಹಿಡಿದರು. ಬಿಟ್ಟುಹೋಗಿದ್ದ ಹವ್ಯಾಸವು ಅವರಿಗೆ ಪುನರ್ಜನ್ಮ ನೀಡಿತೆಂದು ಅವರು ಭಾವಿಸುತ್ತಾರೆ. ಕಲಾವಿದೆ ನಿಮ್ಮಿ ರವೀಂದ್ರನಾಥ್ ಮಾರ್ಗದರ್ಶನದಲ್ಲಿ ಬಣ್ಣಗಳಲ್ಲಿ ಅದ್ದುವ ಕೆಲಸಕ್ಕೆ ತೊಡಗಿಸಿಕೊಂಡಿರುವ ಉಷಾ ಅವರು ಆಯಿಲ್ ಪೇಂಟಿಂಗ್, ಫ್ಯಾಬ್ರಿಕ್ ಪೇಂಟಿಂಗ್, ಗ್ಲಾಸ್ ಪೇಂಟಿಂಗ್ ಹಾಗೂ ವಾಟರ್ ಕಲರ್‌ನಲ್ಲಿ ಹಲವಾರು ಚಿತ್ರಗಳನ್ನು ರಚಿಸಿದ್ದಾರೆ. ಡಿಸೆಂಬರ್ ೨೦೦೭ರ ಮೊದಲ ವಾರದಲ್ಲಿ ಇವರ ಏಕವ್ಯಕ್ತಿ ಪ್ರದರ್ಶನವಿದೆ.



ಜೋಗ್ ಫಾಲ್ಸ್

# ಹೊಸತು

ನೆಮ್ಮದಿಯ ನಾಳೆ ನಮ್ಮದು


## ಒಳಗೇನಿದೆ ...



---


ಚಿತ್ರಗಳು : ಶ್ರೀಹರಿ, ಕೆದಿಲಾಯ, ಮೋನಪ್ಪ, ರಾಂಚಂದ್ರ ಕೊಪ್ಪಲು

ಜಿ. ಎಂ. ಬೊಮ್ನಳ್ಳಿ, ತುಮಕೂರು ಚಂದ್ರಕಾಂತ

ಮುಖಚಿತ್ರ : ಸಂತೆಯ ಸಡಗರ

ವರ್ಣಚಿತ್ರ : ಕೆ. ಪಿ. ಸ್ವಾಮಿ ವಿನ್ಯಾಸ : ನವಕರ್ನಾಟಕ ವಿನ್ಯಾಸ

ಕಚೇರಿ ಸಹಕಾರ : ಜಿ. ವಿ. ತೇಜೋವತಿ


## ಈ ತಿಂಗಳು

ವಿಚಾರ ವಿನಿಮಯವು ಎರಡು ರೀತಿಗಳಲ್ಲಿ ಸಾಧ್ಯ. ಒಂದು, ನಾವು ಹೇಳಬೇಕಾದ್ದನ್ನು ಹೇಳುವುದು; ಎರಡು, ಇತರರು ಹೇಳಿದ್ದಕ್ಕೆ ಪ್ರತಿಕ್ರಿಯಿಸುವುದು. 'ಹೊಸತು' ಪತ್ರಿಕೆಯು ಇವೆರಡನ್ನೂ ಸ್ವಾಗತಿಸುತ್ತದೆ. ವಿಚಾರ ಏಕಮುಖವಲ್ಲ. ಹಾಗಿದ್ದರೆ, ಚರ್ಚೆಯ ಅಥವಾ ವಿನಿಮಯದ ಅವಶ್ಯಕತೆ ಇರುವುದಿಲ್ಲ. ಪ್ರಸ್ತುತ ಸಂಚಿಕೆಯಲ್ಲಿ ಮೀಸಲಾತಿ, ದಲಿತರು, ವಾಸ್ತುಶಾಸ್ತ್ರ ಮತ್ತು ಮಧ್ಯ ಕಾಲೀನ ಸಂದರ್ಭದಲ್ಲಿ ಪ್ರಜಾಪ್ರಭುತ್ವ ಕುರಿತಂತೆ ಲೇಖನಗಳಿವೆ. ಅಲ್ಲಿಯ ದೃಷ್ಟಿಕೋನ, ತರ್ಕ, ಆಶಯ ಇತ್ಯಾದಿಗಳನ್ನು ಓದುಗರು ಗಮನಿಸಬೇಕು. ವಾಸ್ತವತೆ ಮತ್ತು ವೈಭವೀಕರಣ – ಇವುಗಳಲ್ಲಿ ಯಾವುದು ಚಿಂತನೆಗೆ ಹೆಚ್ಚು ಗಟ್ಟಿತನವನ್ನು ತಂದುಕೊಡುತ್ತದೆಂಬುದನ್ನು ಸ್ವಯಂ ವಿಮರ್ಶೆ ಮಾಡಿಕೊಳ್ಳಬೇಕು. ಯಾವುದೇ ಮಾತಿಗೆ ಸಮರ್ಥನೆ ನೀಡುವಾಗ ಆಧುನಿಕ ಜ್ಞಾನವನ್ನು ಪ್ರಾಚೀನ ಚಿಂತನೆಗೆ ಆರೋಪಿಸುವುದು ವಿಶ್ವದ ಎಲ್ಲೆಡೆ ಕಂಡುಬಂದಿರುವ ಸಂಗತಿ. ಹಾಗೆ ಮಾಡುವುದು ಉಚಿತವೆ ಮತ್ತು ಅವಶ್ಯಕವೆ ? ಇದೆಲ್ಲದರ ಬಗ್ಗೆ ಓದುಗರು ಪ್ರತಿಕ್ರಿಯಿಸಿದರೆ ವಿಚಾರ ವಿನಿಮಯದ ಆಯಾಮವು ವಿಸ್ತಾರವಾಗುತ್ತದೆ.

* * *

'ತೆಹೆಲ್ಕಾ' ಪತ್ರಿಕೆಯು ಈಗ ಹೊಸ ಸ್ವರೂಪದಲ್ಲಿ ಬರುತ್ತಿದೆ. ಅದರ ನಾಲ್ಕನೆಯ ಸಂಪುಟದ ೪೩ನೆಯ ಸಂಚಿಕೆಯು ''ಗುಜರಾತ್-೨೦೦೦; ಸತ್ಯವೇನು ?'' ಎಂಬುದನ್ನು ಬಹಳ ವಿಸ್ತಾರವಾಗಿ ಮತ್ತು ಅತ್ಯಂತ ಗಮನಾರ್ಹ ಸಾಕ್ಷ್ಯಾಧಾರಗಳೊಂದಿಗೆ ವಿಶದಪಡಿಸಿದೆ. ಅದರ ಮುಂದಿನ ೪೪ನೆಯ ಸಂಚಿಕೆ ಪೂರ್ತಿ ಹಿಂದಿನ ಸಂಚಿಕೆಗೆ ಓದುಗರ ಪ್ರತಿಕ್ರಿಯೆಯ ರೂಪದಲ್ಲಿ ಬಂದಿದೆ. ಎರಡನ್ನೂ ಓದುಗರು ಸೂಕ್ಷ್ಮವಾಗಿ ಅವಲೋಕಿಸಬಹುದು. ಹಿಂದೆ ತಿಳಿದಿದ್ದಂತಹ ಸಂಗತಿಗಳನ್ನು ಈಗ ಅನೇಕ ಪುರಾವೆಗಳ ಸಹಿತವಾಗಿ ಸಾಬೀತು ಮಾಡಲಾಗಿರುವುದು ವಿಶೇಷ. ಅದು ಗುಜರಾತಿನ ಚುನಾವಣೆಯ ಮೇಲೆ ಎಂತಹ ಪ್ರಭಾವ ಬೀರಬಹುದೆಂಬುದು ಗೌಣ. ಆದರೆ ನಮ್ಮ ದೇಶದಲ್ಲಿ ಅಮಾನವೀಯತೆ ಹೇಗೆ ಬೇರು ಬಿಡುತ್ತಿದೆಯೆಂಬುದನ್ನು ತಿಳಿಯಬೇಕಾದ್ದು ಮುಖ್ಯ. ಅದಕ್ಕೆ ಪ್ರತಿರೋಧ ಒಡ್ಡಬೇಕಾದ್ದು ಇನ್ನೂ ಹೆಚ್ಚು ಮುಖ್ಯ.

* * *

ಭಾರತ-ಅಮೆರಿಕಾ ಪರಮಾಣು ಒಪ್ಪಂದವು ಎಲ್ಲ ಸಕಾರಣ ವಿರೋಧಗಳ ನಡುವೆಯೂ ಊರ್ಜಿತವಾಗುವುದರತ್ತ ಸಾಗುತ್ತಿರುವುದು ನಮ್ಮ ದೇಶವನ್ನು ಆಕ್ರಮಣಕಾರಿಗಳಿಗೆ ಹಸ್ತಾಂತರ ಮಾಡುವ ಹುನ್ನಾರದ ಸೂಚನೆಯಾಗಿದೆ. ಇತ್ತೀಚೆಗೆ ಕೆಲವು ವಿಜ್ಞಾನಿಗಳು, ನಿವೃತ್ತ ಹಿರಿಯ ಸೈನ್ಯಾಧಿಕಾರಿಗಳು ಮತ್ತು ಅಧಿಕಾರಶಾಹಿಯ ನಿವೃತ್ತ ಹಿರಿಯ ಸದಸ್ಯರು ಹೇಳಿಕೆಯೊಂದನ್ನು ನೀಡಿ ಪಾರ್ಲಿಮೆಂಟಿನ ಎಲ್ಲ ಪಕ್ಷದ ಸದಸ್ಯರಿಗೂ ಹಿತವಚನ ನೀಡಿದ್ದಾರೆ. ಪರಮಾಣು ಒಪ್ಪಂದವು ಈಗ ಊರ್ಜಿತವಾಗದಿದ್ದರೆ ಮತ್ತೆ ಅಂತಹ ಸದವಕಾಶ ಬರುವುದಿಲ್ಲ ಮತ್ತು ನಮ್ಮ ದೇಶ ಮುಳುಗಿಹೋಗುತ್ತದೆಂಬುದು ಅವರ ಹೇಳಿಕೆಯ ಸಾರ. ಇದು ಶುದ್ಧಾಂಗ ಸುಳ್ಳು. ಭಾರತ ಸರ್ಕಾರವು ಒಳ್ಳೆಯ ಅವಕಾಶಗಳನ್ನು ಉಪಯೋಗಿಸಿಕೊಳ್ಳಲು ಸಿದ್ಧವಿಲ್ಲ, ಅಷ್ಟೆ. ಈಗಷ್ಟೇ ರಷ್ಯಾಕ್ಕೆ ತೆರಳಿದ್ದ ಪ್ರಧಾನಿಯವರು ಪರಮಾಣು ಸ್ಥಾವರಗಳ ಬಗ್ಗೆ ಮೂರು ಹೊಸ ಒಪ್ಪಂದಗಳು ಸಿದ್ಧವಿದ್ದರೂ ಅವಕ್ಕೆ ಸಹಿ ಹಾಕದೆ ಹಿಂದಿರುಗಿದ್ದಾರೆ. ಅಮೆರಿಕಾ ಬಿಟ್ಟು ಬೇರಾವ ದೇಶದಲ್ಲೂ ಅವರಿಗೆ ನಂಬಿಕೆ ಇಲ್ಲದಿರಬಹುದು, ಇಲ್ಲವೇ ಅಮೆರಿಕಾಕ್ಕೆ ಘಾಸಿಯುಂಟಾಗಬಹುದಾದಂತಹ ಯಾವ ಕ್ರಮವನ್ನೂ ಅವರು ಅನುಸರಿಸಲು ಹಿಂಜರಿಯುತ್ತಾರೆ. ಅಮೆರಿಕಾ ಜೊತೆಗಿನ ಒಪ್ಪಂದಕ್ಕೆ ಭಾರತವನ್ನು ಒಪ್ಪಿಸಲು ಅಮೆರಿಕಾ ಸರ್ಕಾರ ತೋರುತ್ತಿರುವ ಕಾತುರ ಮತ್ತು ಅನುಸರಿಸುತ್ತಿರುವ ಮಾರ್ಗ ಖಂಡಿತ ಹಲವು ಅನುಮಾನಗಳನ್ನು ಹುಟ್ಟುಹಾಕುತ್ತವೆ. ಒಂದೇ ವಾರದಲ್ಲಿ ಐದಾರು ಹಿರಿಯ ಪ್ರತಿನಿಧಿಗಳು ಭಾರತಕ್ಕೆ ಧಾಳಿಯಿಟ್ಟು ಪುಕ್ಕಟೆ ಸಲಹೆಗಳನ್ನು ನೀಡಿದರು, ಒಪ್ಪಂದವನ್ನು ಶ್ಲಾಘಿಸಿದರು, ಇಂತಹ ಅಮೋಘ ಅವಕಾಶ ಮತ್ತೆ ಬಾರದೆಂದು ತಿಳಿಹೇಳಿದರು, ಒಪ್ಪದಿದ್ದರೆ ಜೋಕೆ ಎಂಬ ಭರ್ತ್ಸನೆಯ ಮಾತನ್ನಾಡಿದರು. ಹೆನ್ರಿ ಕಿಸಿಂಜರ್ ಎಂಬ ಭಾರತ-ದ್ವೇಷಿಯನ್ನು ಸಹ ಅಮೆರಿಕಾ ಸರ್ಕಾರವು ಸರ್ಪಾಸ್ತ್ರವೆಂಬಂತೆ ಪ್ರಯೋಗಿಸಿತು. ಅಮೆರಿಕಾದ ವಿತ್ತಮಂತ್ರಿಯೊಬ್ಬ ಭಾರತ ಸರ್ಕಾರದ ಸಚಿವರನ್ನು ಭೇಟಿಯಾದದ್ದಲ್ಲದೆ ಮಾನ್ಯ ಎಲ್. ಕೆ. ಅದ್ವಾನಿಯವರ ಮನೆಗೆ ಹೋಗಿ ಅವರನ್ನು ಪುಸಲಾಯಿಸಿದ. ಅಮೆರಿಕಾದ ಬೇಹುಗಾರಿ ಸಂಸ್ಥೆಯ ಕೇಂದ್ರ ಕಚೇರಿಗೆ ಹಿಂದೊಮ್ಮೆ ಭೇಟಿಯಿತ್ತಿದ್ದ ಅದ್ವಾನಿಯವರಿಗೆ ಇದು ರುಚಿಸಿತೋ ಇಲ್ಲವೋ ತಿಳಿಯದು. ಅದೇನು ನಿಗೂಢ ಮಾತುಕತೆ ಜರುಗಿತೋ ಅದೂ ತಿಳಿಯದು. ಪರದೆಯ ಹಿಂದೆ ಏನಾದರೂ ಗುಟ್ಟಾದ ಒಪ್ಪಂದವಾಗಿದೆಯೇ ಎಂಬ ಸಂಶಯವಿದೆ. ''ಬಹಿರಂಗವಾಗಿ ಬೇಕಾದರೆ ವಿರೋಧಿಸಿ, ಆದರೆ ಪಾರ್ಲಿಮೆಂಟಿನಲ್ಲಿ ಮತ ಚಲಾಯಿಸುವ ವೇಳೆ ಬಂದರೆ ಪ್ರತಿಭಟನೆಯ ಸೂಚಕವಾಗಿ ಸದನದಿಂದ ನಿರ್ಗಮಿಸಿ'' ಎಂಬ ಸಲಹೆಯನ್ನೇನಾದರೂ ಆ ಅಮೆರಿಕಾದ ಸಚಿವ ನೀಡಿದ್ದು

೯ನೇ ಪುಟಕ್ಕೆ



ತಿಂಗಳ ಪತ್ರಿಕೆ

**ಹೊಸತು**

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ-೯ ಸಂಚಿಕೆ-೫ ಡಿಸೆಂಬರ್ ೨೦೦೭

**ಸಂಪಾದಕ**

ಜಿ. ರಾಮಕೃಷ್ಣ

**ಸಹಸಂಪಾದಕರು**

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಸ್. ಪಾರ್ಥಸಾರಥಿ
ಟಿ. ಶ್ರೀನಿವಾಸರಾಜು
ಕೆ. ಪಿ. ಸ್ವಾಮಿ
ಎಸ್. ಸುರೇಂದ್ರ

**ವ್ಯವಸ್ಥಾಪಕ**

ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೨೮೩೯೭೪೨೬

**ಹೊಸತು ಕಚೇರಿಯ ವಿಳಾಸ**




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ : ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್ : ೩೦೫೭೮೦೨೩
e-mail : navakarnataka@vsnl.com
website : www.navakarnatakabooks.com

## ಸಲ್ಲದ ಯೋಜನೆ-ಹಿಂಸೆ-ಸಂಚು

**ಸಂಪಾದಕೀಯ**

**ನಂ**ದಗುಡಿಯಲ್ಲಿ ವಿಶೇಷ ಆರ್ಥಿಕ ವಲಯದ ಯೋಜನೆಯನ್ನು ಇನ್ನೂ ಕೈಬಿಡಲಾಗಿಲ್ಲ. ಯಡಿಯೂರಪ್ಪನವರು ಮುಖ್ಯಮಂತ್ರಿಯಾಗಿರುವಾಗ ಅದನ್ನು ಅನೂರ್ಜಿತಗೊಳಿಸಬೇಕೆಂಬ ನಿರೀಕ್ಷೆ ಇದೆ. ಏಕೆಂದರೆ ನಂದಿಗ್ರಾಮದಲ್ಲಿ ಅವರ ಪಕ್ಷವೂ ಅಂತಹ ಯೋಜನೆಯನ್ನು ವಿರೋಧಿಸಿದೆ. ನಂದಗುಡಿಯ ಪ್ರಶ್ನೆ ಇನ್ನೂ ಇತ್ಯರ್ಥವಾಗಿಲ್ಲದಾಗ ಮಂಗಳೂರಿನಲ್ಲಿ ಅಂಥದೇ ಯೋಜನೆಯನ್ನು ಕಾರ್ಯಗತಗೊಳಿಸಲು ಪ್ರಯತ್ನ ನಡೆದಿದೆ ಮತ್ತು ಜನ ಅದನ್ನು ವಿರೋಧಿಸಿದ್ದಾರೆ. ಚಾಮಲಾಪುರದ ಶಾಖೋತ್ಪನ್ನ ವಿದ್ಯುತ್ ಯೋಜನೆಯ ಕತೆಯೂ ಅದೇ ಆಗಿದೆ. ಇವೆಲ್ಲದರ ಹಿನ್ನೆಲೆಯಲ್ಲಿ ಅಭಿವೃದ್ಧಿ ಎಂದರೇನು ಮತ್ತು ಅದನ್ನು ಸಾಧಿಸುವುದು ಹೇಗೆ ಎಂಬ ವಿಷಯವು ಭಿನ್ನಾಭಿಪ್ರಾಯಗಳಿಗೆ ಎಡೆಮಾಡಿಕೊಟ್ಟಿದೆ. ಮೂಲತಃ ಅಭಿವೃದ್ಧಿಯೆಂಬುದು ಜನಕ್ಕೆ, ಅವರ ಹಿತಕ್ಕೆ ಮತ್ತು ಪರಿಸರಕ್ಕೆ ಸಂಬಂಧಿಸಿದ್ದು. ಇಂತಿಷ್ಟು ಲಾಭ ತರುವ ಉದ್ಯಮವು ಅಸ್ತಿತ್ವಕ್ಕೆ ಬರುತ್ತೆಂಬುದಷ್ಟೇ ಅಭಿವೃದ್ಧಿಯೆನಿಸಿಕೊಳ್ಳುವುದಿಲ್ಲ. ಸಾವಿರಾರು ಜನರನ್ನು ನಿರಾಶ್ರಿತರನ್ನಾಗಿಸಿ ಯಾವುದೋ ಕಂಪನಿಯ ಮಾಲಿಕರು ಲಕ್ಷಗಟ್ಟಲೆ ಡಾಲರುಗಳನ್ನು ಲಾಭವಾಗಿ ಪಡೆದುಬಿಟ್ಟರೆ ಅದು ವಿಶ್ವಸನೀಯ ಅಭಿವೃದ್ಧಿಯಲ್ಲ. ನಮ್ಮ ದೇಶದ ಆರ್ಥಿಕ ಬೆನ್ನೆಲುಬನ್ನು ಗಟ್ಟಿಗೊಳಿಸಿ ಸ್ವಾವಲಂಬನೆಗೆ ಹಾದಿ ಮಾಡಿಕೊಡಬೇಕಾದ್ದು ಯಾವುದೇ ಯೋಜನೆಯ ಕನಿಷ್ಠ ಲಕ್ಷಣವಾಗಿರಬೇಕು. ನೆಹರು ಕಾಲದ ಯೋಜನೆಗಳನ್ನು ಇಂದಿನ ಹಣಕಾಸು ಸಚಿವ ಪಿ. ಚಿದಂಬರಂ ವಾಷಿಂಗ್‌ಟನ್ನಿನಲ್ಲಿ ಬಾಯಿಗೆ ಬಂದಂತೆ ತೆಗಳಿದ್ದಾರೆ; ಆದರೆ ಅವರು ಸಚಿವ ಸ್ಥಾನವನ್ನು ಕಳೆದುಕೊಂಡಿಲ್ಲ ಮತ್ತು ಮಾಧ್ಯಮಗಳ ಟೀಕೆಗೆ ಗುರಿಯಾಗಿಲ್ಲ. ಜಾಗತೀಕರಣದ ಅಮಲಿನಲ್ಲಿ ನೆಹರು ಕಾಲದ ಎಲ್ಲ ಅಭಿವೃದ್ಧಿ ಯೋಜನೆಗಳನ್ನು ಹೀಯಾಳಿಸುವುದು ಇಂದಿನ ಬೇಜವಾಬ್ದಾರಿ ಆರ್ಥಿಕ ತಜ್ಞರ ಹವ್ಯಾಸವಾಗಿದೆ. ತೈಲ, ಉಕ್ಕು, ಗೊಬ್ಬರ, ವಿದ್ಯುತ್, ನೀರಾವರಿ, ವಿದ್ಯುದುಪಕರಣ, ಕಾರ್ಖಾನೆಗಳಲ್ಲಿ ಉತ್ಪಾದನೆಗೆ ಬೇಕಾದ ಯಂತ್ರಗಳು ಮುಂತಾದುವಕ್ಕೆ ಭದ್ರವಾದ ಅಡಿಪಾಯ ಹಾಕಲಾದ್ದು ನೆಹರು ಸರ್ಕಾರದ ಅವಧಿಯಲ್ಲಿ. ೧೯೯೦ರ ನಂತರದ ವರ್ಷಗಳಲ್ಲಿ ನಮ್ಮ ದೇಶದ್ದೇ ಎಂದು ಹೇಳಿಕೊಳ್ಳಬಹುದಾದ ಎಷ್ಟು ಔದ್ಯಮಿಕ ಘಟಕಗಳನ್ನು ಸ್ಥಾಪಿಸಲಾಗಿದೆಯೆಂಬುದನ್ನು ನೆಹರು ಸರ್ಕಾರದ ಯೋಜನೆಗಳನ್ನು ಮೂದಲಿಸುವ ಜ್ಞಾನಬ್ರಹ್ಮರು ತಿಳಿಸಿಕೊಡಬೇಕು. ಬಾಯಲ್ಲಿ ನಾಲಿಗೆಯಿದೆಯೆಂದು ಚಿದಂಬರಂ ಹಗುರವಾಗಿ ಮಾತನಾಡುವುದು ಖಂಡನೀಯ. ವಿದೇಶಿ ಖಾಸಗಿ ಕಂಪನಿಗಳ ಏಜೆಂಟರು ದೇಶದ ಅರ್ಥ ಸಚಿವರಾಗಿರುವುದು ಅಪಾಯಕಾರಿ ಎಂಬುದನ್ನವರು ತೋರ್ಪಡಿಸಿದ್ದಾರೆ.

ಆರ್ಥಿಕ ಚೈತನ್ಯವನ್ನು ಹೆಚ್ಚಿಸುವ ಉದ್ಯಮಗಳು ನಮಗಿನ್ನು ಬೇಡವೇ ಬೇಡವೆಂದು ಹೇಳುವುದು ವ್ಯಾವಹಾರಿಕವಾಗಿ ಅಸಮಂಜಸವಾಗುತ್ತದೆ. ಮಾಹಿತಿ ತಂತ್ರಜ್ಞಾನವನ್ನು ಬಂಡವಾಳವನ್ನಾಗಿ ಹೊಂದಿ ಸದಾಕಾಲವೂ ನಮ್ಮ ದೇಶ ಪ್ರಕಾಶಿಸುತ್ತಿರುತ್ತದೆಂದು ನಿರೀಕ್ಷಿಸುವುದು ತಪ್ಪು. ಆದ್ದರಿಂದ ಅಭಿವೃದ್ಧಿ ಯೋಜನೆಗಳನ್ನು ಸಾರಾಸಗಟಾಗಿ ವಿರೋಧಿಸುವುದು ಒಳ್ಳೆಯ ಕ್ರಮವಲ್ಲ. ವಿಶೇಷ ಆರ್ಥಿಕ ವಲಯವು ಅಭಿವೃದ್ಧಿ ಯೋಜನೆಯಲ್ಲ; ಅದು ಲೂಟಿಯ ಯೋಜನೆ, ಅವಾಂತರ ಸೃಷ್ಟಿಸುವ ಯೋಜನೆ ಮತ್ತು ದೇಶದ ಜನಸಾಮಾನ್ಯರಿಗೆ ಕುತ್ತುಂಟುಮಾಡುವ ಯೋಜನೆ. ಅಲ್ಲಿ ಔದ್ಯಮಿಕ ಉತ್ಪಾದನೆಗೆ ಆದ್ಯತೆ ಇರುವುದಿಲ್ಲ. ಉದ್ಯಮದ ಸೋಗಿನಲ್ಲಿ ಐಷಾರಾಮಿ ಜೀವನಕ್ಕೆ ಬೇಕಾದ ಸೌಲಭ್ಯಗಳ ನಿರ್ಮಾಣವು ಅದರ ಪ್ರಮುಖ ಆಶಯ. ವಿವೇಚನೆ ಮಾಡಿದರೆ ನಮ್ಮ ಇಲ್ಲಿಯವರೆಗಿನ ದೊಡ್ಡ ಉದ್ಯಮಗಳು ಎಷ್ಟು ಭೂಮಿಯನ್ನು ಪಡೆದುವೆಂಬುದು ತಿಳಿಯುತ್ತದೆ. ಭಿಲೈ ಆಗಲಿ, ರೂರ್ಕೆಲ ಆಗಲಿ, ಭದ್ರಾವತಿ ಕಾರ್ಖಾನೆಯಾಗಲಿ ಸಾವಿರಾರು ಎಕರೆ ಭೂಮಿಯನ್ನು ಪಡೆಯಲಿಲ್ಲ. ಬೆಂಗಳೂರಿನ ಖಾಸಗಿ ಕಂಪನಿ ಮೈಕೋ ಎಷ್ಟು ಭೂಮಿಯನ್ನು ಹೊಂದಿ ಉತ್ಪಾದನಾ ಕಾರ್ಯದಲ್ಲಿ ತೊಡಗಿದೆ ? ಆ ಪ್ರಮಾಣದ ಉತ್ಪಾದನೆಗೆ ಅಷ್ಟು ಭೂಮಿ ಸಾಕಾಗುವುದಾದರೆ ವಿಶೇಷ ಆರ್ಥಿಕ ವಲಯದ ಕೋಡೇನು ? ಅದಕ್ಕೇಕೆ ಐದು-ಹತ್ತು ಸಾವಿರ ಎಕರೆಗಳ ಭೂಮಿ ಬೇಕು ?

ಏಕೆ ಬೇಕೆಂದರೆ, ಅವು ಕಾರ್ಖಾನೆಗಳಲ್ಲ. ಇಡೀ ಜಾಗದ ಮೂರನೆಯ ಒಂದು ಭಾಗದಲ್ಲಿ ಮಾತ್ರ ಯಾವುದಾದರೂ ಉತ್ಪಾದನಾ ಘಟಕವಿರುತ್ತದೆ. ಮಿಕ್ಕ ಜಾಗದಲ್ಲಿ ಬಂಗಲೆಗಳು, ಆಟದ ಮೈದಾನ, ಈಜುಕೊಳ, ಗಾಲ್ಫ್ ಕೋರ್ಸ್, ಜೂಜಾಟಕ್ಕೆ ಬೇಕಾದ ಕಟ್ಟಡಗಳು, ಎಂಥದೋ ಶಿಕ್ಷಣ ಕೇಂದ್ರ ಮುಂತಾದವು ಇರುತ್ತವೆ. ಇಂಥದಕ್ಕೆಲ್ಲಾ ಭೂಮಿಯನ್ನು ವ್ಯರ್ಥ ಮಾಡುವಷ್ಟು ಭೂಮಿ ನಮ್ಮ ದೇಶದಲ್ಲಿಲ್ಲ ಮತ್ತು ಜನಸಾಂದ್ರತೆಯು ಹೆಚ್ಚಾಗಿರುವ ಸಂದರ್ಭದಲ್ಲಿ ಒಂದು ಇಂಚು ಭೂಮಿಯನ್ನೂ ನಾವು ಬೇಕಾಬಿಟ್ಟಿ ವಿದೇಶಿ ಕಂಪನಿಗಳಿಗೆ ಕೊಡುವುದೆಂದರೆ ಅದು ಮಹಾ ಅಪರಾಧ ಮತ್ತು ಜನರ ವಂಚನೆ ಎನಿಸಿಕೊಳ್ಳುತ್ತದೆ. ಸರ್ಕಾರದ ವಶದಲ್ಲಿರುವ ಭೂಮಿಯನ್ನು ಸಹ ಈ ವಲಯಗಳಿಗಾಗಿ ಬಳಸುವುದು ಸರ್ವಥಾ ಒಪ್ಪುವ ಮಾತಲ್ಲ. ಅದು ಕರ್ನಾಟಕಕ್ಕೆ ಅನ್ವಯಿಸುವಂತೆ ಪಶ್ಚಿಮ ಬಂಗಾಳಕ್ಕೂ ಅನ್ವಯಿಸುತ್ತದೆ. ಆದ್ದರಿಂದ ನಂದಿಗ್ರಾಮದ ಜನ ತಮ್ಮ ಜಮೀನನ್ನು ವಿಶೇಷ ಆರ್ಥಿಕ ವಲಯದ ರಚನೆಗೆ ಬಿಟ್ಟುಕೊಡದಿದ್ದುದು ಅಭಿನಂದನೀಯ ಹೆಜ್ಜೆಯಾಗಿದೆ. ಜನರ ಪ್ರತಿರೋಧಕ್ಕೆ ಮಣಿದು ಸರ್ಕಾರವು ನಂದಿಗ್ರಾಮದಲ್ಲಿ ಆ ಯೋಜನೆಯನ್ನು ರದ್ದುಗೊಳಿಸಿದ್ದು ಸಹ ಅಭಿನಂದನೀಯ ಕ್ರಮವೇ ಆಗಿದೆ. ಸಾಮಾನ್ಯವಾಗಿ ಇಂತಹ ಸಂದರ್ಭಗಳಲ್ಲಿ ಬಿಕ್ಕಟ್ಟು ಅಲ್ಲಿಗೆ ಪರಿಹಾರವಾಗಬೇಕೆಂದು ನಿರೀಕ್ಷಿಸುವುದು ಅಸಹಜವಲ್ಲ. ಆದರೆ ಕಾಣದ ಕೈಗಳ ಭಾರಿ ಪ್ರಭಾವದಿಂದಲೋ ಏನೋ ನಂದಿಗ್ರಾಮದಲ್ಲಿ ಘರ್ಷಣೆ ನಿಲ್ಲಲಿಲ್ಲ, ಶಾಂತಿ ನೆಲೆಸಲಿಲ್ಲ. ಜನತೆ ಒಡ್ಡಿದ ಪ್ರತಿರೋಧವನ್ನು ತಾವೇ ಆಯೋಜಿಸಿದ್ದು, ಅದಕ್ಕೆ ತಾವೇ ನೇತೃತ್ವ ನೀಡಿದ್ದು ಮತ್ತು ಅಲ್ಲಿಯ ಜನರ ರಕ್ಷಕರು ತಾವೇ ಎಂದು ಸ್ವಯಂಘೋಷಣೆಯಲ್ಲಿ ನಿರತರಾದವರ ಮತ್ತು ಈಗಲೂ ಆಗಿರುವವರ ಸಂಖ್ಯೆ ಅಪಾರವಾಗಿದೆ. ಅಲ್ಲಿ ಸರ್ಕಾರೇತರ ಸ್ವಯಂಸೇವಾ ಸಂಸ್ಥೆಗಳಿವೆ (ಅವುಗಳ ಪೂರ್ವಚರಿತ್ರೆ ತಿಳಿಯುವುದು ಅವಶ್ಯಕ), ಜನಪರ ಹೋರಾಟಗಾರರಿದ್ದಾರೆ, ತೃಣಮೂಲ ಕಾಂಗ್ರೆಸ್-ಭಾರತೀಯ ಜನತಾ ಪಕ್ಷ – ಸೋಶಿಯಲಿಸ್ಟ್ ಯೂನಿಟಿ ಸೆಂಟರ್ ಆಫ್ ಇಂಡಿಯ – ಮಾರ್ಕ್ಸ್ ಮತ್ತು ಲೆನಿನ್‌ವಾದಿ ಅಥವಾ

ಮಾವೋವಾದಿ ಎನ್ನಲಾದ ಪಕ್ಷ, ಹೀಗೆ ಅನೇಕ ರಾಜಕೀಯ ಪಕ್ಷಗಳು ಅಲ್ಲಿ ಸಮ್ಮಿಳಿತವಾಗಿವೆ. ಅವೆಲ್ಲಾ ವಿಶೇಷ ಆರ್ಥಿಕ ವಲಯವನ್ನು ವಿರೋಧಿಸಿವೆ; ಕೆಲವೊಮ್ಮೆ ಒಟ್ಟಾಗಿ ಮತ್ತೆ ಕೆಲವೇಳೆ ಒಂಟೊಂಟಿಯಾಗಿ.

ನಂದಿಗ್ರಾಮದ ಆಸುಪಾಸಿನಲ್ಲಿ ಸಂಚಾರಕ್ಕೆ ಅಡ್ಡಿಯುಂಟುಮಾಡಲು ರಸ್ತೆಗಳನ್ನು ಅಗೆದುಹಾಕಲಾಗಿದೆ, ಸೇತುವೆಗಳನ್ನು ಬೀಳಿಸಲಾಗಿದೆ. ಅಲ್ಲಲ್ಲಿ ಬಂಕರ್‌ಗಳನ್ನು ಸ್ಥಾಪಿಸಲಾಗಿದೆ. ಇದನ್ನು ನಂದಿಗ್ರಾಮದ ಜನ ಮಾಡಿದರೆ? ಅಥವಾ 'ಜನಪರ ಹೋರಾಟಗಾರ'ರಾಗಿ ಭಾಗವಹಿಸಲು ಬಂದ ಸ್ಥಳೀಯರಲ್ಲದವರು ಮಾಡಿದರೆ? ಯಾರೇ ಮಾಡಿರಲಿ, ಸರ್ಕಾರಿ ಯಂತ್ರಕ್ಕೆ ಪ್ರವೇಶವು ಸಾಧ್ಯವಾಗದಂತೆ ಮಾಡುವುದು ಉದ್ದೇಶವಾಗಿತ್ತು. ಪಶ್ಚಿಮ ಬಂಗಾಳದ ಒಂದು ಭಾಗದಲ್ಲಿ ಆ ರಾಜ್ಯದ ಸರ್ಕಾರವು ''ಹೊರಗಿನದು'' ಎಂದು ಘೋಷಿಸಲಾಯಿತು, ಅಲ್ಲಿಯ ಗ್ರಾಮಗಳ ಅನೇಕ ಕುಟುಂಬಗಳನ್ನು ಹೊರದೂಡಲಾಯಿತು. ಸರ್ಕಾರ 'ಹೊರಗಿನದು' ಆದರೆ ಹೊರಗಿನಿಂದ ಬಂದ 'ಹೋರಾಟಗಾರರು' ಹೊರಗಿನವರಲ್ಲ! ನಂದಿಗ್ರಾಮವು ಕ್ರಾಂತಿಯ ಹಾದಿಯಲ್ಲಿ ವಿಮೋಚನೆ ಹೊಂದಿದ ಭಾಗ ಎನ್ನುವಂತೆ ಪ್ರತಿಪಾದಿಸಲಾಗಿದ್ದು ಕೂಡ ಉಂಟು. ಯೋಜನೆಯನ್ನು ಸರ್ಕಾರವು ರದ್ದುಗೊಳಿಸಿದ ನಂತರವೂ ''ಹೋರಾಟ'' ನಿಲ್ಲಲಿಲ್ಲ ಮತ್ತು ಗ್ರಾಮಗಳ ಕುಟುಂಬಗಳವರು ಹಿಂದಿರುಗಲು ಸಾಧ್ಯವಾಗಲಿಲ್ಲ. ಜನರ ಹಿತ ಕಾಪಾಡುವುದರಲ್ಲಿ ಇದೊಂದು ಅನನ್ಯ ಕ್ರಮ! ಸರ್ಕಾರವು ಜನರಿಂದ ಭೂಮಿ ಕಿತ್ತುಕೊಳ್ಳುವುದನ್ನು ತಡೆಯಲು ಮುಂದಾದವರು ಅದೇ ಜನರನ್ನು ಊರುಗಳಿಗೆ ಹಿಂದಿರುಗಲು ಬಿಡದಿರುವುದು ನೂತನ ಕ್ರಾಂತಿಪಥದ ವೈಶಿಷ್ಟ್ಯವಿರಬೇಕು!! ಇನ್ನೊಂದು ಸೋಜಿಗದ ವಿಷಯವೆಂದರೆ ಸರ್ಕಾರವು ಜನಪರ ಮತ್ತು ಪ್ರತಿರೋಧ ಒಡ್ಡಿದವರೂ ''ಜನಪರ'' ಎಂಬುದನ್ನು ಇಡೀ ಪ್ರಕರಣದಲ್ಲಿ ಪಾಲ್ಗೊಂಡ ಪರ ಮತ್ತು ವಿರೋಧಿ ಪಕ್ಷಗಳು ಹೇಳುತ್ತಲೇ ಬಂದವು. ಆಯಾ ಗ್ರಾಮಗಳ ಜನರು ಹಿಂದಿರುಗಲು ಅಡ್ಡಿಯುಂಟುಮಾಡುವುದನ್ನು ಸರ್ಕಾರ ಮತ್ತು ನಾಗರಿಕ ಸಮಾಜ ಹೇಗೆ ಪರಿಭಾವಿಸಬೇಕೆಂಬುದು ಕೇವಲ ಕುತೂಹಲದ ಪ್ರಶ್ನೆಯಲ್ಲ; ಅದು ಗ್ರಾಮಸ್ತರ ಪ್ರಾಥಮಿಕ ಹಕ್ಕುಗಳ ಪ್ರಶ್ನೆ. ಸರ್ಕಾರಿ ಯಂತ್ರ, ಪ್ರತಿರೋಧ ಒಡ್ಡಿದವರ ಬೆಂಬಲಕ್ಕೆ ನಿಂತ ಪಕ್ಷಗಳು, ಎರಡೂ ಬೇರೆ ಬೇರೆ ಸಂದರ್ಭಗಳಲ್ಲಿ ಹಿಂಸೆಯನ್ನು ಪ್ರಚೋದಿಸಿವೆ ಮತ್ತು ಹಿಂಸೆಯನ್ನು ಹರಿಬಿಟ್ಟಿವೆ. ಜಯಪ್ರಕಾಶ ನಾರಾಯಣರ ನೇತೃತ್ವದ ''ಸಂಪೂರ್ಣ ಕ್ರಾಂತಿ''ಯಲ್ಲಿ ಒಟ್ಟಿಗೆ ಯೋಧರಾಗಿದ್ದ ಆದ್ವಾನಿ ಪಕ್ಷದವರು ಮತ್ತು ಕಮ್ಯುನಿಸ್ಟರ ಒಂದು ವಿಭಾಗ ನಂದಿಗ್ರಾಮದಲ್ಲಿ ಎದುರುಬದುರು ನಿಂತಿದ್ದು ಹೊಸ ಬೆಳವಣಿಗೆಯೇನಲ್ಲ; ಏಕೆಂದರೆ ಅಂದಿನ ''ಸರ್ವಾಧಿಕಾರದ ವಿರುದ್ಧದ ಹೋರಾಟ'' ೧೯೮೦ರ ದಶಕಕ್ಕೆ ಮೊದಲೇ ಮುಕ್ತಾಯವಾಗಿತ್ತು. ಆ ಕಾಲದಲ್ಲಿ ದೇಶದ ಹಳ್ಳಿಗಳಿಗೆ ಪ್ರವೇಶ ಪಡೆದ ಆದ್ವಾನಿ ಪಕ್ಷದ ಅಘೋಷಿತ ಕಾರ್ಯಕರ್ತರು ಪಶ್ಚಿಮ ಬಂಗಾಳದಲ್ಲಿ ಎಡರಂಗ ಇಪ್ಪತ್ತೈದು ವರ್ಷಗಳ ಕಾಲ ಅವಿರತವಾಗಿ ಅಧಿಕಾರಕ್ಕೆ ಬಂದಿದ್ದನ್ನು ಹೇಗೆ ತಾನೆ ಸಹಿಸಿಯಾರು? ದೇಶ-ವಿದೇಶಗಳಲ್ಲಿ ಅವರಿಗೆ ಅನೂಚಾನವಾಗಿ ಬೆಂಬಲ ನೀಡುತ್ತಾ ಬಂದಿರುವ ಸರ್ಕಾರಗಳು, ಕಮ್ಯುನಿಸ್ಟ್ ವಿರೋಧಿ ಸಂಸ್ಥೆಗಳು, ಬೇಹುಗಾರಿಕಾ ದಳಗಳು ಮತ್ತು ಪಶ್ಚಿಮ ಬಂಗಾಳದ ಎಡರಂಗವನ್ನು ಏನೇ ಆಗಲಿ, (ಸೈದ್ಧಾಂತಿಕ ಕಾರಣಗಳಿಂದಾಗಿ) ಸಹಿಸಲು ಸಿದ್ಧವಿಲ್ಲದ ಇನ್ನಿತರ ಕಮ್ಯುನಿಸ್ಟ್ ಬಣಗಳು, ಎಲ್ಲವೂ ಒಟ್ಟಾಗಿ ಪಶ್ಚಿಮ ಬಂಗಾಳದ ಎಡರಂಗದ ಸರ್ಕಾರವನ್ನು ಬುಡಮೇಲು ಮಾಡಲು ತವಕಿಸಿವೆ. ಅವರೊಟ್ಟಿಗೆ ನೈಜವಾದ ಜನಪರ ಕಾಳಜಿಯುಳ್ಳವರೂ ಇದ್ದಾರೆಂಬುದು ನಿಜ, ಆದರೆ ಅವರ ಧ್ವನಿ ಮುಚ್ಚಿಹೋಗುವಷ್ಟು ಮಟ್ಟಿಗೆ ಇತರರ ಭಾಗವಹಿಸುವಿಕೆಯು ಮೇಲುಗೈ ಸಾಧಿಸಿದೆ. ಇದು ಪಶ್ಚಿಮ ಬಂಗಾಳದ ಬುದ್ಧಿಜೀವಿಗಳಿಗೆ ಚೆನ್ನಾಗಿ ಗೊತ್ತು.

ಇದನ್ನೆಲ್ಲಾ ಗಮನಿಸಿದರೆ ಒಂದಂಶವು ಸ್ಪಷ್ಟವಾಗಿದೆ: ವಿಶೇಷ ಆರ್ಥಿಕ ವಲಯ, ನಂದಿಗ್ರಾಮ ಮತ್ತು ಅಲ್ಲಿಯ ಸಮಸ್ತ ಕುಟುಂಬಗಳು, ರೈತರ ಭೂಮಿಯ ಪ್ರಶ್ನೆ, ಎಲ್ಲಾ ಹಿಂದಕ್ಕೆ ಸರಿದುಹೋಗಿವೆ. ಪಶ್ಚಿಮ ಬಂಗಾಳದಲ್ಲಿ ಎಡರಂಗದ ಆಡಳಿತವನ್ನು ಚಿವುಟಿಹಾಕುವುದು ಮುಖ್ಯ ಉದ್ದೇಶವಾಗಿರುವಂತೆ ತೋರುತ್ತಿದೆ. ಕಾಣುವ ಕೈಗಳಿಗೆ ಕಾಣದ ಕೈಗಳು ಸಹಾಯ ನೀಡುತ್ತಿವೆಯೇ ಎಂಬುದು ನಿಗೂಢವಾಗಿದೆ. ಅದಕ್ಕೆ ಉತ್ತರ ಕಂಡುಕೊಳ್ಳಲು ಸಾರ್ವಜನಿಕರೆದುರಿಗೆ ಯಾವ ಪುರಾವೆಯೂ ಇಲ್ಲವಾಗಿದೆ. ಎಡರಂಗದಲ್ಲಿರುವ ಪ್ರಮುಖ ಮತ್ತು ದೊಡ್ಡ ಪಕ್ಷವು ಸಂಪೂರ್ಣವಾಗಿ ಸ್ವಚ್ಛವಾದ ಹಾದಿಯಲ್ಲೇ ಹೋಗಿದೆಯೆಂದು ಈ ಪ್ರಕರಣದ ಸಂದರ್ಭದಲ್ಲಿ ಹೇಳಲಾಗುವುದಿಲ್ಲ. ಆದರೆ ಇಪ್ಪತ್ತೈದು ವರ್ಷಗಳ ಕಾಲದ ತನ್ನ ಅಸ್ತಿತ್ವವನ್ನು ಕಾದುಕೊಳ್ಳುವುದು ಅದರ ಕರ್ತವ್ಯವೆಂಬುದನ್ನು ಸಹ ಮಾನ್ಯಮಾಡಬೇಕಾಗುತ್ತದೆ. ಎಡರಂಗವನ್ನು ಸೋಲಿಸ ಬಯಸುವವರು ನಂದಿಗ್ರಾಮವನ್ನು ಶಾಂತಿಯಿಂದಿರಲು ಬಿಟ್ಟು, ಬೇರೆ ನೇರವಾದ ರಾಜಕೀಯ ಹೋರಾಟವನ್ನು ಹಮ್ಮಿಕೊಳ್ಳುವುದು ಪ್ರಜಾಪ್ರಭುತ್ವದ ನೀತಿ-ನಿಯಮಗಳಿಗೆ ಹೆಚ್ಚು ಹೊಂದಿಕೊಳ್ಳುತ್ತದೆ. ನಂದಿಗ್ರಾಮದ ಜನರು ರಾಜಕೀಯ ಪಕ್ಷಗಳ, ಕಮ್ಯುನಿಸ್ಟ್ ವಿರೋಧಿಗಳ, ತೀವ್ರಗಾಮಿಗಳ, ಪಗಡೆಯಾಟದಲ್ಲಿ ದಾಳಗಳಾಗುವುದು ಸಾಧ್ಯವಿಲ್ಲ, ಸಮರ್ಥನೀಯವಲ್ಲ ಮತ್ತು ಅದನ್ನು ಆಗಗೊಡುವಂತಿಲ್ಲ. ಪಶ್ಚಿಮ ಬಂಗಾಳದ ಎಡರಂಗ ಸರ್ಕಾರದ ತೀರ್ಮಾನವನ್ನು ವಿರೋಧಿಸಿ ನಂದಿಗ್ರಾಮದಲ್ಲಿ ಪ್ರತಿರೋಧವನ್ನೊಡ್ಡಿದ ಮತ್ತು ಈಗಲೂ ಒಡ್ಡುತ್ತಿರುವ ರಾಜಕೀಯ ಪಕ್ಷಗಳೆಲ್ಲಾ ಅವಕಾಶವಾದಿತನವನ್ನು ಅವಲಂಬಿಸಿವೆಯೆಂದು ಅರ್ಥೈಸಲಾಗದು. ಹಳೆಯ ಯೋಜನೆಯನ್ನು ಕೈಬಿಟ್ಟಿರುವಾಗ ಸರ್ಕಾರದಿಂದ ಏನನ್ನು ಬಯಸಿ ''ಹೋರಾಟ'' ಮುಂದುವರಿಸುತ್ತಿದ್ದಾರೆ ಎಂಬುದರ ಬಗ್ಗೆ ಅವರವರ ಆತ್ಮವಿಮರ್ಶೆಗೆ ಇದು ಸಕಾಲವಾಗಿದೆ. ಜನಗಳ ಆಶೋತ್ತರಗಳಿಗೆ ಸ್ಪಂದಿಸದೆಯೇ ಇಷ್ಟು ವರ್ಷಗಳ ಕಾಲ ಎಡರಂಗ ಅಧಿಕಾರದಲ್ಲಿ ಉಳಿದಿಲ್ಲ, ಮುಂದೆಯೂ ಉಳಿಯುವುದಿಲ್ಲ. ಜನಪರ ಧೋರಣೆಯನ್ನು ಅನುಸರಿಸುವ ಎಲ್ಲ ರಾಜಕೀಯ ಪಕ್ಷಗಳಿಗೂ ಇದೇ ಮೂಲಭೂತ ಸಂಹಿತೆ. ಅಂತಹ ಸಂಹಿತೆಗೆ ಹೊರತಾದವರೂ ಅಧಿಕಾರಕ್ಕೆ ಬರಲು ಸಾಧ್ಯವೆಂಬುದಕ್ಕೆ ನಮ್ಮಲ್ಲಿ ಜೀವಂತ ನಿದರ್ಶನಗಳಿವೆ. ಅಲ್ಲಿ ಹಣ ಬಲ, ಮತೀಯ ಭಾವೋದ್ರೇಕದ ಬಲ, ಭುಜಬಲ ಹೀಗೆ ಬೇಕಾದಷ್ಟು ಪರಿಕರಗಳಿರಬಹುದು. ನಂದಿಗ್ರಾಮದ ಜನ ಅವುಗಳಿಗೆಲ್ಲಾ ಮಾರುಹೋಗುವುದಿಲ್ಲ, ಜಗ್ಗುವುದಿಲ್ಲ.

೧೧ನೇ ಪುಟಕ್ಕೆ




**ಸಮಾಲೋಚಕ ಮಂಡಲಿ**

ಟಿ. ಆರ್. ಅನಂತರಾಮು
ಸಿ. ಆರ್. ಚಂದ್ರಶೇಖರ್
ವಿ. ಚಂದ್ರಶೇಖರ ನಂಗಲಿ
ಕೆ. ಎಲ್. ಗೋಪಾಲಕೃಷ್ಣ ರಾವ್
ಎಚ್. ಎಸ್. ಗೋಪಾಲ ರಾವ್
ಜಿ. ಕೆ. ಗೋವಿಂದ ರಾವ್
ಎಂ. ಸಿ. ನರಸಿಂಹನ್
ನೇಮಿಚಂದ್ರ
ಪ್ರಕಾಶ್ ಸಿ. ರಾವ್
ಬರಗೂರು ರಾಮಚಂದ್ರಪ್ಪ
ಕೆ. ಮರುಳಸಿದ್ದಪ್ಪ
ಮಹಾಬಲೇಶ್ವರ ರಾವ್
ವ್ಯಾಸರಾಯ ಬಲ್ಲಾಳ
ವಿಜಯಾ
ಬಿ. ವಿ. ವೀರಭದ್ರಪ್ಪ
ಟಿ. ವೆಂಕಟೇಶ ಮೂರ್ತಿ
ಯು. ಎಸ್. ಶ್ರೀನಿವಾಸನ್
ಸಿದ್ದನಗೌಡ ಪಾಟೀಲ
ಎಲ್. ಹನುಮಂತಯ್ಯ

**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ರೂ. ೧೨/- |
| ವಾರ್ಷಿಕ ಚಂದಾ | ರೂ. ೧೨೫/- |
| ಮೂರು ವರ್ಷಕ್ಕೆ | ರೂ. ೩೦೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು - ೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೦೧೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೦೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೨೨೪೩೦೨




### ಹೊಸತು

ತಿಂಗಳ ಕೊನೆ ಬರುತ್ತಿದ್ದಂತೆ ನನ್ನಲ್ಲಿ ಚಡಪಡಿಕೆ ಶುರು ಆಗುತ್ತದೆ, 'ಹೊಸತು' ಯಾವಾಗ ಬರುತ್ತದೋ ಎಂದು. ಇದು ನನ್ನ ಪ್ರಾಮಾಣಿಕ ಅನಿಸಿಕೆ. 'ಹೊಸತು' ಕೈಸೇರುತ್ತಿದ್ದಂತೆ ನನ್ನ ಗಮನ ಸಂಪಾದಕೀಯದತ್ತ, ಇದು ಪತ್ರಿಕೆಯ ಅತ್ಯಂತ ವಿಶಿಷ್ಟವಾದ ಭಾಗ. ಅದರಲ್ಲೂ ವಿಶೇಷವಾಗಿ ಡಾ॥ ಜಿ. ಆರ್.ರವರು ಪ್ರಚಲಿತ ವಿದ್ಯಮಾನಗಳ ಬಗ್ಗೆ ವಸ್ತುನಿಷ್ಠವಾಗಿ ಪ್ರತಿಕ್ರಿಯಿಸುತ್ತಿರುವುದು ಬಹಳ ಅರ್ಥಪೂರ್ಣವಾಗಿದೆ. ತಮ್ಮ ನಿಷ್ಠುರ ಮತ್ತು ನೇರ ಮಾತುಗಳಲ್ಲಿ ಹಾಗೂ ಅದ್ಭುತವಾದ ನವಿರು ಹಾಸ್ಯಪ್ರಜ್ಞೆಯಲ್ಲಿ ಮೂಡಿಬರುವ ಲೇಖನಗಳು ನಿಜಕ್ಕೂ ಅನನ್ಯ. ಪ್ರಚಲಿತ ವಿದ್ಯಮಾನಗಳ ಬಗ್ಗೆ ನನ್ನಂಥವರು ''ನಿರ್ಭಾವುಕರಾಗುವುದು'' ಮತ್ತು ''ಅನುಕೂಲಕರ ಸಿನಿಕತ್ವವನ್ನು'' ರೂಢಿಸಿಕೊಳ್ಳುವುದನ್ನು ತಡೆಯಲು ಈ ಸಂಪಾದಕೀಯಗಳು ಬಹಳ ಉಪಯುಕ್ತವಾಗಿವೆ. ಪತ್ರಿಕೆ ಹೀಗೆಯೇ ಮುಂದುವರೆಯಲಿ ಎಂಬ ಹಾರೈಕೆಯೊಂದಿಗೆ,

ಬೆಂಗಳೂರು **ಡಾ॥ ಟಿ. ಎನ್. ಚಂದ್ರಕಾಂತ**

ಇಂಥ ಪತ್ರಿಕೆಗಳು ಜನರನ್ನು ಹೊಸ ಬಗೆಯಲ್ಲಿ ಆಲೋಚಿಸುವುದಕ್ಕೆ ಹಾಗೂ ಅರಿಯುವುದಕ್ಕೆ ಬೇಕು. ಜಾತ್ಯತೀತ, ಪಕ್ಷ-ಪಂಗಡಾತೀತ, ಧರ್ಮಾತೀತವಾದ ನಿಮ್ಮ ಪತ್ರಿಕೆಯಲ್ಲಿನ ಲೇಖನಗಳಿಂದ ಖಂಡಿತವಾಗಿಯೂ ಸಮಾಜಕ್ಕೆ ಒಳಿತಾಗುವುದರಲ್ಲಿ ಅನುಮಾನ ಬೇಡ. ಎಷ್ಟೋ ಪತ್ರಿಕೆಗಳು ಜನ್ಮತಾಳಿ ಅಲ್ಪಾಯುಷಿಗಳಾಗುತ್ತಿರುವ ದಿನಮಾನದಲ್ಲಿ ನಿಮ್ಮ ಪತ್ರಿಕೆ ಬಹುಕಾಲ ಬಾಳಲಿ, ಬೆಳೆಯಲಿ ಎಂದು ಆಶಿಸಿ ಅದಕ್ಕಾಗಿ ಹಾರೈಸುತ್ತೇನೆ.

ತ್ಯಾವಣಿಗೆ **ಎಸ್. ಓಂಕಾರಯ್ಯ ತವನಿಧಿ**

### ಅಕ್ಟೋಬರ್ ಸಂಚಿಕೆ

ಅಕ್ಟೋಬರ್ ಸಂಚಿಕೆಯಲ್ಲಿ ಬಾಳೆಯೆಲೆಯ ವಿವಿಧೋಪಯೋಗಗಳನ್ನು ವಿವರಿಸುವ ಬರೆಹ ಬಹಳ ಸ್ವಾರಸ್ಯಕರವಾಗಿತ್ತು. ಬಾಳೆಯೆಲೆಯ ಇನ್ನಷ್ಟು ಉಪಯೋಗಗಳು ಕೇರಳದಲ್ಲಿ ಆಗುತ್ತಿದ್ದವು. ಅಲ್ಲಿ ಹಿಂದಿನ ಕಾಲದಲ್ಲಿ ಅನ್ನಕ್ಕಿಂತ ಗಂಜಿಗೇ ಹೆಚ್ಚು ಪ್ರಾಶಸ್ತ್ಯಸಲ್ಲುತ್ತಿತ್ತು. ಶ್ರೀಮಂತರ ಗಂಜಿಯೂಟವೂ ಬೇಕುಬೇಕಾದಷ್ಟು ಅನ್ನ ಒಳಗೊಂಡ ಪುಷ್ಕಳ ಭೋಜನವಾಗಿದ್ದರೆ ಬಡವರ ಗಂಜಿಯೂಟದಲ್ಲಿ ಅನ್ನಕ್ಕಿಂತ ಶೇಕಡಾ ತೊಂಬತ್ತರಷ್ಟು (ಲೀಟರುಗಟ್ಟಲೆ) ತಿಳಿಯೇ ತುಂಬಿರುತ್ತಿತ್ತು. ಅಷ್ಟು ತಿಳಿಯನ್ನು ಕೂಡ ಬಾಳೆಯೆಲೆಯಲ್ಲೇ ಬಡಿಸಲಾಗುತ್ತಿತ್ತು. ಬಾಳೆಯ ಕಾಂಡದ ಪದರನ್ನು ಸುಮಾರು ಒಂದು ಅಂಗುಲ ಅಗಲ ಎರಡು ಅಡಿ ಉದ್ದಕ್ಕೆ ಕತ್ತರಿಸಿದ ಬಳಿಕ ಇತ್ತುದಿಗಳನ್ನೂ ಹಿಡಿಕಡ್ಡಿಯಿಂದ ಜೋಡಿಸಿದಾಗ ಸಿದ್ಧವಾಗುವ ವರ್ತುಲದ ಮೇಲೆ ಇರಿಸಲಾದ ಬಾಳೆಯೆಲೆಯಲ್ಲಿ ಬಟ್ಟಲುಗಟ್ಟಲೆ ತಿಳಿಯನ್ನು ಸುರಿಯಿಸಿಕೊಂಡು ಕುಡಿಯಬಹುದು. ಅದನ್ನು ಗೋರಿ ಕುಡಿಯಲಿಕ್ಕೆಂದೇ ಹಣ್ಣಾದ ಹಲಸಿನೆಲೆಯ ಚಿಕ್ಕ ಸವುಟುಗಳನ್ನು ಮೊದಲೇ ಸಿದ್ಧಮಾಡಿ ಇಟ್ಟಿರುತ್ತಾರೆ. ತಿಳಿಯನ್ನೆಲ್ಲ ಕುಡಿದ ಬಳಿಕ ತಳದಲ್ಲಿ ದೊರೆಯುವ ಹಿಡಿಯಷ್ಟು ಅಗುಳೂ ಆಗ ಮೃಷ್ಟಾನ್ನದ ಸವಿಯನ್ನೂ ಸಂತೃಪ್ತಿಯನ್ನೂ ಬಡವನಿಗೆ ನೀಡುತ್ತದೆ.

*ನರೀಕಾಂವಳ್ಳಿ, ಕಣ್ಣೂರು ತಾಲೂಕು* ***ಕೆ. ಕೆ. ನಾಯರ್***

ಜಿ. ರಾಮಕೃಷ್ಣ ಅವರ 'ಜಾಗತೀಕರಣ ಮತ್ತು ಮಾಧ್ಯಮಗಳು' ಲೇಖನ ಸಮಯೋಚಿತವಾಗಿತ್ತು. ಇತ್ತೀಚಿನ ದಿನಗಳಲ್ಲಿ ಬಹು ಚರ್ಚಾಸ್ಪದವಾಗಿರುವ ಅಮೆರಿಕಾ ಜತೆಗಿನ ಅಣು ಒಪ್ಪಂದ ನೀತಿಯ ಬಗ್ಗೆ ನಮ್ಮ ದೇಶದ ತಥಾಕಥಿತ ವಿಚಾರವೇತ್ತರು ಎನಿಸಿಕೊಂಡವರು, ಈ ಲೇಖನವನ್ನು ಮುಕ್ತ ಮನಸ್ಸಿನಿಂದ ಓದಿ ತಮ್ಮ ಮನೋವಿಕಾರವನ್ನು ಹೋಗಲಾಡಿಸಿಕೊಳ್ಳುವರೆಂದು ನನ್ನ ಆಶಯ. ಈಗಿನ ಸಂದರ್ಭದಲ್ಲಿ 'ದೊಡ್ಡಣ್ಣ' ಎನಿಸಿಕೊಂಡಿರುವ 'ಅಮೆರಿಕಾ' ದೇಶದ ಅಧ್ಯಕ್ಷ 'ಬುಷ್'ನ ನೀತಿಯೇ ಪರಮೋಚ್ಚ ಎಂದೆಣಿಸಿರುವವರಿಗೆ ಕಣ್ತೆರೆಸುವಂತಹ ಲೇಖನ.

*ಬೆಂಗಳೂರು* ***ತಿ. ರಾ. ನಾರಾಯಣ***




ಒಂದು ಮಾಧ್ಯಮ, ಸಮಾಜದ-ದೇಶದ ಪ್ರಗತಿಗೆ ಪೂರಕವಾಗಿರಬೇಕು; ಆ ದೇಶದ ರೈತಾಪಿ ಹಾಗೂ ಕಾರ್ಮಿಕ ವರ್ಗದ, ದಲಿತರ, ಮಹಿಳೆಯರ ನೋವುಗಳಿಗೆ ಸ್ಪಂದಿಸಿ ಸಂಬಂಧಪಟ್ಟವರಲ್ಲಿ ಜಾಗೃತಿ ಮೂಡಿಸುವಂತಾಗಬೇಕು. ನಮ್ಮ ಮಾಧ್ಯಮಗಳು ನಮ್ಮತನವನ್ನು ಮರೆಯದಿರಲಿ; ನಮ್ಮ ದೇಶ, ನಾಡು, ನುಡಿ, ಕಲೆ, ಸಂಸ್ಕೃತಿಯನ್ನ, ಶ್ರಮಿಕರನ್ನ ಗೌರವದಿಂದ ಕಾಣುವಂತಾಗಲಿ.

**ಸುರೇಶ್ ಎಮ್. ಸಮತಳ**

### ನವೆಂಬರ್ ಸಂಚಿಕೆ

ಹದಿಹರೆಯರ ಮನಸ್ಸಿಗೆ ಪರಿಚಿತರಾದ ಜಯಂತರ ಬಗ್ಗೆ, ಅವರ ಕಥೆಗಳ ಬಗ್ಗೆ, ಆಳ ಅಧ್ಯಯನ ಮಾಡಿ ಸೃಜನಾತ್ಮಕ ವಿಮರ್ಶೆಯೊಂದನ್ನು ಬರೆದಿದ್ದಾರೆ. ಜಯಂತರು ನಾಡಿನಲ್ಲಿನ ಯಾವುದೇ ರೀತಿಗೆ ಬ್ರಾಂಡ್ ಆಗದ ಬರಹಗಾರರೆಂದು ಈ ಓದುಗನ ಅಂಬೋಣ. ಡಾ॥ ಪ್ರಕಾಶ್ ಸಿ. ರಾವ್‌ರವರು ಹಲವು ಅಗೋಚರ ಸತ್ಯಗಳನ್ನು ಓದುಗರ ಮುಂದೆ ತೆರೆದಿಟ್ಟಿದ್ದಾರೆ, ತಮ್ಮ 'ಜನಾರೋಗ್ಯದ ಪರವಾದ ಪೇಟೆಂಟ್ ತೀರ್ಪು'ವಿನಲ್ಲಿ, ಬಹುರಾಷ್ಟ್ರೀಯ ಕಂಪನಿಗಳು ಜನಾರೋಗ್ಯದ ಬಗ್ಗೆ ಕಾಳಜಿ ವಹಿಸದೆ, ವೈದ್ಯರನ್ನು ಮೋಡಿಗೊಳಿಸುವ ತಂತ್ರ ಬಳಸುತ್ತಿರುವ ಬಗ್ಗೆ ಓದುಗರನ್ನು ಎಚ್ಚರಿಸಿದ್ದಾರೆ.

*ವಿಜಯನಗರ, ಬೆಂಗಳೂರು* ***ನೆ. ಲ. ರಾಮಮೂರ್ತಿ***

### ಜೀವನದ ಶಿವಮಾತು

'ಬಸವಣ್ಣ ಮಾಡಿದ ಒಂದು ಬಹುದೊಡ್ಡ ತಪ್ಪು' ಲೇಖನದಲ್ಲಿ ಪ್ರೊ॥ ಸಿ. ಎಚ್. ಮರಿದೇವರು ವೀರಶೈವರಿಂದ ಲಿಂಗಾಯತರು ಬಿಡುಗಡೆಯಾಗಬೇಕಾದರೆ, ಬಸವಣ್ಣನ ಒಂದು ಡಾಲರ್ ಅನ್ನು ಕೊರಳಲ್ಲಿ ಧರಿಸಿ ಬಸವಾಯತರಾಗುವ ವಿಚಾರಲಹರಿ ತೇಲಿಬಿಟ್ಟಿದ್ದಾರೆ. ಬಸವಣ್ಣನ ಒಂದು ಡಾಲರ್ ಕೊರಳಲ್ಲಿ ಹಾಕಿಕೊಂಡ ತಕ್ಷಣ ಬಸವಾಯತರಾಗಲು ಸಾಧ್ಯವೆ? ಬಸವ ಕಟ್ಟಿದ ಲಿಂಗಾಯತ ಧರ್ಮದ ಸೌಧದ ಪಿಲ್ಲರ್‌ಗಳು ಬಿಟ್ಟು ಸೌಧ ಉಳಿಸಿಕೊಳ್ಳುವ ಸಲಹೆ ಎಷ್ಟರಮಟ್ಟಿಗೆ ಸರಿ?

'ಇಷ್ಟಲಿಂಗವನ್ನು ಕಷ್ಟಲಿಂಗ' ಎಂದು ಪ್ರೊ॥ ಹೇಳಿರುವುದು ೧೨ನೇ ಶತಮಾನದ ಇಷ್ಟಲಿಂಗಕ್ಕೆ ನಿಜವಾಗಿಯೂ ೨೧ನೇ ಶತಮಾನದಲ್ಲಿ ಕಷ್ಟಲಿಂಗವೆಂದೆನಿಸುವುದು ಸಮಯದ ಅಭಾವದ ಭೌತೀಕರಣದ ಗ್ರಾಹಕ-ಸಂಸ್ಕೃತಿಯಲ್ಲಿ ಉಸಿರಾಡುತ್ತಿರುವ ನಮಗಿಂದು ಸಹಜ ಅನಿಸಬಹುದಾಗಿದೆಯೇನೋ ಸರಿ. ಆದರೆ ೧೨ನೆಯ ಶತಮಾನದಲ್ಲಿಯ ಇಷ್ಟಲಿಂಗ ಧರಿಸುವ ವ್ಯಕ್ತಿಗೆ ಇದು ಆಪ್ಯಾಯಮಾನವಾಗುತ್ತದೆ. ಇದು ಸಂಪ್ರದಾಯವಾದಿಗಳಿಗೆ ಧರ್ಮದ್ರೋಹಿಯಾಗಿ, ಬಸವಣ್ಣ ಬಸವಾಸುರನಾಗಿ ಗೋಚರಿಸಿದರೆ; ಅದೇ ಧರ್ಮದಾಹಿಗಳಿಗೆ ಮೋಕ್ಷರೂಪಿಯಾಗಿ ಗೋಚರಿಸುವವ,

*ಕಾಯಕವ ಕಲಿಸುದಕ ನಾಯಕನು ಬಸವಯ್ಯ*
*ಜೀಯ ಹೊಸಮತಕ್ಕೆ ಶಿವಭಕ್ತಿ! ಸಾರುದಕ್ಕೆ*
*ರಾಯ ಜೀವನದ ಹೊಸ ನುಡಿಗೆ*

ಎಂಬ ಆತ್ಮಾಭಿಮಾನ ಕಾಯಕದಲ್ಲಿ ಕಂಡುಂಡ ಜನಪದ ಹುಚ್ಚೆದ್ದು ಕುಣಿದಾಡುವಂತಾಗುತ್ತದೆ.

*ಈ ಹರ್ಷದಲ್ಲಿ, ಕಾಯಕದ ತೃಪ್ತಿಯಲಿ*
*ಉಂಡು ತೇಗಿತು ಲೋಕ-ಕೊಂಡಾಡಿ ಕಾಯಕವ*
*ಕಂಡಕಂಡಲ್ಲಿ ದಾಸೋಹ। ಕಾಯಕದ*
*ಕಂಡೆ ಜೀವನದ ಶಿವ ಮಾತು.*

ಇದು ಇಷ್ಟಲಿಂಗ ಧರಿಸಿದ ಕಾಯಕಯೋಗಿಗಳಾದ ಲಿಂಗಾಯತರ ಸಾರ್ಥಕ-ಬದುಕಿನ ಜೀವನದ ಶೈಲಿಯಾಯಿತು. ಇಂಥ 'ಜೀವನದ ಶಿವ ಮಾತು' ವೀರಶೈವರು ಮೈಮೇಲೆ ಧರಿಸುವ ಸ್ಥಾವರಲಿಂಗಗಳ ಚಿಕ್ಕ ರೂಪುಗಳೇ ಇಷ್ಟಲಿಂಗವಾಗಿ ಪರಿವರ್ತಿಸಿ ಅಂತ್ಯಜರಿಗೆ ದೇವಸ್ಥಾನಗಳಿಗೆ ಹೋಗಗೊಡದೆ ದೇವರನ್ನೇ ಅಂತ್ಯಜರ ಅಂಗೈಯಲ್ಲಿ ತಂದುದು ಇದು ಬಸವಣ್ಣನ ಅದ್ಭುತ ಕ್ರಾಂತಿಯೇ ಹೊರತು ತಪ್ಪು ಹೇಗಾಗುತ್ತದೆ? ಬೇರೆ ಕುರುಹು ನೀಡಿ ದೇವಸ್ಥಾನ ನಿರಾಕರಿಸಿದಲ್ಲಿ ದೇವಸ್ಥಾನದ ಹಸಿವುಳ್ಳ ಅಂದಿನ ಸಮಾಜದಲ್ಲಿ ಮಧುವರಸ ಹರಳಯ್ಯನವರು ಬೀಗರಾಗಿ ಜಾತಿರಹಿತ ಸಮಾಜ ಕಟ್ಟುವಲ್ಲಿ ಸಾಧ್ಯವಾಗುತ್ತಿತ್ತೆ? ಅಂದಿನ ಸಮಾಜ ಪ್ರತಿಷ್ಠೆಯ, ದೇವಸ್ಥಾನ ನಿರ್ಮಿಸುವ ಪೈಪೋಟಿಯಲ್ಲಿ ಹುಚ್ಚುಹಿಡಿದವರಿಗೆ

ದುಂದುವೆಚ್ಚದ ಅರಿವು ಮೂಡಿಸುವುದು ಇಷ್ಟಲಿಂಗದಿಂದಲೆ ಹೊರತು ಬೇರೆ ಕುರುಹುವಿನಿಂದ ಸಾಧ್ಯವಾಗದ ಮಾತು. ಅಜ್ಞಾನ, ದಾರಿದ್ರ್ಯ, ದಟ್ಟ ಗರ್ಭಗುಡಿಯ ಹಸಿವುಳ್ಳ ಶ್ರೇಣೀಕೃತ ಸಮಾಜಕ್ಕೆ ಪರ್ಯಾಯ ವ್ಯವಸ್ಥೆ ಒದಗಿಸುವ ಅನಿವಾರ್ಯತೆ ಒಂದು ಜವಾಬ್ದಾರಿಯುತ ಕ್ರಾಂತಿಯೆ ವಿನಾ ತಪ್ಪು ಹೆಜ್ಜೆಗಳ ವಿಪ್ಲವದ ಕ್ರಾಂತಿಯಲ್ಲ.

ಕಾಲಕಾಲಕ್ಕೆ ಬಸವಣ್ಣ ಜನಪರವಾದುದರಿಂದಲೆ ಕೂಡಲಸಂಗಮ ಲಿಂಗದೇವನಾಗಿ, ಮಾಂಸಾಹಾರಿಗಳು ಬಸವಾಯತರಾಗಿ, ಆನು ಹೊರಗಣವನಾಗಿ... ಮುಂತಾದ ಚರ್ಚೆಗೊಳಗಾಗುವ ವ್ಯಕ್ತಿಯಾಗಿ ಜಾಗತಿಕ-ಕ್ರಾಂತಿಯತ್ತ ದಾಪುಗಾಲು ಹಾಕುವ ಸಲಗನು ಹೌದು! ಚಲನಶೀಲ ಸಮಯದಲ್ಲಿ ಯಾವ ಮಹಾಪುರುಷರೂ ಪೂರ್ಣವಾಗಲಾರರು. ಜೀವವಿಕಾಸದಂತೆ ಜ್ಞಾನ ವಿಕಾಸವು ನಿರಂತರ ಪ್ರಕ್ರಿಯೆ. ಅಂದಂದಿನ ಕಾಲದ ಬೇಕುಬೇಡಿಕೆಗಳಿಗೆ ಬದ್ಧವಾಗಬೇಕಾದ ಅನಿವಾರ್ಯತೆ ಇಂದು ಅದು ಹೇಗೆ ತಪ್ಪಾಗುತ್ತದೆ? ಹಿಂದಿನದರ ಮೇಲೆ ವರ್ತಮಾನ ಬದುಕುವಾಗ ಭವಿಷ್ಯದ ಕನಸು ಕಾಣುವುದು ಭೂತ ಕಾಲದ ಗರ್ಭದಲ್ಲಡಗಿದ ಬೇರುಗಳ ಆಧಾರದಿಂದಲೆ. ಹಳೇ ಬೇರಿನ ಹೊಸ ಚಿಗುರುಗಳಿಗೆ ಇಷ್ಟಲಿಂಗದ ನಿರ್ಮಾಣ ಬಸವಣ್ಣನಿಂದಾದ ಅನಿವಾರ್ಯವೋ? ಅಥವಾ ಬಹುದೊಡ್ಡ ತಪ್ಪೋ? ಎಂಬುದರ ಮನನವಾದಾಗ ಅನಿವಾರ್ಯವಾದಲ್ಲಿ ಬಸವಣ್ಣ, ಬಸವಣ್ಣನ ತತ್ವ ಬೆಳೆಯುತ್ತೆ. ಬಹುದೊಡ್ಡ ತಪ್ಪಾದಲ್ಲಿ ಬಸವಣ್ಣನು ಇರಲಾರ. ಬಸವಣ್ಣನ ತತ್ವವೂ ಇರಲಾರದು.

ಬೀದರ **ಶಿವಕುಮಾರ ನಾಗವಾರ**

### ಅಸಂಘಟಿತ ಕಾರ್ಮಿಕ ಮಸೂದೆ

ಕಾರ್ಮಿಕರು ತಮ್ಮ ಹಲವಾರು ವರ್ಷಗಳ ಹೋರಾಟಗಳ ಫಲವಾಗಿ ಗಳಿಸಿದ್ದ ಹಕ್ಕುಗಳನ್ನು ಕಸಿದುಕೊಳ್ಳಲು ಮತ್ತು ಲಾಭಾಂಶವನ್ನು ಹೆಚ್ಚಿಸಿಕೊಳ್ಳಲು ಬಂಡವಾಳಶಾಹಿ ವ್ಯವಸ್ಥೆಯು, ಗುತ್ತಿಗೆ ಕಾರ್ಮಿಕರನ್ನು ನೇಮಿಸುವುದು, ಹೊರಗುತ್ತಿಗೆ ನೀಡುವುದು, ಅವಶ್ಯಕತೆ ಇದ್ದಾಗ ಕೂಲಿಗೆ ನೇಮಿಸುವುದು, ಹೆಚ್ಚು ಮಹಿಳಾ ಕಾರ್ಮಿಕರನ್ನು ನೇಮಿಸುವುದು, ಹೀಗೆ ಹಲವಾರು ಮಾರ್ಗಗಳನ್ನು ಅನುಸರಿಸುತ್ತದೆ. ಮಸೂದೆ ಈ ಪ್ರಕ್ರಿಯೆಯನ್ನು ತೊಡೆದುಹಾಕುವ ನಿಟ್ಟಿನಲ್ಲಿ ಸಾಗುತ್ತದೆ ಎಂದು ಹೇಳಲು ಯಾವುದೇ ಪುರಾವೆಗಳಿಲ್ಲ, ಬದಲಾಗಿ ಜಾಗತೀಕರಣ, ಉದಾರೀಕರಣ ಪ್ರಕ್ರಿಯೆಯನ್ನು ಸರಾಗವಾಗಿಸಲು, ಶ್ರಮಿಕರ ಮಾರುಕಟ್ಟೆಯ ಪುನಾರಚನೆಗೆ ಈ ಮಸೂದೆ ಪೂರಕವಾಗಿ ಕಾರ್ಯನಿರ್ವಹಿಸುತ್ತದೆ. ಸಂಘಟಿತ ಕಾರ್ಮಿಕರಿಗೆ ನೀಡಲಾಗಿರುವ ರಕ್ಷಣೆಯಿಂದ ಶ್ರಮಿಕ ಮಾರುಕಟ್ಟೆಯ ಪರಿಸ್ಥಿತಿ ಬಿಗಡಾಯಿಸಿದೆ ಎಂದು ವಾದಿಸುವ ಉದ್ಯಮಿಗಳು, ದೇಶದ ಕಾರ್ಮಿಕರಲ್ಲಿ ಶೇ. ೯೩ರಷ್ಟಿರುವ ಅಸಂಘಟಿತ ಕಾರ್ಮಿಕರು, ನಿರುದ್ಯೋಗ ಸಮಸ್ಯೆಯಿಂದ ಮುಂದೊಂದು ದಿನ ರೊಚ್ಚೆದ್ದು ಹೋರಾಟದ ಮಾರ್ಗ ಅನುಸರಿಸಬಹುದೆಂದು ಪ್ರತಿಪಾದಿಸುತ್ತಾರೆ. ಈ ಹಿನ್ನೆಲೆಯಲ್ಲಿ, ಅಸಂಘಟಿತ ಕ್ಷೇತ್ರದ ಕಾರ್ಮಿಕರನ್ನು ನಿಯಂತ್ರಿಸಲೆಂದೇ ಈ ಮಸೂದೆಯನ್ನು ಸರ್ಕಾರ ಸಿದ್ಧಪಡಿಸಿರುವುದು ಸ್ಪಷ್ಟವಾಗಿದೆ.

ಯಾವುದೇ ಕಾರ್ಮಿಕ ಕಾಯ್ದೆಗಳು ಅನ್ವಯಿಸದ ವಿಶೇಷ ಆರ್ಥಿಕ ವಲಯಗಳಲ್ಲಿ ಉದ್ದಿಮೆಗಳನ್ನು ರಕ್ಷಿಸಲು, ಉದ್ಯಮಗಳನ್ನು ಮನಬಂದಂತೆ ಮುಚ್ಚಲು, ಕಾರ್ಮಿಕರನ್ನು ವಜಾ ಮಾಡಲು ಅಧಿಕಾರ ನೀಡಲು, ಕೈಗಾರಿಕಾ ವಿವಾದ ಕಾಯ್ದೆಯಲ್ಲಿ ಸುಧಾರಣೆಗಳನ್ನು ತರುವುದು, ಮಹಿಳೆಯರಿಗೆ ರಾತ್ರಿ ಪಾಳಿ ಕೆಲಸಮಾಡಲು ಅವಕಾಶ ನೀಡುವುದು, ಭವಿಷ್ಯನಿಧಿ ಹಣವನ್ನು ಹಣಕಾಸು ಮಾರುಕಟ್ಟೆಯಲ್ಲಿ ತೊಡಗಿಸಲು ಬಂಡವಾಳಿಗರಿಗೆ ನೀಡಲು ಭವಿಷ್ಯ ನಿಧಿ ಕಾನೂನನ್ನು ಮಾರ್ಪಡಿಸುವುದು, ಕಾರ್ಮಿಕರ ಪಿಂಚಣಿ ನಿಧಿಯನ್ನು ಖಾಸಗಿಯವರಿಗೆ ನೀಡಿ, ಕಾರ್ಮಿಕರ ಭವಿಷ್ಯವನ್ನು ಉದ್ಯಮಿಗಳ ವಶಕ್ಕೆ ನೀಡುವುದು, ವೇತನಗಳನ್ನು ನಿರ್ಧರಿಸುವ ಅಧಿಕಾರವನ್ನು ಮಾರುಕಟ್ಟೆ ಶಕ್ತಿಗಳಿಗೆ ನೀಡುವುದು, ಇವೇ ಮುಂತಾದ ಬದಲಾವಣೆಗಳಿಗೆ ಪೂರಕವಾಗಿ ಅಸಂಘಟಿತ ಕ್ಷೇತ್ರದ ಕಾರ್ಮಿಕರ ಸಾಮಾಜಿಕ ಭದ್ರತಾ ಮಸೂದೆ ತರಲಾಗುತ್ತಿದೆ.

ಭಾರತದಲ್ಲಿ ಶೇ. ೭೦ರಷ್ಟು ಕಾರ್ಮಿಕರು ಕೃಷಿ ಕ್ಷೇತ್ರವನ್ನೇ ಅವಲಂಬಿಸಿದ್ದು ಇತ್ತೀಚಿನ ವರ್ಷಗಳಲ್ಲಿ ರಾಷ್ಟ್ರೀಯ ಆದಾಯದಲ್ಲಿ ಈ ಕ್ಷೇತ್ರದ ಪಾಲು ಕ್ಷೀಣಿಸುತ್ತಲೇ ಇದೆ. ಕೃಷಿ ಕ್ಷೇತ್ರದಲ್ಲಿನ ಮತ್ತು ಗ್ರಾಮೀಣ ಪ್ರದೇಶದ ಹೆಚ್ಚುವರಿ ಶ್ರಮಿಕರನ್ನು ತನ್ನೆಡೆಗೆ ಸೆಳೆದುಕೊಳ್ಳುವಲ್ಲಿ ಔದ್ಯಮಿಕ ಕ್ಷೇತ್ರ ವಿಫಲವಾಗಿದೆ. ಉದಾರೀಕರಣ ಪ್ರಕ್ರಿಯೆಯ ಫಲವಾಗಿ ಗ್ರಾಮೀಣ ಪ್ರದೇಶದಿಂದ ಉದ್ಯೋಗವನ್ನರಸಿ ನಗರಗಳಿಗೆ ವಲಸೆ ಹೋಗುವವರ ಸಂಖ್ಯೆ ದ್ವಿಗುಣಗೊಳ್ಳುತ್ತಿರುವುದು ಸ್ಪಷ್ಟವಾಗಿದೆ. ಈ ಸನ್ನಿವೇಶದಲ್ಲಿ ರಾಷ್ಟ್ರದ ಸಮಗ್ರ ಉತ್ಪಾದನೆಯಲ್ಲಿ ಶೇ. ೬೫ರಷ್ಟು ಪಾಲಿರುವ ಅಸಂಘಟಿತ ಕ್ಷೇತ್ರವು ದೇಶದ ಒಟ್ಟು ಜನಸಂಖ್ಯೆಯ ಶೇ. ೩೫ರಷ್ಟು ಜನರಿಗೆ ಉದ್ಯೋಗ ದೊರಕಿಸುತ್ತದೆ. ಶೇ. ೯೩ರಷ್ಟು ದುಡಿಯುವ ವರ್ಗಗಳು ಈ ಕ್ಷೇತ್ರದಲ್ಲೇ ಕಂಡುಬರುತ್ತಾರೆ. ಭಾರತದಲ್ಲಿ ಅಸಂಘಟಿತ ಕ್ಷೇತ್ರವು ಸುಮಾರು ೪೦ ಕೋಟಿ ಕಾರ್ಮಿಕರನ್ನು ಹೊಂದಿದೆ. ಉದಾರೀಕರಣ ನೀತಿಯಿಂದ ಈ ಸಂಖ್ಯೆ ದಿನೇ ದಿನೇ ಹೆಚ್ಚಾಗುತ್ತಲೇ ಇದೆ. ಒಂದು ಅಂದಾಜಿನ ಪ್ರಕಾರ ಕೃಷಿ ಕ್ಷೇತ್ರದಲ್ಲಿ ೨೪ ಕೋಟಿ, ತಯಾರಿಕಾ ಕ್ಷೇತ್ರದಲ್ಲಿ ೪ ಕೋಟಿ, ವ್ಯಾಪಾರ ಮತ್ತು ಸೇವಾ ಕ್ಷೇತ್ರದಲ್ಲಿ ೪ ಕೋಟಿ, ಕಟ್ಟಡ ನಿರ್ಮಾಣ ಕ್ಷೇತ್ರದಲ್ಲಿ ೨ ಕೋಟಿ ಮತ್ತು ಇತರ ಕ್ಷೇತ್ರಗಳಲ್ಲಿ ೬ ಕೋಟಿ ಕಾರ್ಮಿಕರಿರುವುದನ್ನು ಎನ್.ಎಸ್.ಎಸ್.ಓ. ಸ್ಪಷ್ಟಪಡಿಸುತ್ತದೆ.

ಕಾರ್ಮಿಕರಿಗಾಗಿಯೇ ಇರುವ ಕನಿಷ್ಠ ಕೂಲಿ ಕಾಯ್ದೆ, ಸಮಾನ ವೇತನ ಕಾಯ್ದೆ, ಬೀಡಿ ಕಾರ್ಮಿಕರ ಕಾಯ್ದೆ, ಗುತ್ತಿಗೆ ಕಾರ್ಮಿಕರ ಕಾಯ್ದೆ ಮುಂತಾದ ಕಾಯ್ದೆಗಳು ಅಸಂಘಟಿತ ಕ್ಷೇತ್ರದ ಕಾರ್ಮಿಕರಿಗೆ ಯಾವುದೇ ರೀತಿಯಲ್ಲಿ ನೆರವಾಗುತ್ತಿಲ್ಲವೆಂದೇ ಹೇಳಬಹುದು. ಹಾಗಾಗಿ ಅಸಂಘಟಿತ ಕ್ಷೇತ್ರದ ಕಾರ್ಮಿಕರು ಯಾವುದೇ ಸಾಮಾಜಿಕ ಭದ್ರತೆ ಇಲ್ಲದೆ ಪರದಾಡುವ ಸ್ಥಿತಿ ಉಂಟಾಗಿದೆ.

ಪ್ರಸ್ತುತ ಮಸೂದೆಯನ್ನು ಈ ಸಂದರ್ಭದಲ್ಲಿ ತರುತ್ತಿರುವುದರ ಹಿಂದೆ ಕಾರ್ಮಿಕ ಸಂಘಟನೆಗಳ ಹೋರಾಟ ಮತ್ತು ಬೇಡಿಕೆಗಳು ಒಂದು ಕಾರಣವಾದರೆ, ಮತ್ತೊಂದೆಡೆ ಭಾರತೀಯ ಬೂರ್ಷ್ವಾಗಳಿಗೆ ಸ್ಪರ್ಧಾತ್ಮಕ ಜಾಗತಿಕ ಮಾರುಕಟ್ಟೆಯಲ್ಲಿ ಉಳಿಯಲು ಇದು ಅಗತ್ಯವಾಗಿದೆ. ಈ ಮೊದಲೇ ಹೇಳಿದಂತೆ ಉದಾರೀಕೃತ ಮಾರುಕಟ್ಟೆಯ ನೀತಿಗಳಿಗೆ ಪೂರಕವಾಗಿ ಶ್ರಮಿಕ ಮಾರುಕಟ್ಟೆಯನ್ನು ಸುಧಾರಣೆಗೊಳಪಡಿಸುವುದು, ಉಚ್ಚ ಮಟ್ಟದ ಕಾರ್ಯಕ್ಷಮತೆ ಮತ್ತು ಹೆಚ್ಚು ಉತ್ಪಾದನೆಗಾಗಿ ಶ್ರಮಿಕ ಮಾರುಕಟ್ಟೆಯ ಸುಧಾರಣೆ ಮಾಡುವುದು, ಅಸಂಘಟಿತ ಕ್ಷೇತ್ರದಲ್ಲಿ ಕೊಂಚ ಮಟ್ಟಿಗೆ ಸಂಘಟನಾ ಲಕ್ಷಣವನ್ನು ಹೊಂದಿರುವುದು, ಇಂದಿನ ಅಗತ್ಯತೆಯಾಗಿದೆಯಲ್ಲದೆ, ಬಂಡವಾಳದ ಬೆಳವಣಿಗೆಗೆ ಈ ಪ್ರಕ್ರಿಯೆ ಪೂರಕವಾಗಿರುತ್ತದೆ. ಬಂಡವಾಳವು ತನ್ನ ಮಾರುಕಟ್ಟೆಯನ್ನು ಈ ರೀತಿಯಲ್ಲೇ ಸ್ಥಿರಗೊಳಿಸಿ, ವೃದ್ಧಿಸುತ್ತದೆ.

ಸಾಮಾಜಿಕ ಭದ್ರತೆಯನ್ನೊದಗಿಸುವ ನೆಪದಲ್ಲಿ ಸರ್ಕಾರವು ಕಾರ್ಮಿಕರಿಂದಲೇ ಶುಲ್ಕ ವಸೂಲಿ ಮಾಡುವ ನೀತಿಯನ್ನು ಈ ಮಸೂದೆಯಲ್ಲಿ ಅಳವಡಿಸಿದೆ. ರಾಷ್ಟ್ರೀಯ ಸಲಹಾ ಸಮಿತಿ ಸಿದ್ಧಪಡಿಸಿರುವ ಕರಡು ಪ್ರತಿಯ ಅನ್ವಯ, ಪ್ರತಿ ಉದ್ಯಮಿಯೂ ಅಸಂಘಟಿತ ಕ್ಷೇತ್ರ ಕಾರ್ಮಿಕರ ಸಾಮಾಜಿಕ ಸುಭದ್ರತಾ ನಿಧಿಗೆ ಕಾಣಿಕೆ ನೀಡಬೇಕಾಗುತ್ತದೆ. ಆದರೆ ಉದ್ಯಮಿಯೊಡನೆ ಕಾರ್ಮಿಕರೂ ಕಾಣಿಕೆ ನೀಡಬೇಕಾಗುತ್ತದೆ. ಪ್ರತಿ ವರ್ಷ ಪ್ರತಿ ದಿನ ಪ್ರತಿಯೊಬ್ಬ ಉದ್ಯಮಿಯಿಂದ ಒಂದು ರೂ., ಕಾರ್ಮಿಕರಿಂದ ಒಂದು ರೂ. ಮತ್ತು ಸರ್ಕಾರದಿಂದ ಒಂದು ರೂ. ಸಂಗ್ರಹಿಸಿ ಒಂದು ನಿಧಿಯನ್ನು ಸ್ಥಾಪಿಸಲಾಗುತ್ತದೆ. ಇದನ್ನು ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ೩:೧ ಅನುಪಾತದಲ್ಲಿ ಹಂಚಿಕೊಳ್ಳುತ್ತವೆ. ಉದ್ಯಮಿಗಳನ್ನು-ಧಣಿಗಳನ್ನು ಗುರುತಿಸಲಾಗದ ಪಕ್ಷದಲ್ಲಿ ಆ ಪಾಲನ್ನು ಮತ್ತು ಬಡತನದ ರೇಖೆಯಿಂದ ಕೆಳಗಿನ ಕಾರ್ಮಿಕರ ಪಾಲನ್ನು ಸರ್ಕಾರವೇ ಭರಿಸುತ್ತದೆ. ಈ ಹೊಸ ನೀತಿಯಲ್ಲಿ ಕಂಡುಬರುವ ವಿಪರ್ಯಾಸವೆಂದರೆ, ಯಾವುದೇ ಉದ್ಯಮಿ ಕಾರ್ಮಿಕರ ಸಾಮಾಜಿಕ ಸುರಕ್ಷತೆಗೆ ಹೊಣೆಗಾರನಾಗಿರುವುದಿಲ್ಲ, ಬದಲಾಗಿ ಕಾರ್ಮಿಕರು ತಮ್ಮ ಸುಭದ್ರತೆಗೆ ತಾವೇ ಸುಂಕ ನೀಡಬೇಕಾಗಿದೆ.

ಪ್ರಸ್ತುತ ಮಸೂದೆಯಲ್ಲಿ ಅಸಂಘಟಿತ ಕ್ಷೇತ್ರದ ಕಾರ್ಮಿಕರನ್ನು ಗುರುತಿಸಲು ಈ ಮಾನದಂಡವನ್ನು ಉಪಯೋಗಿಸಲಾಗುತ್ತದೆ. ''ತನ್ನ ಸ್ವಇಚ್ಛೆಯಿಂದ, ಮನೆಯಲ್ಲೇ ಆಗಲೀ, ಸಾರ್ವಜನಿಕ ಕಾರ್ಯಕ್ಷೇತ್ರದಲ್ಲೇ ಆಗಲೀ, ಸ್ವಂತ ಉದ್ಯೋಗದಲ್ಲಾಗಲೀ, ಗುತ್ತಿಗೆದಾರರ ಮೂಲಕವಾಗಲೀ, ನೇರವಾಗಿಯಾಗಲೀ, ಕಾರ್ಮಿಕ ವಿಮೆ, ಭವಿಷ್ಯ ನಿಧಿ ಮುಂತಾದ ಯಾವುದೇ ಸವಲತ್ತುಗಳನ್ನು ಹೊಂದಿರದ, ಯಾವುದೇ ಪಿಂಚಣಿ ಸೌಲಭ್ಯ ಹೊಂದಿರದ, ಜೀವ ವಿಮಾ ಸೌಲಭ್ಯ ಹೊಂದಿರದ, ಕೂಲಿಗಾಗಿ ಅಥವಾ ನಿಗದಿತ ಸಂಬಳಕ್ಕಾಗಿ, ದುಡಿಯುವ ಯಾವುದೇ ವ್ಯಕ್ತಿಯನ್ನು ಅಸಂಘಟಿತ ಕಾರ್ಮಿಕ ಎಂದು ಪರಿಗಣಿಸಲಾಗುತ್ತದೆ.'' ಈ ನಿಟ್ಟಿನಲ್ಲಿ ಗಮನಿಸಬೇಕಾದ ಅಂಶವೆಂದರೆ ಹಲವಾರು ಅಪಾಯಕರ ಉದ್ದಿಮೆಗಳಲ್ಲಿ ಕೆಲಸಮಾಡುವ ದಿನಗೂಲಿ ನೌಕರರು ಕಾರ್ಮಿಕ ವಿಮಾ ಸೌಲಭ್ಯ ಪಡೆಯುತ್ತಿದ್ದರೂ, ಇತರ ಯಾವುದೇ ಸವಲತ್ತುಗಳನ್ನು ಹೊಂದಿರುವುದಿಲ್ಲ. ಆದರೆ ಪ್ರಸ್ತುತ ಮಸೂದೆಯಲ್ಲಿ ಎರಡೂ ಸೌಲಭ್ಯಗಳನ್ನು ಒಟ್ಟಿಗೆ ಸೇರಿಸಿರುವುದರಿಂದ ಲಕ್ಷಾಂತರ ಕಾರ್ಮಿಕರು ಈ ಯೋಜನೆಯಿಂದ ಹೊರಗುಳಿಯುವ ಸಾಧ್ಯತೆಗಳಿವೆ.

ಈ ಯೋಜನೆಯ ಅನುಷ್ಠಾನದ ಮೇಲ್ವಿಚಾರಣೆಗಾಗಿ ಸರ್ಕಾರ ಸ್ಥಾಪಿಸಲಿರುವ ರಾಷ್ಟ್ರೀಯ ಸಾಮಾಜಿಕ ಭದ್ರತಾ ಪ್ರಾಧಿಕಾರವನ್ನು ಕೆಲವು ಕಾರ್ಯನಿರ್ವಾಹಕ ಅಧಿಕಾರಿಗಳೂ ನಿರ್ವಹಿಸುತ್ತಾರೆ. ಆದರೆ ಕಾರ್ಮಿಕರ ಪ್ರತಿನಿಧಿಗಳನ್ನೊಳಗೊಂಡ ಮೇಲ್ವಿಚಾರಣಾ ಸಮಿತಿಗೆ ಸಲಹೆಗಳನ್ನು ನೀಡುವ ಸ್ವಾತಂತ್ರ್ಯವಿರುವುದೇ ಹೊರತು ಈ ಅಧಿಕಾರಿಗಳನ್ನು ನಿಯಂತ್ರಿಸುವ ಯಾವುದೇ ಅಧಿಕಾರವಿರುವುದಿಲ್ಲ. ಈ ಎರಡೂ ಕಛೇರಿಗಳ ನಡುವೆ ವ್ಯಾಜ್ಯ ಉದ್ಭವಿಸಿದಲ್ಲಿ ಅದನ್ನು ನಿವಾರಿಸಲು ಸರ್ಕಾರವು ಒಂದು

ವಿಶೇಷ ಸಮಿತಿಯನ್ನು ನೇಮಿಸಿದೆ. ಇಲ್ಲಿಯವರೆಗಿನ ಅನುಭವದ ಹಿನ್ನೆಲೆಯಲ್ಲಿ ಹೇಳುವುದಾದರೆ, ಕಾರ್ಮಿಕರ ಪ್ರತಿನಿಧಿಗಳನ್ನೊಳಗೊಂಡ ಸಮಿತಿಯ ಸ್ಥಾನ ಕೇವಲ ಅಲಂಕಾರಿಕವಾಗಿರುವುದು ಸ್ಪಷ್ಟವಾಗುತ್ತದೆ. ವಿಪರ್ಯಾಸವೆಂದರೆ ಭದ್ರತಾ ಪ್ರಾಧಿಕಾರದ ವಿರುದ್ಧ ಕಾರ್ಮಿಕರು ಯಾವುದೇ ನ್ಯಾಯಾಲಯದ ಮೊರೆಹೋಗುವಂತಿಲ್ಲ. ಈ ಕೆಲವು ತಾರತಮ್ಯಗಳನ್ನು ನಿವಾರಿಸದಿದ್ದರೆ ಇಡೀ ಮಸೂದೆಯೇ ಶಿಥಿಲವಾಗುವ ಸಾಧ್ಯತೆಗಳಿವೆ.

ಮೈಸೂರು **ನಾ. ದಿವಾಕರ**

### ಜಾತಿ ಕುರಿತು ಒಂದಿಷ್ಟು ಸಾಲುಗಳು

ಶತಶತಮಾನಗಳಿಂದ ಬೆಳೆದುಬಂದ ಜಾತಿ ವ್ಯವಸ್ಥೆ ಈ ದೇಶದಲ್ಲಿ ಬಹುದೊಡ್ಡ ಬಿಕ್ಕಟ್ಟುಗಳನ್ನು ಸೃಷ್ಟಿಮಾಡಿದೆ. ಇದು ಆಧುನಿಕ ಯುಗ, 'ಇಲ್ಲಿ ಜಾತಿ ಅಷ್ಟೊಂದು ಮುಖ್ಯವಾಗಲಾರದು' ಎಂದು ನಾವು ಭಾವಿಸುತ್ತೇವೆ. ಇಂದಿನ ಸುಶಿಕ್ಷಿತ ಸಮಾಜದಲ್ಲಿಯೇ ಜಾತಿ ಹೆಚ್ಚು ಮನೆಮಾಡಿಕೊಂಡಿದೆ. ರಾಜಕಾರಣವಂತೂ ಜಾತಿಗಳನ್ನು ವೋಟ್ ಬ್ಯಾಂಕ್‌ಗಳನ್ನಾಗಿ ಪರಿವರ್ತಿಸಿಕೊಂಡಿದೆ. ಚುನಾವಣೆ ಸಂದರ್ಭದಲ್ಲಿಯೇ ಈ ಜಾತಿ ಲೆಕ್ಕಾಚಾರ ಪ್ರಾರಂಭವಾಗುತ್ತದೆ. ಜಾತಿಯೊಳಗೆ ಇನ್ನೊಂದು ಜಾತಿ, ಪಂಗಡ, ಉಪಪಂಗಡಗಳು ನಮ್ಮನ್ನು ಬೆಚ್ಚಿ ಬೀಳಿಸುವಷ್ಟು ಭಯಾನಕವಾಗಿವೆ. ಬ್ರಾಹ್ಮಣರಲ್ಲಿ ಕಡಿಮೆ ಬ್ರಾಹ್ಮಣರಿದ್ದಾರೆ; ಲಿಂಗಾಯುತರಲ್ಲಿ ಕಡಿಮೆ ಲಿಂಗಾಯುತರಿದ್ದಾರೆ; ದಲಿತರಲ್ಲಿ ಎಡಗೈ, ಬಲಗೈ ಇವೆ, ಮುಸ್ಲಿಂ ಪಂಗಡದಲ್ಲಿ ಹಳ್ಳಿಗಾಡಿನ ಪಿಂಜಾರರಿದ್ದಾರೆ, ಪಠಾಣರಿದ್ದಾರೆ. ಕೆಲವು ಪಂಗಡಗಳು ಮೇಲ್ನೋಟಕ್ಕೆ ಒಂದೇ ಸಮುದಾಯದಂತೆ ಕಾಣಿಸುತ್ತವೆ. ಅವಕಾಶ ಕಸಿದುಕೊಳ್ಳುವ ಸಂದರ್ಭದಲ್ಲಿ ಮಾತ್ರ ಒಂದು ಇನ್ನೊಂದರ ಮೇಲೆ ಏರಿಹೋಗುತ್ತವೆ. ಕುಳಿತು ಕೆಲಸ ಮಾಡುವ ಕಛೇರಿಗಳಲ್ಲಿ ನಾಲ್ಕು ಟೇಬಲ್ಲುಗಳ ಮಧ್ಯೆಯೇ ಅಂತರವಿರುತ್ತದೆ. ಎರಡು ಟೇಬಲ್ಲುಗಳು ಒಂದು ಕಡೆ ಇದ್ದರೆ ಇನ್ನೆರಡು ಪ್ರತ್ಯೇಕವಾಗಿ ಚಹಾ ಕುಡಿಯಲು ಹೋಗುತ್ತವೆ. ಬೆಂಗಳೂರಿನಂತಹ ಹೈಟೆಕ್ ಸಿಟಿಯಲ್ಲೂ ಇದು ಸಾಮಾನ್ಯ ನೋಟ. ಹೆಸರನ್ನು ಊಹಿಸಿಕೊಳ್ಳುವವರು ಕೆಲವರು, ಕೆಲವರು ಕೊರಳನ್ನು ತಗ್ಗಿ ಬಗ್ಗಿ ನೋಡುತ್ತಾರೆ. ಪಕ್ಕದವನನ್ನು ಜಾತಿ ಕೇಳಿ ವಿಚಾರಿಸಿಯೇ ಕೆಲವರು ಮಾತಿಗಿಳಿಯುತ್ತಾರೆ. ರಾಜಕಾರಣಿಗಳಂತೂ ಜಾತಿಯ ಸಮಾವೇಶದಲ್ಲಿ ಪಾಲ್ಗೊಳ್ಳಲು ತುದಿಗಾಲಮೇಲೆ ನಿಂತಿರುತ್ತಾರೆ. ಮಾನಸಿಕ ಹಿಂಸೆ, ಕೊಲೆ, ಕೆಲವು ಸಾರಿ ಜಾತಿಯ ಕಾರಣಕ್ಕಾಗಿಯೇ ಆಗುತ್ತವೆ. ಗಮನಿಸಬೇಕಾದ ಸಂಗತಿ ಎಂದರೆ ತಾನು ಹುಟ್ಟಿದ ಜಾತಿಯೇ ವ್ಯಕ್ತಿಯ ಬೆಳವಣಿಗೆಯ ಮೇಲೆ ಪರಿಣಾಮ ಬೀರುತ್ತದೆ. ಗಾಂಧೀಜಿಯ 'ಸಮಷ್ಟಿ ಪ್ರಜ್ಞೆ'ಯನ್ನು ಸಾಧಿಸಲು ವ್ಯಕ್ತಿ ಬಿಕ್ಕಟ್ಟುಗಳ ಮಧ್ಯೆ ಬದುಕಬೇಕು. ಒಂಟಿಯಾಗಿ ಹೋರಾಡಬೇಕು. ಲಂಕೇಶ್ ಒಂದು ಕಡೆ ಹೇಳುತ್ತಾರೆ : ''ಸೂಕ್ಷ್ಮಮತಿಯ ಮನುಷ್ಯ ತಾನು ಕಂಡ ತಾರತಮ್ಯ ತನಗೆ ಬೇಡವಾಗಿದ್ದ ವಿಶೇಷ ರಕ್ಷಣೆಯಿಂದ ಕಿರಿಕಿರಿ ಅವಮಾನ ಅನುಭವಿಸಿ ಮಾತನಾಡುತ್ತಾನೆ. ಮಗು ತನ್ನ ಎಳೆ ವಯಸ್ಸಿನಲ್ಲಿ ಪಡೆದ ಅವಮಾನ ಕೀಳರಿಮೆ ಆತನ ವ್ಯಕ್ತಿತ್ವದ ಭಾಗವಾಗುತ್ತದೆ. ಆತನ ಬೆಳವಣಿಗೆಗೆ ತೊಂದರೆ ಕೊಡುತ್ತದೆ.'' ಹುಟ್ಟುವಾಗ ಯಾರೂ ಕೂಡ ನಮ್ಮನ್ನು 'ಇಂಥ ಜಾತಿಯಲ್ಲಿ ಹುಟ್ಟಿಸು' ಎಂದು ಅರ್ಜಿ ಹಾಕಿ ಹುಟ್ಟಿರುವುದಿಲ್ಲ. ಅನಿವಾರ್ಯವಾಗಿ ನಾವು ಒಂದು ಜಾತಿಯಲ್ಲಿ ಹುಟ್ಟುತ್ತೇವೆ. ವಿಶ್ವಮಾನವರಾಗಲು ನಾವು ತುಂಬ ಪ್ರಯಾಸಪಡಬೇಕಾಗುತ್ತದೆ. ಸಾಮಾಜಿಕ ನ್ಯಾಯ, ಅಂಬೇಡ್ಕರ್ ಅವರಂತಹ ಹೋರಾಟಗಾರರ ಛಲ, ಗಾಂಧೀಜಿ ಅವರ ಹಠ ಯಾವುದೂ ಜಾತಿವ್ಯವಸ್ಥೆಯನ್ನು ಈ ದೇಶದಲ್ಲಿ ಸಂಪೂರ್ಣವಾಗಿ ಹೋಗಲಾಡಿಸಲಿಕ್ಕೆ ಸಾಧ್ಯವಾಗಿಲ್ಲ. ಹೆಚ್ಚು ಕಡಿಮೆ ಭಾರತದ ಬಹುತೇಕ ರಾಜ್ಯಗಳಲ್ಲಿ ಇಂಥದ್ದೇ ಸ್ಥಿತಿ ಇದೆ. ಆಗಾಗ ಸೂಫಿಗಳು, ಶರಣರು, ಸಂತರು, ದಾಸರು, ಅನುಭಾವಿಗಳು, ಇಂಥದ್ದೊಂದು ವ್ಯವಸ್ಥೆಗೆ ಮುಖಾಮುಖಿಯಾದರು. ಸಮಾಜದಲ್ಲಿ ಇದರ ಪ್ರಭಾವವೂ ತುಂಬ ಆಗಿದೆ. ಚರ್ಚೆ, ಸಂವಾದ, ಸಾಹಿತ್ಯ ಹಾಗೂ ಇನ್ನಿತರ ಸಾಂಸ್ಕೃತಿಕ ನೆಲೆಗಳಲ್ಲಿ ಇದನ್ನು ಗುರುತಿಸುವುದೂ ನಡೆಯುತ್ತಿದೆ. ಆದರೆ ಕೆಲವು ಸಂದರ್ಭಗಳಲ್ಲಿ ಈ ನೆಲೆಗಳು ಕಣ್ಮರೆಯಾಗುವ ಸಂದರ್ಭಗಳೂ ನಡೆಯುತ್ತಿವೆ. ಇಂಥ ಚಿಂತನೆಗಳ ಪುನರ್ ಸೃಷ್ಟಿಯ ಬಗ್ಗೆ ಮಾತನಾಡುತ್ತಿರುವಾಗಲೇ ಇಡೀ ಸಮೂಹವೇ ಮಾಟ, ಮಂತ್ರ ಮತ್ತು ಬೂದಿ ಬಾಬಾಗಳ ಮೊರೆಹೋಗುವುದನ್ನು ಕಾಣುತ್ತೇವೆ.

ಹುಚ್ಚರ ಹಾಗೆ ಕಾಣುವ ತಮ್ಮೂರಿನ ಅನುಭಾವಿಯೊಬ್ಬ ಎಷ್ಟು ದೊಡ್ಡವ ಎನ್ನುವುದನ್ನು ತಿಳಿದುಕೊಳ್ಳದೇ ಹೈದರಾಬಾದ್ ಕರ್ನಾಟಕದ ಜನ ಪಕ್ಕದೂರಿನ ಸ್ವಾಮಿಗೆ ದೀಡ್ ನಮಸ್ಕಾರ ಹಾಕಲು ತಂಡೋಪತಂಡವಾಗಿ ಹೋಗುತ್ತಾರೆ. ಅನುಭಾವಿ ಬದುಕಿಹೋದ ಹಾಳು ಕಟ್ಟೆಯ ಮೇಲೆ ನಾಯಿಗೆ ಆರಾಮ ನಿದ್ದೆಹತ್ತಿರುತ್ತದೆ. ಶರಣರನ್ನು ಈಗ ಹೆಚ್ಚು ಕಡಿಮೆ ಲಿಂಗಾಯತರನ್ನಾಗಿ ಮಾಡಿಬಿಟ್ಟಿದ್ದಾರೆ. ದಾಸರು ಬ್ರಾಹ್ಮಣರಾಗಿದ್ದಾರೆ. ಸೂಫಿಗಳೆಂದರೆ ಯಾವುದೋ ಊರಿನ ಬಾಬಾಗಳಿರಬೇಕು ಬಿಡು ಎನ್ನುತ್ತಾರೆ. ಬದಲಾಗುತ್ತಿರುವ ವಾತಾವರಣದಲ್ಲಿ ಈ ನೆಲೆಗಳನ್ನು ನೆನಪಿಸಿಕೊಳ್ಳುವ ದರ್ದು ಯಾರಿಗೂ ಇಲ್ಲ.

ಕಾಲೇಜು ಹುಡುಗರಲ್ಲಿ ಈ ಜಾತಿಪ್ರಜ್ಞೆ ಇರುವುದಿಲ್ಲ. ಗಮನಿಸಬೇಕಾದ ಸಂಗತಿ ಎಂದರೆ ಪಿ.ಜಿ. ಓದುವುದಕ್ಕೆ ಹೋದ ತಕ್ಷಣವೇ ಯುನಿವರ್ಸಿಟಿಯ ಗಾಳಿ ಅವನಿಗೆ ತನ್ನ ಜಾತಿಯ ಬಗ್ಗೆ ನೆನಪು ಮಾಡಿಕೊಡುತ್ತದೆ. ಕೆಲವು ಪ್ರಾಧ್ಯಾಪಕರು, 'ಜಾತಿ, ಉಪಪಂಗಡ', 'ಬೀಗತನ ಎಲ್ಲಿ ಮಾಡೀರಿ?' ಎಂದು ಕೇಳುವಷ್ಟರ ಮಟ್ಟಿಗೆ ವಿಶ್ವವಿದ್ಯಾಲಯಗಳನ್ನು ಇಂದಿಗೂ ತಂಪಾದ ವಾತಾವರಣದಲ್ಲಿಟ್ಟಿದ್ದಾರೆ.

ಹಳ್ಳಿಗಾಡಿನಲ್ಲಿ ವಾಸಿಸುತ್ತಿರುವ ತೀರ ಕೆಳವರ್ಗದ ಜಾತಿಗಳಲ್ಲಿ ಜಾತಿಪ್ರಜ್ಞೆ ತುಂಬ ಕಡಿಮೆ. ದುಡಿದು ತಿನ್ನುವ ಜನಕ್ಕೆ ದುಡಿಯುವದರ ಕಡೆಗೆ ಲಕ್ಷ್ಯ ಹೆಚ್ಚು. ಅವರು ತಾವು ಬೇರೆ ಬೇರೆ ಎಂದು ಭಾವಿಸಿರುವುದೇ ಇಲ್ಲ. ಹೇಳಿಕೊಳ್ಳಲಿಕ್ಕೆ ಒಂದು ಜಾತಿ ಮಾತ್ರ ಇರುತ್ತದೆ, ಅಷ್ಟೆ. ಊರಲ್ಲಿ ಅಥವಾ ಓಣಿಯಲ್ಲಿ ನಾಲ್ಕೆಂಟು ಜನ ಸುಶಿಕ್ಷಿತರಾದರೋ ಅಲ್ಲಿಯೂ ಶುರುವಾಗುತ್ತದೆ ಈ ದಾಳಿ. ತಮ್ಮವನು ಎನ್ನುವ ಕಾರಣಕ್ಕಾಗಿಯೇ ಕೆಳಗಿನ ಓಣಿಯವನು ಮೇಲಿನ ಓಣಿಯ ಮನೆಗೆ ಬರುತ್ತಾನೆ. ''ಯಾಕೆ ಬಂದಿದ್ದ?'' ಎಂದು ಕೇಳಿದರೆ ''ಅವನು ನಮ್ಮವನು'' ಎನ್ನುವ ಉತ್ತರ ಬರುತ್ತದೆ. ಬದಲಾಗುತ್ತಿರುವ ರಾಜಕೀಯದ ಗಾಳಿಯೂ ಈಗ ಹಳ್ಳಿಗಳ ಪ್ರವೇಶವಾಗಿ ದ್ವೇಷ ಹೊಗೆಯಾಡಲು ಕಾರಣವಾಗಿದೆ.

ದಲಿತ ಮಹಿಳೆಯ ಮೇಲೆ ಅತ್ಯಾಚಾರ, ದಲಿತರಿಗೆ ಎತ್ತಿ ನೀರು ಹಾಕುವುದು, ದಲಿತರನ್ನು ಜೀವಂತವಾಗಿ ಸುಡುವ ಪ್ರಕರಣಗಳು ಇವತ್ತಿಗೂ ಸಾಮಾನ್ಯವಾಗಿಬಿಟ್ಟಿವೆ. ದೌರ್ಜನ್ಯ ತಡೆ ಕಾಯಿದೆ ಅನ್ವಯ ಅಟ್ರಾಸಿಟಿ ಕೇಸ್ ಹಾಕುವ ಹಕ್ಕು ಹೊಂದಿರುವ ದಲಿತ ಸಮುದಾಯವೇ ಕೆಲ ಸಂದರ್ಭಗಳಲ್ಲಿ ಅಸಹಾಯಕವಾಗುತ್ತದೆ. ಇನ್ನುಳಿದ ಕೆಳಜಾತಿಗಳ ಸ್ಥಿತಿ ಹೇಗಿರಲಿಕ್ಕಿಲ್ಲ? ಯಾರೂ ಯಾವುದನ್ನೂ ಕುರಿತು ಸಾರ್ವಜನಿಕವಾಗಿ ಮಾತನಾಡದೆ ಇರುವಂಥ ಸ್ಥಿತಿ ಇವತ್ತು ನಿರ್ಮಾಣವಾಗಿದೆ. ಒಂದು ಊರಿನ ಒಬ್ಬ ಸಾಮಾನ್ಯ ದಲಿತನಿಗೆ ಅನ್ಯಾಯವಾದಾಗ ರಾಜಕಾರಣಿಗಳ ಹಿಂದೆ ಓಡಾಡುತ್ತಿದ್ದ ಮುಖಂಡ ಆ ಸಾಮಾನ್ಯ ದಲಿತನ ಪರವಾಗಿ ನಿಲ್ಲುವುದಿಲ್ಲ. ನಿಂತರೆ ''ನಾಳೆ ನೀನು ಮುನಿಸಿಪಾಲ್ಟಿ ಮೆಂಬರ್ ಆಗೋ ಅವಕಾಶ ಇದೆ, ಅದಕ್ಕೆ ಕಲ್ಲು ಬೀಳುತ್ತೆ. ನಿನ್ನ ಪಾಡಿಗೆ ನೀನಿರು'' ಎಂಬ ಉಪದೇಶವನ್ನು ಆ ದಲಿತ ರಾಜಕಾರಣಿಗೆ ಹೇಳಲಾಗುತ್ತದೆ.

ಕಂಬಾಲಪಲ್ಲಿಯ ಘಟನೆಯನ್ನೇ ನೋಡಿ. ಅಲ್ಲಿ ದಲಿತರನ್ನು ಕೂಡಿಹಾಕಿ ಜೀವಂತವಾಗಿ ಸುಟ್ಟರು. ಈಗ ತೀರ್ಪು ಬಂದಿದೆ. ತಮ್ಮ ಸಂಬಂಧಿಕರನ್ನು ಜೀವಂತವಾಗಿ ಸುಟ್ಟ ದೃಶ್ಯ ನೋಡಿದವರೇ 'ನಾವು ನೋಡಿಯೇ ಇಲ್ಲ' ಎಂದು ನ್ಯಾಯಾಲಯದಲ್ಲಿ ಸಾಕ್ಷಿ ಹೇಳಿದರು. ತುಂಬಾ ನೋವಿನ ಸಂಗತಿ ಎಂದರೆ, ಬೆಂಕಿಯಲ್ಲಿ ಸುಡುವಾಗ ಅಪ್ಪ ಚೀರುವುದನ್ನು ನೋಡಿದ ಮಗ, 'ನಾನು ಅವತ್ತು ಅಲ್ಲಿರಲಿಲ್ಲ' ಎಂದು ನ್ಯಾಯಾಲಯದಲ್ಲಿ ಸಾಕ್ಷಿ ಹೇಳುತ್ತಾನೆ. ಇಂಥ ಘಟನೆ ನಮ್ಮ ಇಡೀ ಸಮಾಜದ ವಿಫಲತೆಯನ್ನು ಸಾರಿ ಹೇಳುತ್ತದೆ. ಶಿವಮೊಗ್ಗದ ಬಂಡಾಯ ಸಾಹಿತ್ಯ ಸಮ್ಮೇಳನದಲ್ಲಿ ಕವಿ ಸುಬ್ಬು ಹೊಲೆಯಾರ್ ದಲಿತರಿಗೆ ಇತ್ತೀಚೆಗೆ ಹೇಲು ತಿನ್ನಿಸಿದ ಪ್ರಸಂಗವನ್ನು ಪ್ರಸ್ತಾಪಿಸಿ ಒಂದು ಪ್ರಶ್ನೆ ಹಾಕಿದರು. ದಲಿತರಿಗೆ ಹೇಲು ತಿನ್ನಿಸಿದ ಈ ಪ್ರಕರಣದ ಬಗ್ಗೆ ಒಬ್ಬನೇ ಒಬ್ಬ ಕವಿಯೂ ಒಂದು ಕವಿತೆಯನ್ನು ಯಾಕೆ ಬರೆಯಲಿಲ್ಲ? ಅದು ನಮ್ಮನ್ನು ಯಾಕೆ ಕಾಡುವುದಿಲ್ಲ? ಇಂಥ ಸಂದರ್ಭಗಳು ನಮ್ಮನ್ನು ತಟ್ಟದೇ ಹೋದರೆ ಇಡೀ ಸಾಂಸ್ಕೃತಿಕ ಲೋಕವನ್ನೇ ಅನುಮಾನದಿಂದ ನೋಡಬೇಕಾಗುತ್ತದೆ ಎಂದರು. ಬಸವಲಿಂಗಪ್ಪನವರ ಬೂಸಾ ಪ್ರಕರಣ ಆಗಾಗ ನಮ್ಮಲ್ಲಿ ಚರ್ಚೆಗೆ ಬರುವುದು ಇಂಥ ಸಂದರ್ಭದಲ್ಲಿಯೇ. ಇಂಥ ಒಂದೊಂದು ಪ್ರಕರಣದ ನಡುವೆ ಸಮಾಜದ ವಕ್ರತೆ ಮನೆ ಮಾಡಿಕೊಂಡಿರುತ್ತದೆ ಎಂಬುದು ಸತ್ಯ.

''ನಾನು ಉತ್ತಮ ಕುಲದಲ್ಲಿ ಹುಟ್ಟಿದೆನೆಂಬ ಕಷ್ಟತನದ ಹೊರೆಯ ಹೊರಿಸದಿರಯ್ಯಾ'' ಎನ್ನುತ್ತಾನೆ ಬಸವಣ್ಣ. ನಾವು 'ಮೇಲ್ವರ್ಗದ ಜಾತಿಗಳ ಪಾಪಪ್ರಜ್ಞೆ' ಎನ್ನುವ ಸಾಲನ್ನು ಆಗಾಗ ಬಳಸುತ್ತೇವೆ. ಮೇಲ್ವರ್ಗದ ಜಾತಿಗಳ ಪಾಪಪ್ರಜ್ಞೆ ಬಸವಣ್ಣನ ಕಾಲಕ್ಕೆ ತುಂಬ ಚೆನ್ನಾಗಿ ಕೆಲಸಮಾಡಿತು. ಈ ಪ್ರಜ್ಞೆಯ ಅರಿವನ್ನು ಹೆಚ್ಚಿಸುವ ಕೆಲಸ ಈಗ ಸಾಕಷ್ಟು ಆಗಬೇಕಿದೆ.

ಎಷ್ಟೇ ಚಳುವಳಿಗಳು ನಡೆದರೂ ತಾರತಮ್ಯ ಭಾವನೆ ಅಷ್ಟು ಸುಲಭವಾಗಿ ಹೋಗುವಂಥದ್ದಲ್ಲ. ಇದಕ್ಕೆ ಸಾವಿರ-ಸಾವಿರ ವರ್ಷಗಳ ಇತಿಹಾಸವಿದೆ. ಉದ್ದೇಶಪೂರ್ವಕವಾಗಿಯೇ ಈ ತಾರತಮ್ಯ ಭಾವನೆ ಬೆಳೆದುಬಂದಿದೆ. ಸಂಕೇತಗಳನ್ನು ಮೀರಿ ಆಲೋಚಿಸುವುದು, ವ್ಯಕ್ತಿ ನೆಲೆಯಿಂದ ಮನುಷ್ಯನನ್ನು ಅರ್ಥಮಾಡಿಕೊಳ್ಳುವುದು ಈ ಸಂದರ್ಭದಲ್ಲಿ ಹೆಚ್ಚು ಸೂಕ್ತ.

ಮಂಡ್ಯ **ಬಸವರಾಜ ಹೂಗಾರ**

*ನೇ ಪುಟದಿಂದ (ಈ ತಿಂಗಳು)*

ಅದ್ವಾನಿಯವರು ಅದನ್ನು ತಿರಸ್ಕರಿಸಿರಬಹುದೇ ? ಇಂಥದೇ ಯಾವುದಾದರೂ ಒಪ್ಪಂದವೊಂದು ಭಾರತ ಮತ್ತು ಚೀಣಾ ನಡುವೆ ನಡೆಯುವುದಿದೆಯೆಂದು ಊಹಿಸಿಕೊಳ್ಳೋಣ. ಚೀಣಾದ ಸಚಿವ ಹೋಗಲಿ, ಆ ದೇಶದ ರಾಯಭಾರಿಯೇನಾದರೂ ಭಾರತ ಕಮ್ಯುನಿಸ್ಟ್ ಪಕ್ಷದ ಕೇಂದ್ರ ಕಚೇರಿಯಾದ ಅಜಯ ಭವನಕ್ಕೋ ಮಾರ್ಕ್ಸ್‌ವಾದಿ ಕಮ್ಯುನಿಸ್ಟ್ ಪಕ್ಷದ ಎ.ಕೆ.ಜಿ. ಭವನಕ್ಕೋ ಭೇಟಿ ನೀಡಿದ್ದನೆಂದಿಟ್ಟುಕೊಳ್ಳೋಣ. ಆಗ ನಮ್ಮ ''ದೇಶಭಕ್ತ'' ಮಾಧ್ಯಮಗಳು ಏನೆಲ್ಲಾ ಬೊಬ್ಬೆ ಹಾಕಿಬಿಡುತ್ತಿದ್ದವು! ಅದೇ ಅಮೆರಿಕಾದ ಒಬ್ಬ ಸಚಿವ ವಿರೋಧ ಪಕ್ಷದ ನಾಯಕರನ್ನು ಅವರ ಕಚೇರಿಯಲ್ಲಿ ಭೇಟಿಯಾಗುವ ಬದಲು ಮನೆಗೇ ನುಗ್ಗುತ್ತಾನೆ ಮತ್ತು ಮಾಧ್ಯಮಗಳು ತುಟಿಪಿಟಕ್ಕೆನ್ನುವುದಿಲ್ಲ. ಅಮೆರಿಕಾದ ಕೈಂಕರ್ಯವೆಂದರೆ ಅದಲ್ಲವೆ ? ಅಮೆರಿಕಾ ಏಕಿಷ್ಟು ಕಾತುರವಾಗಿದೆಯೆಂದು ಪ್ರಶ್ನೆಯನ್ನಾದರೂ ಹಾಕಿಕೊಳ್ಳಬಹುದಿತ್ತು. ಅದನ್ನು ಮಾಧ್ಯಮಗಳು ಮಾಡಲಿಲ್ಲ, ಈಚೆಗೆ ಹೇಳಿಕೆ ನೀಡಿದ ಪ್ರಖ್ಯಾತ ವಿಜ್ಞಾನಿಗಳು ಮತ್ತಿತರರ ಸಮೂಹವೂ ಮಾಡಲಿಲ್ಲ. ಈ ಮಧ್ಯೆ ಎಡಪಕ್ಷಗಳು ನಿಧಾನವಾಗಿ ಒಪ್ಪಂದದ ಅಂಗೀಕಾರದತ್ತ ಸರ್ಕಾರಕ್ಕೆ ನೆರವು ನೀಡುತ್ತಿವೆಯೋ ಎಂಬ ಅನುಮಾನಕ್ಕೆ ಆಸ್ಪದವಿದೆ. ಸರ್ಕಾರವು ಅಂತರರಾಷ್ಟ್ರೀಯ ಪರಮಾಣು ಇಂಧನ ಆಯೋಗದ (ಐ.ಎ.ಇ.ಎ.) ಜೊತೆ ಸಂಧಾನ ನಡೆಸಲು ಅಡ್ಡಿಯಿಲ್ಲ, ಆದರೆ ಸಹಿ ಹಾಕಬಾರದು ಎಂಬ ಮಾತನ್ನು ಎಡಪಕ್ಷಗಳು ಆಡಿವೆ. ಒಪ್ಪಂದಕ್ಕೆ ಸಹಿ ಹಾಕದಿರುವಾಗ ನಿಮ್ಮ ಜೊತೆ ಚರ್ಚೆಗಿಳಿದು ಕಾಲಹರಣ ಮಾಡಲು ನಾವು ಸಿದ್ಧರಿಲ್ಲವೆಂದು ಐ.ಎ.ಇ.ಎ. ಹೇಳಬೇಕು. ಆದರೆ ಹೇಳದೆಯೂ ಇರಬಹುದು. ಹೀಗೇ ಹೆಜ್ಜೆಗಳನ್ನು ಹಾಕುತ್ತಾ ಕಡೆಗೆ ಒಪ್ಪಂದವನ್ನು ಜಾರಿಗೊಳಿಸುವ ಸಾಧ್ಯತೆಯೂ ಇರುತ್ತದೆ. ನಾವು ಎಚ್ಚರದಿಂದಿರಬೇಕಾದ ತುರ್ತು ಅಗತ್ಯವಿದೆ.

* * *

ಕಡೆಗೂ (ಕೆಲದಿನಗಳ ಮಟ್ಟಿಗಾದರೂ ?) ಮಾನ್ಯ ಯಡಿಯೂರಪ್ಪನವರು ಮುಖ್ಯಮಂತ್ರಿಗಳಾಗಿ ಅಧಿಕಾರ ಸ್ವೀಕರಿಸಿದರು. ಅವರ ಸಿಂಹಾಸನಕ್ಕೆ ಅಭಿಷೇಕ ಮಾಡಿ ಕುಳಿತಿದ್ದರಾದ್ದರಿಂದ ಚಿರವಾಗಿ ಅವರು ಅಲ್ಲಿಯೇ ಉಳಿಯಬಹುದಿತ್ತು; ಆದರೆ ಹಾಲು-ನೀರು ಬಿದ್ದು ಸಿಂಹಾಸನ ಒದ್ದೆಯಾಗಿದೆ. ಅದರ ಮೇಲೆ ಬಹುಕಾಲ ಕೂಡುವುದು ಅನಾನುಕೂಲ. ಏಕೆಂದರೆ ಅವರ ಬಟ್ಟೆಯೂ ಒದ್ದೆಯಾಗಿಬಿಡುತ್ತದೆ. ಒದ್ದೆಗೆ ಏನೇನೋ ಅರ್ಥವನ್ನು ಲಗತ್ತಿಸಿದರೆ ಮುಜುಗರವಾದೀತು. ಸನ್ಮಾನ್ಯ ದೇವೇಗೌಡರ ಸಾರಥ್ಯದಲ್ಲಿ ರಾಜ್ಯದ ಅಭಿವೃದ್ಧಿಗಾಗಿ ತಮ್ಮನ್ನು ಮುಡಿಪಾಗಿಟ್ಟುಕೊಂಡಿರುವ ಯಡಿಯೂರಪ್ಪನವರು ಯಾವುದರ ಅಭಿವೃದ್ಧಿ ಕರುಣಿಸುತ್ತಾರೋ ಕಾದು ನೋಡಬೇಕಾಗಿದೆ. ಅವರ ಹೋಮಗಳ ಭರಾಟೆ ನೋಡಿದರೆ ಬಾಬಾಬುಡನ್ ಗಿರಿ ಆಗಲೇ ಕುದಿಯುತ್ತಿರಬೇಕು ಎನಿಸುತ್ತದೆ. ಅವರು ಹೆಸರನ್ನು ಬದಲಾಯಿಸಿಕೊಂಡಿರುವ ಪರಿಯು ಅವರಿಗೆ ಅವಮಾನಕರವಾದ್ದು. ಅದೂ ತಿಳಿಯದಂತಹ ಮೌಢ್ಯ ಅವರನ್ನಾವರಿಸಿದೆ. ಐದು ಅಕ್ಷರಗಳ ಬದಲಾಗಿ ನಾಲ್ಕು ಅಕ್ಷರಗಳಿಗೆ ಹೆಸರನ್ನು ಸಂಕುಚಿತಗೊಳಿಸಿಕೊಂಡು ತಮ್ಮ ಬೌದ್ಧಿಕ ವ್ಯಕ್ತಿತ್ವವನ್ನು ಸಂಕುಚಿತಗೊಳಿಸಿಕೊಂಡಿದ್ದಾರೆ. ಶ್ರೇಷ್ಠಕವಿ ಬೇಂದ್ರೆಯವರು ಇಲ್ಲದಿದ್ದಾಗ ಯಡಿಯೂರಪ್ಪನವರು ಸಂಖ್ಯಾಶಾಸ್ತ್ರಕ್ಕೆ ಉತ್ತರಾಧಿಕಾರಿಗಳಾಗುತ್ತಿರುವುದನ್ನು ಕಂಡು ವಾಮನ ಬೇಂದ್ರೆಯವರು ಬೆಚ್ಚಿಬೀಳಬೇಕು. ಯಡ್ಯೂರಪ್ಪ ಎಂಬ ನಾಲ್ಕಕ್ಷರದ ಹೆಸರಿನಲ್ಲಿ ಏಳು ಮಾತ್ರೆಗಳಿವೆ. ಅಷ್ಟೇ ಮಾತ್ರೆಗಳು ಯಡಿಯೂರಪ್ಪ ಎಂಬುದರಲ್ಲೂ ಇದ್ದುವು. ನಾಲ್ಕಕ್ಷರಗಳಲ್ಲಿ ಆರು ಮಾತ್ರೆಗಳು ಬೇಕಾಗಿದ್ದಲ್ಲಿ ಅವರು ತಮ್ಮ ಹೆಸರನ್ನು ಅನ್ವರ್ಥಕವಾಗಿ ''ಯಡ್ಡಿಚೆಡ್ಡಿ'' ಎಂದಿಟ್ಟುಕೊಳ್ಳಬೇಕಾಗಿತ್ತು. ಇವರೆಷ್ಟು ಮಾತ್ರೆಗಳ ಹೆಸರನ್ನಿಟ್ಟುಕೊಂಡರೂ ಇನ್ನೋರ್ವ ಸಾಧು-ಮುನಿ-ಯಜ್ಞ ಪರಿಣತ ಮಾಜಿ ಪ್ರಧಾನ ಮಂತ್ರಿಗಳು ಯಡಿಯೂರಪ್ಪನವರಿಗೆ ಜಾಪಾಳ ಮಾತ್ರೆ ಕೊಡುತ್ತಲೇ ಇರುತ್ತಾರೆ. ಅವರ ರಾಜಕೀಯವೇ ಅಂಥದು. ಅಲ್ಲದೆ ಅದ್ವಾನಿಯಾದಿ ಪ್ರಮುಖರು ಬೆಂಗಳೂರಿಗೆ ದಯಮಾಡಿಸಿ ಯಡಿಯೂರಪ್ಪನವರನ್ನು ಸಿಂಹಾಸನದಲ್ಲಿ ಕುಳ್ಳಿರಿಸುವಾಗ ಸೇರಿದ್ದ ಐವತ್ತು ಸಾವಿರ ಮಂದಿಯನ್ನು ಕಂಡು ಗೌಡರ ಪಕ್ಷಕ್ಕೆ ಜಂಘಾಬಲ ಉಡುಗಿಹೋಗಿದೆಯೆಂದು ಮಾಲೂರು ಭಾಜಪ ಪ್ರಮುಖರು ಘೋಷಿಸಿದ್ದಾರಂತೆ. ಅದಕ್ಕೇ ಶ್ರೀ ಕುಮಾರಸ್ವಾಮಿಯವರು ತಮ್ಮ ಜಾತ್ರೆಯನ್ನು ಅರಮನೆ ಆವರಣದಲ್ಲಿ ಸೇರಿಸಿದ್ದರಂತೆ. ಒಟ್ಟಿನಲ್ಲಿ ಕರ್ನಾಟಕದ ಜನ ಈ ಕ್ಷುದ್ರ ಪ್ರಹಸನಗಳನ್ನು ನೋಡಿ ರಾಜ್ಯದ ರಸ್ತೆಗಳಲ್ಲಿರುವ ಗುಂಡಿಗಳಲ್ಲಿ ವಿಹರಿಸಬಹುದು. ಅದೇ ನಮ್ಮ ಅಭಿವೃದ್ಧಿಯ ಭವಿಷ್ಯವಾಗಿರುವಂತೆ ತೋರುತ್ತಿದೆ.

* * *

ಜಾರ್ಜ್ ಬುಷ್ ಎಂಬ ಮಹಾಮೇಧಾವಿಗೆ ಪ್ರಾಥಮಿಕ ಶಾಲೆಯಲ್ಲಿ ಇತಿಹಾಸ ಕಲಿಸಿದ ಉಪಾಧ್ಯಾಯರು ಹತಾಶರಾಗಿ ಆತ್ಮಹತ್ಯೆ ಮಾಡಿಕೊಳ್ಳುವ ಸನ್ನಾಹದಲ್ಲಿದ್ದಾರೆ ಎಂದು ವರದಿಯಾಗಿಲ್ಲ; ಆದರೆ ಅದನ್ನು ಊಹಿಸಬಹುದಾಗಿದೆ. ಏಕೆಂದರೆ, ನವೆಂಬರ್ ಏಳರಂದು ರಷ್ಯದ ಸಮಾಜವಾದಿ ಕ್ರಾಂತಿಯ ದಿನದ ಹಿನ್ನೆಲೆಯಲ್ಲಿ ಬುಷ್ ಹೇಳಿದರಂತೆ, ಲೆನಿನ್ ಮತ್ತು ಹಿಟ್ಲರ್ ಒಬ್ಬರೇ, ಎಂದು. ಅಷ್ಟು ಪ್ರಾಜ್ಞನಾದ ಅಧ್ಯಕ್ಷನನ್ನು ಹೊಂದಿರುವ ಅಮೆರಿಕಾವೇ ಧನ್ಯ! ಈಗಿನ ಶಾಲಾ ಇತಿಹಾಸ ಬೋಧಕರು ಅಮೆರಿಕಾದಲ್ಲಿ ಮತ್ತು ಬೇರೆಡೆಗಳಲ್ಲಿ ಸತ್ಯಕ್ಕೆ ಹತ್ತಿರವಾಗಿರುವ ಪರ್ಯಾಯ ಸಮೀಕರಣವನ್ನು ಮಕ್ಕಳಿಗೆ ಪರಿಚಯಿಸುತ್ತಿದ್ದಾರೆ. ಆ ಸಮೀಕರಣ ಹೀಗಿದೆ: ಜಾರ್ಜ್ ಬುಷ್=ಒಸಾಮಾ ಬಿನ್ ಲಾಡೆನ್. (ಲಾಡೆನ್‌ನ ಅನುಯಾಯಿಗಳನ್ನು ಹಿಂದೊಮ್ಮೆ ಅಮೆರಿಕಾ ಅಧ್ಯಕ್ಷರ ಶ್ವೇತಭವನಕ್ಕೆ ಆಹ್ವಾನಿಸಲಾಗಿತ್ತು ಮತ್ತು ಅಂದಿನ ಅಧ್ಯಕ್ಷ ಅವರನ್ನು ಜೆಫರ್ಸನ್ ಅಪರಾವತಾರವೆಂದು ವರ್ಣಿಸಿದ್ದರು.)

* * *

ನಮ್ಮ ನ್ಯಾಯಾಲಯಗಳ ಬಹುಶ್ರುತ ನ್ಯಾಯಾಧೀಶರು ಆಗಾಗ್ಗೆ ನುಡಿಮುತ್ತುಗಳನ್ನು ಸುರಿಸುತ್ತಿರುತ್ತಾರೆ. ಅವನ್ನು ನಾವು ಆಯ್ದುಕೊಳ್ಳಬಹುದು, ಆದರೆ ಅವುಗಳ ಕಳಪೆತನದ ಬಗ್ಗೆ ವ್ಯಾಖ್ಯಾನಿಸಬಾರದು. ಏಕೆಂದರೆ ಅವರಿಗೆ ಕೋಪ ಬರಿಸುವುದು ಕ್ಷೇಮಕರವಲ್ಲ. ಸರ್ವೋಚ್ಚ ನ್ಯಾಯಾಲಯದಲ್ಲಿ ನ್ಯಾಯಮೂರ್ತಿ ಅರಿಜಿತ್ ಪಸಾಯತ್ ಎಂಬುವವರೊಬ್ಬರು ಇದ್ದಾರೆ. (ಅವರ ಹೆಸರನ್ನು ಹೇಗೆ ಉಚ್ಚರಿಸಬೇಕೋ ತಿಳಿಯದು; ತಪ್ಪು ಉಚ್ಚಾರಣೆಯಾದರೆ ಭೂದೇವಿಯಂತೆ ಅವರೂ ಕ್ಷಮಾಶೀಲರಾಗಬೇಕು).

ಕೇಂದ್ರ ಸರ್ಕಾರವು ತಾಯ್ತನದ ಬಾಬ್ತು ಮಹಿಳೆಯರಿಗೆ ನೀಡುವ ರಜಾ ಸೌಲಭ್ಯವನ್ನು ವಿಸ್ತರಿಸುವ ಸಲುವಾಗಿ ಹೊಸ ಪದ್ಧತಿಯನ್ನು ಜಾರಿಗೆ ತರುತ್ತಿದೆ. ಮೊದಲಿಗೆ ಎರಡು ಮಕ್ಕಳ ಹೆರಿಗೆಗೆ ಮಾತ್ರ ನೀಡಲಾಗುತ್ತಿದ್ದ ಸೌಲಭ್ಯವನ್ನು ಈಗ ಮೂರನೆಯ ಮಗುವಿನ ಸಂದರ್ಭದಲ್ಲೂ ನೀಡಲಾಗುತ್ತಿದೆ; ತಾಯಿಯ ವಯಸ್ಸನ್ನು ಪರಿಗಣನೆಗೆ ತೆಗೆದುಕೊಳ್ಳಕೂಡದೆಂದೂ ತೀರ್ಮಾನವಾಗಿದೆ. ಇದನ್ನು ಕೇಂದ್ರ ಸರ್ಕಾರದ ಪ್ರತಿನಿಧಿಗಳು ನ್ಯಾಯಮೂರ್ತಿಗಳ ಗಮನಕ್ಕೆ ತಂದಾಗ ಸನ್ಮಾನ್ಯ ನ್ಯಾಯಮೂರ್ತಿಗಳು ಹೇಳಿದ್ದಿದು (ಅದು ತೀರ್ಪಿನ ಒಂದು ಭಾಗವಾಗಿ ಬರುವುದಿಲ್ಲ) :

''ಹೌದು, ಹೌದು, ಕೊಡಿ. ಎಲ್ಲ ಸೌಲಭ್ಯಗಳನ್ನೂ ಕೊಡುತ್ತಿರಿ. ಈ ಹೆಂಗಸರಿಗೆ ಇನ್ನೇನು ಕೆಲಸ! ತೆರಿಗೆ ಪಾವತಿಸುವ ನಾಗರಿಕರ ಹಣ ಪಡೆದು ಮಕ್ಕಳನ್ನು ಹೆರುತ್ತಲೇ ಇರಲಿ ಅವರು.'' (ಇದು ಪದಶಃ ಭಾಷಾಂತರವಲ್ಲ, ಆದರೆ ಒಟ್ಟು ತಾತ್ಪರ್ಯ).

ಮಹಿಳೆಯರನ್ನು ಹೀಗೆ ತುಚ್ಛವಾಗಿ ನಿಂದಿಸುವ ಹಕ್ಕನ್ನು ನ್ಯಾಯಮೂರ್ತಿಗಳಿಗೆ ಸಂವಿಧಾನವು ನೀಡಿದೆಯೆ ? ನಾವು ಓದಿರುವ ಸಂವಿಧಾನದಲ್ಲಿ ಅದನ್ನು ನಮೂದಿಸಿಲ್ಲ.

೧೮-೧೧-೨೦೦೭

---

ಡಿಸೆಂಬರ್ ಸಂಚಿಕೆಗಾಗಿ 'ಈ ತಿಂಗಳು' ವಿಭಾಗದ ಟಿಪ್ಪಣಿಗಳನ್ನು ಮುದ್ರಣಕ್ಕೆ ಅಣಿಗೊಳಿಸುತ್ತಿದ್ದಾಗ ನವೆಂಬರ್ ೧೯ರಂದು ರಾಜ್ಯದ ವಿಧಾನಸಭೆಯಲ್ಲಿ ನೂತನ ಮುಖ್ಯಮಂತ್ರಿಗಳು ಸದನದಲ್ಲಿ ಬಹುಮತ ಸಾಧಿಸಬೇಕೆಂಬ ಸುದ್ದಿ ಇದ್ದಿತು. ಮಾನ್ಯ ಯಡಿಯೂರಪ್ಪನವರ ಮುಖ್ಯಮಂತ್ರಿ ಪದವಿ ಬಹಳ ಅಲ್ಪಕಾಲಾವಧಿಯದ್ದಾಗಬಹುದೆಂಬ ಸೂಚನೆ ಮೊದಲೇ ಹೊರಬಿದ್ದಿತ್ತು. ''ಷರತ್ತಿನ ಬೆಂಬಲ'' ಎಂಬ ಹೊಸ ಒತ್ತಾಯವನ್ನು ದೇವೇಗೌಡರು (ಅಥವಾ ಅವರ ಪರವಾಗಿ ಪಕ್ಷದ ಕಾರ್ಯಕರ್ತರು) ಮುಂದಿಟ್ಟಾಗ ಸರ್ಕಾರದ ಸ್ಥಿತಿ ನೆಟ್ಟಗಿಲ್ಲವೆಂಬುದು ಸ್ಪಷ್ಟವಾಯಿತು. ಇವು ಷರತ್ತುಗಳೋ ಅಥವಾ ಸಬೂಬುಗಳೋ ಎಂಬುದು ಮುಖ್ಯವಲ್ಲ; ದೇವೇಗೌಡರೊಡನೆ ಸಂವಾದ ಮತ್ತು ಸಹಕಾರ ಯಾವಾಗಲೂ ತರ್ಕಬದ್ಧವಾಗಿರಲು ಸಾಧ್ಯವಿಲ್ಲವೆಂಬುದು ಮುಖ್ಯ. ತಮ್ಮ ಗಣಿಗಳನ್ನು ತುಂಬಿಕೊಳ್ಳಲು ಬಿ.ಜೆ.ಪಿ ಮತ್ತು ಜೆ.ಡಿ.(ಎಸ್), ಎರಡೂ ಪಕ್ಷಗಳ ಶಾಸಕರು ಸ್ಪರ್ಧಾತ್ಮಕ ಮನೋಭಾವ ತಾಳಿದ್ದು ತೆರೆಯ ಹಿಂದಿನ ಸಂಧಾನಗಳಲ್ಲಿ ಕಂಡುಬಂದಿತು. ಯಡಿಯೂರಪ್ಪನವರನ್ನು ಕೆಳಗಿಳಿಸುವಂತೆ ಆದೇಶ ನೀಡಿ ದೇವೇಗೌಡರು ಎತ್ತರಕ್ಕೆ ಹಾರಿ ದೆಹಲಿ ಸೇರಿಕೊಂಡರು. ಕರ್ನಾಟಕದ ಪರಿಸ್ಥಿತಿ ಹೇಗಾಯಿತೆಂದರೆ, ಬಿ.ಜೆ.ಪಿ. ನೇತೃತ್ವದ ಸರ್ಕಾರ ಬಂದರೂ ಹಿನ್ನಡೆ ಮತ್ತು ಹೋದರೂ ಹಿನ್ನಡೆ. ಉಳಿದರೆ ಹತ್ತೊಂಬತ್ತು ತಿಂಗಳು ಕುದಿಯುವ ವಾತಾವರಣ, ಉರುಳಿದರೆ ಗಲಭೆ ಮತ್ತು ಹಣಾಹಣಿ ಘರ್ಷಣೆಗಳಿಂದ ತುಂಬಿದ ಚುನಾವಣೆ. ನಮ್ಮ ರಾಜ್ಯದ ರಾಜಕೀಯವು ಈ ವರ್ಷದ ಸೆಪ್ಟಂಬರ್‌ನಿಂದ ನವೆಂಬರ್ ಅಂತ್ಯದವರೆಗೆ ಸುದ್ದಿಯಲ್ಲಿದ್ದು ಇದಕ್ಕಿಂತಲೂ ಕೀಳುತನ ಸಾಧ್ಯವಿಲ್ಲವೆಂಬ ಅರಿವು ಮೂಡಿಸಿತು. ಅದಕ್ಕೆ ಬಿ.ಜೆ.ಪಿ. ಮತ್ತು ದೇವೇಗೌಡರ ಪಕ್ಷಗಳೆರಡೂ ಕಾರಣ. ರಾಜ್ಯದ ಜನತೆಯ ಕ್ಷಮೆಯನ್ನು ಎಷ್ಟು ಯಾಚಿಸಿದರೂ ಆ ಎರಡೂ ಪಕ್ಷಗಳಿಗೆ ಕಿಂಚಿತ್ತು ಪರಿಶುದ್ಧತೆಯ ಲೇಪವೂ ಅಸಾಧ್ಯ.

೨೯-೧೧-೨೦೦೭

# ಜಾಗತೀಕರಣದಿಂದ ಸಮಾಜದ ಮೇಲಾಗುವ ಪರಿಣಾಮಗಳು

**ಜಾಗತೀಕರಣದ ನೀತಿ ಹೇಗಿದೆಯೆಂದರೆ ಇಂದು ನಮ್ಮಂಥ ಅಭಿವೃದ್ಧಿಶೀಲ ರಾಷ್ಟ್ರಗಳು ಏನನ್ನೂ ಉತ್ಪಾದಿಸಬಾರದು. ನಮ್ಮ ಪ್ರತಿಭೆ, ಸೃಜನಶೀಲತೆ ನಾಶವಾಗಬೇಕು. ಇದೇ ಅದರ ತಿರುಳು. ಆಧುನೀಕರಣದಿಂದ ಉಂಟಾಗುವ ದುಷ್ಪರಿಣಾಮಗಳನ್ನು ಗಾಂಧೀಜಿಯವರು ಅಂದೇ ತಮ್ಮ 'ಹಿಂದ್ ಸ್ವರಾಜ್' ಎಂಬ ಪುಸ್ತಕದಲ್ಲಿ ವಿಧಿವತ್ತಾಗಿ ವರ್ಣಿಸಿದ್ದಾರೆ. ಬ್ರಿಟಿಷ್ ವಸಾಹತುಶಾಹಿ ಆಳ್ವಿಕೆಯಿಂದ ಭಾರತದ ಪರಿಸ್ಥಿತಿ ಮುಂದೇನಾಗಬಹುದು ಎಂಬುದನ್ನು ಅವರು ಅರಿತಿದ್ದರು. ಅದಕ್ಕಾಗಿಯೇ ಅಂದೇ ಅವರು ವಿದೇಶಿ ವಸ್ತುಗಳಿಗೆ ಬಹಿಷ್ಕಾರ ಹಾಕಿದ್ದರು. ಸ್ವದೇಶಿ ವಸ್ತುಗಳ ಬಳಕೆಗೆ ಆದ್ಯತೆ ನೀಡಿ ಗುಡಿಕೈಗಾರಿಕೆಗಳ ಅಭಿವೃದ್ಧಿಗೆ, ಮಾತೃಭಾಷೆಯಲ್ಲಿ ಶಿಕ್ಷಣ ನೀಡುವದಕ್ಕೆ ಆದ್ಯತೆ ನೀಡಬೇಕೆಂದು ಮನವಿ ಮಾಡಿದ್ದರು. ಅಂದು ಗಾಂಧೀಜಿ ಹೇಳಿದ ಮಾತುಗಳು ಇಂದಿನ ಜಾಗತೀಕರಣಕ್ಕೆ ಪರ್ಯಾಯವೆಂದು ಆಲೋಚಿಸುವಂತೆ ಮಾಡಿದೆ.**

ಜಾಗತೀಕರಣ ಮತ್ತು ಆಧುನೀಕರಣವೆಂಬ ಬಿರುಗಾಳಿ ಭಾರತದಂಥ ಮೂರನೇ ಹಂತದ ಅಭಿವೃದ್ಧಿ ಶೀಲ ದೇಶಗಳಲ್ಲಿ ಸುಮಾರು ಒಂದೂವರೆ ದಶಕಗಳಿಂದ ಈಚೆಗೆ ತೀವ್ರವಾಗಿ ಬೀಸುತ್ತಿದೆ. ಅದರ ಪರಿಣಾಮವಾಗಿ ವಿಜ್ಞಾನ ತಂತ್ರಜ್ಞಾನಗಳಲ್ಲಿ ತೀವ್ರ ಬೆಳವಣಿಗೆಯುಂಟಾಗಿ ದೇಶಗಳು ಅಭಿವೃದ್ಧಿಯತ್ತ ಸಾಗುತ್ತಿವೆ. ಮಾನವನಿಗೆ ಕಷ್ಟ ಸಾಧ್ಯವಾದಂತಹ ಅನೇಕ ಕೆಲಸಗಳನ್ನು ಇಂದು ವಿಜ್ಞಾನ-ತಂತ್ರಜ್ಞಾನಗಳ ಹೊಸ ಹೊಸ ಆವಿಷ್ಕಾರಗಳು ತೀರಾ ಸುಲಭಗೊಳಿಸಿವೆ. ಅದರ ಪರಿಣಾಮವಾಗಿ ಇಂದು ಜನರಲ್ಲಿ ಸ್ವಾವಲಂಬನೆ ಕಡಿಮೆಯಾಗಿದೆ ಪರಾವಲಂಬನೆ ಜಾಸ್ತಿಯಾಗಿದೆ.

ಒಂದು ಕಾಲದಲ್ಲಿ ದಿನಬೆಳಗಾದರೆ ರೈತನಾದವನು ತನ್ನ ನೇಗಿಲನ್ನು ಹೆಗಲಿಗೇರಿಸಿ ಕೈಯಲ್ಲಿ ಎತ್ತುಗಳ ಹಗ್ಗಗಳನ್ನು ಹಿಡಿದು ಉತ್ಸಾಹದಿಂದ ತನ್ನ ಹೊಲದೆಡೆಗೆ ಧಾವಿಸಿ ಮೈಮುರಿದು ದುಡಿಯುತ್ತಿದ್ದ. ಬಂಗಾರದ ಬೆಳೆಗಳನ್ನು ಬೆಳೆಯುತ್ತಿದ್ದ ಇದ್ದುದರಲ್ಲಿ ತೃಪ್ತಿಪಟ್ಟು ಕೊಂಡು ಸುಖವಾಗಿ ಜೀವಿಸುತ್ತಿದ್ದ. ಇಂದು ರೈತ ಕಷ್ಟಪಟ್ಟು ಬೆಳೆದ ಬೆಳೆಗಳಿಗೆ ಯೋಗ್ಯ ಬೆಲೆಯೇ ಇಲ್ಲವಾಗಿದೆ. ನಮ್ಮ ಮೂಲ ಕಸುಬುಗಳಲ್ಲಿ ಒಂದಾದ ಬೇಸಾಯ ಇಂದು ದಿಕ್ಕೆಟ್ಟುಹೋಗಿದೆ. ರೈತರನ್ನು ಅವಲಂಬಿಸಿ ದುಡಿಯುವ ವರ್ಗ ಕಂಗಾಲಾಗಿದೆ. ಪಟ್ಟಣ, ನಗರಗಳಲ್ಲಿರುವ ಕಾರ್ಮಿಕರು ಕೆಲಸವಿಲ್ಲದೇ ಬೀದಿಗಿಳಿದಿದ್ದಾರೆ. ಪರಿಣಾಮವಾಗಿ ಇಂದು ವ್ಯವಸಾಯ ಯಾರಿಗೂ ಬೇಡವಾಗಿದೆ. ಜನರು ವ್ಯವಸಾಯ ಭೂಮಿಯನ್ನು ಮಾರಲು ಹೊರಟಿದ್ದಾರೆ. ಕೃಷಿಕರ ಭೂಮಿಗೆ ಇಂದು ಬಂಗಾರದ ಬೆಲೆ ಪ್ರಾಪ್ತವಾಗಿದೆ. ಅನೇಕ ರೈತರು ತಮ್ಮ ಭೂಮಿಯನ್ನು ಸೈಟುಗಳನ್ನಾಗಿಸಿ ಮಾರಾಟ ಮಾಡಿ ಕೈ ತುಂಬಾ ಹಣವನ್ನು ತುಂಬಿಕೊಂಡು ಮೋಜಿನ ಜೀವನ ನಡೆಸಲಾರಂಭಿಸಿದ್ದಾರೆ. ಇಂದಿನ ರೈತರ ಎಷ್ಟೋ ಮಕ್ಕಳು ಬಣ್ಣ ಬಣ್ಣದ ಮೋಟಾರು ಸೈಕಲ್ಲುಗಳಲ್ಲಿ ತಿರುಗುತ್ತಾ, ಕೈಯಲ್ಲಿ ಮೊಬೈಲು ಹಿಡಿದು ಮಾತನಾಡುತ್ತ, ಸಿಗರೇಟು, ಹೆಂಡ, ವೇಶ್ಯೆಯರ ಸಹವಾಸ, ಮಾದಕ ದ್ರವ್ಯಗಳ ಸೇವನೆಗಳಂಥ ದುಶ್ಚಟಗಳಿಗೆ ದಾಸರಾಗಿ ತಮ್ಮ ಜೀವನ ವನ್ನು ಹಾಳುಮಾಡಿಕೊಳ್ಳುತ್ತಿದ್ದಾರೆ. ಹಣವಿರುವಷ್ಟು ದಿನ ಐಷಾರಾಮಿಯಾಗಿ ಮೋಜು-ಮಜಾ ಮಾಡಿ ಹಣವೆಲ್ಲ ಖರ್ಚಾದ ನಂತರ ಮುಂದೇನು ಮಾಡಬೇಕೆಂದು ದಿಕ್ಕು ತೋಚದವರಾಗಿ ಮತ್ತೆ ವ್ಯವಸಾಯ ಮಾಡಲು ಭೂಮಿಯೂ ಇಲ್ಲದೆ ಕೊಳೆಗೇರಿಯಲ್ಲಿ ಜೀವನ ಸಾಗಿಸುತ್ತಿದ್ದಾರೆ.

ಇಂದು ಭೂಮಿಗೆ ಬಂಗಾರದ ಬೆಲೆ ಬಂದಿರು ವದಕ್ಕೆ ಕಾರಣ ಇಂದಿನ ಜನರ ನೀತಿ ನಡಾವಳಿಗಳು. ಹಿಂದಿನ ಹಾಗೆ ಇಂದು ಕೂಡು ಕುಟುಂಬಗಳಿಲ್ಲ, ದೇಶದಲ್ಲಿ ಅಂತಹ ಒಂದೆರಡು ಕುಟುಂಬಗಳಿದ್ದರೂ ಅದೊಂದು ವಿಶೇಷ ಸುದ್ದಿಯೆಂಬಂತೆ ಮಾಧ್ಯಮಗಳಲ್ಲಿ ತೋರಿಸಲಾಗುತ್ತದೆ. ಇಂದು ಅವಿಭಕ್ತ ಕುಟುಂಬ ಗಳೆಲ್ಲ ಒಡೆದು ಚೂರು ಚೂರಾಗಿ ವಿಭಕ್ತ ಕುಟುಂಬ ಗಳಾಗಿವೆ. ಗಂಡ, ಹೆಂಡತಿ ಒಬ್ಬ ಮಗನೊ ಅಥವಾ ಮಗಳೊ ಇಷ್ಟೆ ಇಂದಿನ ಕುಟುಂಬ. ಹಿಂದಿನ ವಿಶಾಲವಾದ ಮನೆಗಳಿಗೆ ಪ್ರಧಾನ ಬಾಗಿಲು ಎನ್ನುವದು ಒಂದೇ ಇರುತ್ತಿತ್ತು. ಅದರ ಮೂಲಕವೇ ಕುಟುಂಬದ ನೂರಾರು ಸದಸ್ಯರುಗಳು ಹೊಕ್ಕು ಹೊರಬೀಳಬೇಕಾಗುತ್ತಿತ್ತು. ಇಂದು ಅಂಥ ವಿಶಾಲವಾದ ಮನೆಗಳಿಗೆ ಮಧ್ಯೆ ಹತ್ತಾರು ಗೋಡೆಗಳೆದ್ದು, ಅಷ್ಟೇ ಪ್ರಧಾನ ಬಾಗಿಲುಗಳುಂಟಾಗಿವೆ. ಇಂದು ಒಂದು ಕುಟುಂಬದಲ್ಲಿ ಎಷ್ಟು ಸದಸ್ಯರಿದ್ದಾರೋ ಅಷ್ಟು ಮನೆಗಳು ನಿರ್ಮಾಣವಾಗಿವೆ. ಹೀಗೆ ಬಿಡಿ ಬಿಡಿಯಾದ ಕುಟುಂಬದ ಪ್ರತಿಯೊಬ್ಬರೂ ಮನೆ ಕಟ್ಟಲು ಸೈಟು ಖರೀದಿಸುತ್ತಾರೆ. ಹಾಗಾಗಿ ಸೈಟುಗಳ ಬೆಲೆ ಗಗನ ಕ್ಕೇರಿದೆ. ಜನರಲ್ಲಿದ್ದ ಹಿಂದಿನ ಒಗ್ಗಟ್ಟು ಮಾಯವಾಗಿದೆ. ಒಗ್ಗಟ್ಟಿನಲ್ಲಿದ್ದ ಬಲವೂ ಮಾಯವಾಗಿ ಜನರೆಲ್ಲ ಬಿಡಿಬಿಡಿಯಾಗಿದ್ದಾರೆ. ಅವರವರ ಮನೆಗಳಿಗೆ ಅವರವರೆ ಯಜಮಾನರು ಎನ್ನುವ ಭಾವ. ಅವರವರ ಅಭಿಪ್ರಾಯ ಗಳೆಲ್ಲ ಅವರವರ ಸ್ವಂತ ಅಭಿಪ್ರಾಯಗಳು. ಒಬ್ಬೊಬ್ಬರ ಅಭಿಪ್ರಾಯ ಒಂದೊಂದು ರೀತಿ, ತಾಳಮೇಳವಿಲ್ಲ, ಹೀಗಾಗಿ ಸಮಾಜದಲ್ಲಿ ನಾವು ದುರ್ಬಲರಾಗುತ್ತಿದ್ದೇವೆ.

ಇಂದು ನಮಗೆ ಎಲ್ಲವೂ ವಿದೇಶದ್ದೇ ಆಗಬೇಕು. ಒಂದು ಮಗು ಹುಟ್ಟಿತು ಎಂದರೆ, ಆ ಮಗುವಿಗೆ ಬೇಕಾದ ಸ್ನಾನದ ಸಾಬೂನು, ಮೈ ತಿಕ್ಕುವ ಎಣ್ಣೆ, ನ್ಯಾಪ್‌ಕಿನ್, ಡೈಪರ್, ಆಟದ ಗೊಂಬೆ, ತಿನ್ನುವ ಆಹಾರ ಎಲ್ಲವೂ ವಿದೇಶಿ ನಿರ್ಮಿತ ಕಂಪನಿಗಳವೇ ಆಗಬೇಕು. ಹಿಂದೆಲ್ಲ ತಾಯಂದಿರು ದೇಸಿ ವಿಧಾನಗಳಿಂದ ಮಕ್ಕಳನ್ನು ಬೆಳೆಸಿ ದೊಡ್ಡವರನ್ನಾಗಿ ಮಾಡಿರಲಿಲ್ಲವೆ? ತಮ್ಮದೇ ವಿಧಾನಗಳಿಂದ ಮಕ್ಕಳನ್ನು ಬೆಳೆಸಿ ಮಕ್ಕಳನ್ನು ಫೈಲ್ವಾನ್‌ರಂತೆ ಕಟ್ಟುಮಸ್ತಾಗಿ ಬೆಳೆಸುತ್ತಿದ್ದರು. ಇಂದು ಹಾಗಲ್ಲ. ವಿದೇಶಿ ಪ್ರೇರಿತ ಆಹಾರಗಳನ್ನು ತಿಂದು ಬೆಳೆದ ಮಕ್ಕಳು ತೆಳ್ಳಗೆ ಬೆಳ್ಳಗೆ ಬಿಳಿಚಿಕೊಂಡಿರುವವರಂತೆ ದುರ್ಬಲರಾಗಿ ಕಾಣುತ್ತಾರೆ. ಇದನ್ನು ನಾವು ಅಭಿವೃದ್ಧಿ ಎನ್ನುತ್ತೇವೆ.

ಹಿಂದೆ ನಮ್ಮ ದೇಶಕ್ಕೆ ವ್ಯಾಪಾರಕ್ಕಾಗಿ ಬಂದ ಬ್ರಿಟಿಷರು ಈ ನೆಲದಲ್ಲೇ ಗಟ್ಟಿಯಾಗಿ ಬೇರೂರಿ ತಮ್ಮ ವಸಾಹತುಗಳನ್ನು ಸ್ಥಾಪಿಸಿ 'ಡಿವೈಡ್ ಎಂಡ್ ರೂಲ್' ಎಂಬ ನೀತಿಯ ಮೂಲಕ ನಮ್ಮ ದೇಶವನ್ನು ಆಳಿ ಅಪಾರವಾದ ಅಮೂಲ್ಯ ಸಂಪನ್ಮೂಲಗಳನ್ನು ದೋಚಿಕೊಂಡು ಹೋದರು. ಆದರೆ ಇಂದು ನಾವೇನು ಮಾಡುತ್ತಿದ್ದೇವೆ...? ನಮ್ಮ ಸಂಪತ್ತನ್ನೆಲ್ಲ ಕೊಂಡೊಯ್ಯಲು ಅವರಿಗೆ ನಾವೇ ಕೆಂಪು ಹಾಸಿನ ಸ್ವಾಗತ ಕೋರುತ್ತಿದ್ದೇವೆ. ನಮ್ಮ ದೇಶದ ಭೂಗರ್ಭದಲ್ಲಿರುವ ಅಮೂಲ್ಯ ಖನಿಜ ಸಂಪನ್ಮೂಲಗಳನ್ನು ಮಾರಾಟ ಮಾಡುತ್ತಿದ್ದೇವೆ. ಆ ಮೂಲಕ ನಮ್ಮ ಭೂಮಿಯನ್ನು ಬಂಜೆಯನ್ನಾಗಿ ಮಾಡುತ್ತಿದ್ದೇವೆ. ಇಂದು ಅಮೆರಿಕಾದಲ್ಲಿ ಕಟ್ಟಡಗಳನ್ನು ಕಟ್ಟಲು ನಮ್ಮ ದೇಶದ ಗಣಿಗಳಲ್ಲಿ ಸಿಗುವ ಮಣ್ಣೇ ಬೇಕು. ಇಂದಿನ ರಾಜಕಾರಣಿಗಳಿಗೆ, ಅಧಿಕಾರಿಗಳಿಗೆ ಇದ್ಯಾವುದರ ಬಗ್ಗೆ ಅರಿವಿಲ್ಲ, ದೇಶದ ಪರಿಸ್ಥಿತಿ ಏನಾದರೇನು? ಅವರಿಗೆ ಲಾಭವಾದರೆ ಆಯಿತು. ದೇಶದ ಅಭಿವೃದ್ಧಿಯನ್ನು ಕಟ್ಟಿಕೊಂಡು ಅವರಿಗೇನಾಗಬೇಕು?

ಅಷ್ಟೇ ಅಲ್ಲ, ಅಮೆರಿಕಾದ ಉತ್ಪನ್ನಗಳಿಗೆ ಇಂದು ನಮ್ಮ ದೇಶ ಮಾರುಕಟ್ಟೆಯಾಗಿದೆ. ಆ ಮೂಲಕ ಅವರ ಉತ್ಪನ್ನಗಳು ಓತಪ್ರೋತವಾಗಿ ನಮ್ಮ ದೇಶಕ್ಕೆ ಹರಿದು ಬರುತ್ತಿವೆ. ನಾವು ಅವರ ಉತ್ಪನ್ನಗಳಿಗೆ ಗ್ರಾಹಕರಾಗಿದ್ದೇವೆ. ಇಂದು ನಮಗೆ ಸಣ್ಣ ಸೂಜಿಯಿಂದ ಹಿಡಿದು

**ಎಂ. ಬಿ. ನಾಯ್ಕ್ ಹಾಸನ**

ಆಧುನಿಕ ಕಂಪ್ಯೂಟರ್‌ವರೆಗೆ ಅಮೆರಿಕಾ ನಿರ್ಮಿತ ವಸ್ತುಗಳು ಬೇಕಾಗಿವೆ. ನಾವು ನಮ್ಮ ದೇಶದ ಉತ್ಪನ್ನಗಳನ್ನು ಉಪಯೋಗಿಸಿ ಜೀವನ ನಡೆಸಿದರೆ ಅದರಿಂದ ದುಷ್ಪರಿಣಾಮಗಳುಂಟಾಗುತ್ತವೆ ಎಂದು ನಮ್ಮನ್ನು ಹೆದರಿಸಿ ಅವರ ಉತ್ಪನ್ನಗಳಿಂದಲೇ ನಮ್ಮ ಏಳಿಗೆ ಸಾಧ್ಯ ಎಂಬ ಭ್ರಮೆಯನ್ನು ಹುಟ್ಟಿಸಿದ್ದಾರೆ. ನಾನು ಅವರ ದಾಸರಾಗಿದ್ದೇವೆ. ಅಮೆರಿಕಾದ ಅಧ್ಯಕ್ಷ ಜಾರ್ಜ್ ಬುಷ್ ಇಂದು ಜಗತ್ತಿಗೆ ತಾನೊಬ್ಬನೆ ಅಧ್ಯಕ್ಷನೆಂಬ ಭ್ರಮೆಯಲ್ಲಿದ್ದಾನೆ. ಜಗತ್ತಿನ ಉಳಿದೆಲ್ಲ ರಾಷ್ಟ್ರಗಳೂ ಅವನು ಹೇಳಿದ ಹಾಗೆ ಕೇಳಬೇಕು. ಇಲ್ಲವಾದರೆ ಯಾವುದಾದರೊಂದು ಕೊಂಕು ಕಾರಣ ತೆಗೆದು ಆ ದೇಶದ ಮೇಲೆ ತನ್ನ ಅತ್ಯಾಧುನಿಕ ಶಸ್ತ್ರಾಸ್ತ್ರಗಳಿಂದ ಯುದ್ಧ ಸಾರಿ ತನ್ನ ವಶಕ್ಕೆ ತೆಗೆದುಕೊಂಡು ತನ್ನ ಬಾಡಿಗೆಯ ಬಂಟರನ್ನ ಅಧ್ಯಕ್ಷರನ್ನಾಗಿ ನೇಮಿಸಿಬಿಡುತ್ತಾನೆ. ಆತನ ಈ ಕಾರ್ಯಗಳಿಗೆಲ್ಲ ಅವನ ಅಧೀನದಲ್ಲಿರುವ ಸುದ್ದಿ ಮಾಧ್ಯಮಗಳು ಹೊಗಳು ಭಟರಂತಾಗಿವೆ. ಅವನ ಈ ಕುತಂತ್ರಗಳಿಗೆ ಭಾರತವೂ ನಿಧಾನವಾಗಿ ಬಲಿಯಾಗುತ್ತಿದೆಯೇನೊ ಎನಿಸುತ್ತಿದೆ. ಇಂದಿನ ವಿದ್ಯಮಾನಗಳನ್ನು ನೋಡಿದರೆ, ಒಂದೊಮ್ಮೆ ಅವನ ಷರತ್ತುಗಳಿಗೆ ಒಪ್ಪದೇ ಹೋದರೆ ಅಂತರರಾಷ್ಟ್ರೀಯ ದಿಗ್ಬಂಧನ ಹಾಕುವ ಬೆದರಿಕೆ ಒಡ್ಡುತ್ತಾನೆ. ಈಗಾಗಲೇ ಅಣ್ವಸ್ತ್ರ ನಿಷೇಧದ ಒಪ್ಪಂದಕ್ಕೆ ಭಾರತ ಸಹಿ ಹಾಕಿ ಅವನ ಗುಲಾಮಗಿರಿಯನ್ನು ಒಪ್ಪಿಕೊಂಡಂತಾಗಿದೆ. ಈ ಎಲ್ಲ ವಿದ್ಯಮಾನಗಳು ನಮ್ಮ ಸಮಾಜದ ಮೇಲೆ ಪ್ರತ್ಯಕ್ಷ ಅಥವಾ ಪರೋಕ್ಷವಾಗಿ ದುಷ್ಪರಿಣಾಮ ಬೀರುವಂಥವುಗಳೇ ಆಗಿವೆ.



ನಂ ಮುಖಂಡರು ಸರ್ಕಾರದ ಖಜಾನೆಗೆ ಕನ್ನ ಹಾಕ್ತಾರಲ್ರೀ...!!

ಜಾಗತೀಕರಣದ ನೀತಿ ಹೇಗಿದೆಯೆಂದರೆ ಇಂದು ನಮ್ಮಂಥ ಅಭಿವೃದ್ಧಿಶೀಲ ರಾಷ್ಟ್ರಗಳು ಏನನ್ನೂ ಉತ್ಪಾದಿಸಬಾರದು. ನಮ್ಮ ಪ್ರತಿಭೆ, ಸೃಜನಶೀಲತೆ ನಾಶವಾಗಬೇಕು. ಇದೇ ಅದರ ತಿರುಳು. ಆಧುನೀಕರಣದಿಂದ ಉಂಟಾಗುವ ದುಷ್ಪರಿಣಾಮಗಳನ್ನು ಗಾಂಧೀಜಿಯವರು ಅಂದೇ ತಮ್ಮ 'ಹಿಂದ್ ಸ್ವರಾಜ್' ಎಂಬ ಪುಸ್ತಕದಲ್ಲಿ ವಿಧಿವತ್ತಾಗಿ ವರ್ಣಿಸಿದ್ದಾರೆ. ಬ್ರಿಟಿಷ್ ವಸಾಹತುಶಾಹಿ ಆಳ್ವಿಕೆಯಿಂದ ಭಾರತದ ಪರಿಸ್ಥಿತಿ ಮುಂದೇನಾಗ ಬಹುದು ಎಂಬುದನ್ನು ಅವರು ಅರಿತಿದ್ದರು. ಅದಕ್ಕಾಗಿಯೇ ಅಂದೇ ಅವರು ವಿದೇಶಿ ವಸ್ತುಗಳಿಗೆ ಬಹಿಷ್ಕಾರ ಹಾಕಿದ್ದರು. ಸ್ವದೇಶಿ ವಸ್ತುಗಳ ಬಳಕೆಗೆ ಆದ್ಯತೆ ನೀಡಿ ಗುಡಿ ಕೈಗಾರಿಕೆಗಳಿಗೆ, ಮಾತೃಭಾಷೆಯಲ್ಲಿ ಶಿಕ್ಷಣ ನೀಡುವದಕ್ಕೆ ಆದ್ಯತೆ ನೀಡುವುದು ಮನಸು ಮಾಡಿದ್ದರು. ಅಂದು ಗಾಂಧೀಜಿ ಹೇಳಿದ ಮಾತುಗಳು ಇಂದಿನ ಜಾಗತೀಕರಣಕ್ಕೆ ಪರ್ಯಾಯವೆಂದು ಆಲೋಚಿಸುವಂತೆ ಮಾಡಿದೆ. ಅಷ್ಟೇ ಅಲ್ಲ, ಇಂದು ಲೋಹಿಯಾ, ಅಂಬೇಡ್ಕರ್, ಗಾಂಧಿ ಮುಂತಾದವರ ಚಿಂತನೆಗಳನ್ನು ಅಳವಡಿಸಿಕೊಳ್ಳಲು ಯಾರೂ ಒಲವು ತೋರುತ್ತಿಲ್ಲ. ಇವುಗಳಿಗೆಲ್ಲ ಕಾರಣವೇನೆಂದರೆ ನಮ್ಮತನವನ್ನು ಮರೆತಿರುವದು. ಜಾಗತೀಕರಣವು ನಮ್ಮನ್ನು ನೆಲ, ಜಲ, ಗಾಳಿಯಿಂದ ಬೇರ್ಪಡಿಸಿ ನಮ್ಮ ಅಸ್ತಿತ್ವವನ್ನು ನಾಶಮಾಡುತ್ತಿದೆ.

ಹಾಗಾದರೆ, ಇದಕ್ಕೆಲ್ಲ ಮುಕ್ತಿ ಇಲ್ಲವೆ ? ಖಂಡಿತ ಮುಕ್ತಿ ಇದೆ. ಯಾವೊಂದು ಸಮಸ್ಯೆಯೂ ಪರಿಹರಿಸಲಿಕ್ಕಾಗದಂಥದ್ದೇನೂ ಇಲ್ಲ. ಆದರೆ ಈ ಸಮಸ್ಯೆಯನ್ನು ಎದುರಿಸುವ ಎದೆಗಾರಿಕೆ ಬೇಕು. ಇಂದಿನ ಸಮುದಾಯಗಳು ಕ್ರಿಯಾಶೀಲಗೊಳ್ಳಬೇಕು. ಪ್ರತಿಯೊಬ್ಬರೂ ದುಡಿಮೆಗಾರರಾಗಬೇಕು. ಅಂದರೆ ಈಗೇನೂ ದುಡಿಯುತ್ತಿಲ್ಲ ಎಂದರ್ಥವಲ್ಲ. ದುಡಿಯುತ್ತಿದ್ದೇವೆ. ಆದರೆ ಜಗತ್ತಿನ ದೊಡ್ಡಣ್ಣಗಳ ಮಾರ್ಗದರ್ಶನದಲ್ಲಿ ಅದು ತೊಲಗಬೇಕು. ಗಾಂಧೀಜಿಯವರ ಸ್ವಾವಲಂಬನೆ ಸ್ವದೇಶಿ ಚಳುವಳಿಯಾಗಿ ನೆಲೆಗೊಳ್ಳಬೇಕು. ನಮ್ಮ ದುಡಿಮೆ, ನಮ್ಮ ಹಣ ನಮ್ಮ ಅಭ್ಯುದಯಕ್ಕೆ ಪೂರಕವಾಗಿರಬೇಕು. ನಮ್ಮ ಸಂಸ್ಕೃತಿ, ಪರಂಪರೆ, ಅನನ್ಯತೆಗಳನ್ನು ಉಳಿಸಿಕೊಂಡು ನಮ್ಮ ಪೂರ್ವಿಕರ ಬಾಳನ್ನು ಕಟ್ಟಬೇಕು. ಇದಕ್ಕೆಲ್ಲ ಬೇಕಾಗಿರುವದು ಯಾವದೋ ಮಹಾ ಮಂತ್ರವಲ್ಲ, ಕೇವಲ ಸ್ವಾಭಿಮಾನವೊಂದಿದ್ದರೆ ಸಾಕು, ನಾವು ಮೇಲೆ ಹೇಳಿದಂಥ ಎಲ್ಲವನ್ನೂ ಪೂರೈಸಿಕೊಳ್ಳಬಹುದು. ಇದು ಜನರಲ್ಲಷ್ಟೇ ಇದ್ದರೆ ಸಾಲದು, ನಮ್ಮನ್ನಾಳುವ ಸರ್ಕಾರಕ್ಕೂ ಇರಬೇಕು. ಅಂಥ ಸ್ವಾಭಿಮಾನ ಇಲ್ಲದ ಸರಕಾರವನ್ನು ಕೆಳಗಿಳಿಸುವ ಅಧಿಕಾರ ಜನತೆಗಿದೆ. ಅದನ್ನು ಕಾರ್ಯಗತಗೊಳಿಸುವ ದೃಢತೆ ಜನರಲ್ಲಿದ್ದರೆ ಸಾಕು.


ಎಂ. ಬಿ. ನಾಯ್ಕ್ ಹಾಸನ
ರಂಗಸ್ವಾಮಿ ನಿಲಯ, ಮೊದಲನೇ ಮುಖ್ಯರಸ್ತೆ, ಹತ್ತನೇ ಅಡ್ಡರಸ್ತೆ, ಶಾಂತಿನಗರ, ಹಾಸನ - ೫೭೩೨೦೧


*೫ನೇ ಪುಟದಿಂದ (ಸಂಪಾದಕೀಯ)*

ನಂದೀಗ್ರಾಮ ಪ್ರಸಂಗದಲ್ಲಿ ಈವರೆಗೆ ಯಾವ ರಾಜಕೀಯ ಪಕ್ಷ ಹೆಚ್ಚು ತಪ್ಪು ಮಾಡಿದೆ, ಯಾವುದು ಯಾವ ತಪ್ಪೂ ಮಾಡಿಲ್ಲ ಎಂದು ತೀರ್ಮಾನಿಸ ಹೊರಡುವುದು ಉಚಿತವಾಗಲಾರದು. ಏಕೆಂದರೆ, ಎಲ್ಲ ಪಕ್ಷಗಳೂ ಒಂದಲ್ಲ ಒಂದು ರೀತಿಯಲ್ಲಿ ಎಡವಿವೆ. ಹುಲಿ ಹಳ್ಳಕ್ಕೆ ಬಿದ್ದಾಗ ಯಾರು ಬೇಕಾದರೂ ಒಂದು ಕಲ್ಲು ಹಾಕಬಹುದು ಎಂಬ ನೀತಿಯಂತೆ ಸಿ.ಪಿ.ಐ.(ಎಂ) ಪಕ್ಷವೊಂದನ್ನೇ ಗುರಿಯಾಗಿಸುವುದು ಪೂರ್ವಗ್ರಹ ಪೀಡೆಯಿಂದ ಮಾತ್ರ ಸಾಧ್ಯ. ಹಳ್ಳಿಗಳ ಜನರನ್ನು ಸ್ವಗ್ರಾಮಗಳಿಂದ ದೂರಹಾಕಿದ್ದು ಆ ಪಕ್ಷವಲ್ಲ, ಹಳ್ಳಿಗರನ್ನು ಹಿಂದಕ್ಕೆ ಮರಳಿಸಲು ಹಿಂಸೆಯ ಪ್ರಯೋಗವಾಗಿದೆಯೆಂದು ಹೇಳುವಾಗ, ಅದೇ ಹಳ್ಳಿಗರನ್ನು ಓಡಿಸುವಾಗ ಬೇರೊಂದು ಪಕ್ಷ ಅಥವಾ ಪಕ್ಷಗಳು ಹಿಂಸೆ ಬಳಸಿದ್ದುವೆಂಬುದನ್ನು ಮರೆಯ ಬಾರದು. ಎರಡೂ ಸಮಾನವಾಗಿ ದೂಷಣೆಗೆ ಅರ್ಹವಾಗಿವೆ. ಒಂದೊಂದು ಪಕ್ಷವೂ ತನ್ನ ಬಲವನ್ನು ಪರೀಕ್ಷಿಸಿಕೊಳ್ಳಲು ವಿಶೇಷ ಆರ್ಥಿಕ ವಲಯದ ಸ್ಥಾಪನೆಯ ಬಗೆಗಿನ ತೀರ್ಮಾನವು ಒಂದು ನೆಪವಾಯಿತೇನೋ ಎನಿಸುತ್ತದೆ. ಸಿ.ಪಿ.ಐ., ಸಿ.ಪಿ.ಐ.(ಎಂ), ಆರ್.ಎಸ್.ಪಿ. ಮತ್ತು ಫಾರ್ವರ್ಡ್ ಬ್ಲಾಕ್ ಪಕ್ಷಗಳಿಗೆ ಮಾತ್ರ ಜನಹಿತದ ಅರಿವಿಲ್ಲ, ಬೇರೆಲ್ಲರಿಗೂ ಇದ್ದಿತು ಅಥವಾ ಇದೆ ಎನ್ನುವುದು ಶುದ್ಧ ಅತಾರ್ಕಿಕ ಮಾತು. ದುಃಖದ ಸಂಗತಿಯೇನೆಂದರೆ ವರ್ಗರಹಿತ ಸಮಾಜದ ರಚನೆಯನ್ನು ಧ್ಯೇಯವಾಗಿ ಇರಿಸಿಕೊಂಡಿರುವ ಆರೇಳು ಪಕ್ಷಗಳು ಇಂತಹ ಪ್ರಮುಖ ವಿಷಯಕ್ಕೆ ಸಂಬಂಧಿಸಿದಂತೆ ಸಂಧಾನಕ್ಕೆ ಕೂಡ ತಯಾರಾಗಲಿಲ್ಲ. ವರ್ಗ ವಿಭಜನೆಯನ್ನು ತೊಡೆದುಹಾಕುವ ಕ್ರಾಂತಿಕಾರಿಗಳು ತಮ್ಮ ತಮ್ಮಲ್ಲೇ ವರ್ಣವಿಭಜನೆ ಮಾಡಿಕೊಂಡಂತೆ ನಡೆದು ಕೊಳ್ಳುವುದು ಮುನ್ನಡೆಯ ಸೂಚನೆಯಲ್ಲ. ಸೈದ್ಧಾಂತಿಕ ಮಡಿವಂತಿಕೆಯ ಕಾರಣದಿಂದ ಇವರೆಲ್ಲಾ ಒಂದೆಡೆ ಕೂತು ಮಾತನಾಡಲು ಹೇಸಿದರೆ ಜನತೆ ಇವರಿಂದ ಏನು ನಿರೀಕ್ಷಿಸಬೇಕು ? ಕಮ್ಯುನಿಸ್ಟ್ ಪಕ್ಷಗಳಲ್ಲಿ ದೊಡ್ಡಣ್ಣ, ಸಣ್ಣ ತಮ್ಮಣ್ಣ ಇತ್ಯಾದಿ ಭಿನ್ನತೆಯನ್ನು ಗುರುತಿಸಲಾಗಿತ್ತು. ಈಗ ಪಂಚಮವೂ ಸೇರಿದಂತೆ ಶ್ರೇಣೀಕೃತ ವರ್ಣವಿನ್ಯಾಸವನ್ನು ಕಾಣಬಹುದೇನೊ ! ಉದಾಹರಣೆಗೆ, ಸಿ.ಪಿ.ಐ.(ಎಂ) ಮತ್ತು ಎಸ್.ಯು.ಸಿ.ಐ. ಪಕ್ಷಗಳು ಪರಸ್ಪರರನ್ನು ಅಸ್ಪೃಶ್ಯರಂತೆ ನಡೆಸಿಕೊಂಡಿರುವುದಕ್ಕೆ ವ್ಯಥಿಸಬೇಕೋ ಅಥವಾ ಅವರೀರ್ವರ ''ಸೈದ್ಧಾಂತಿಕ ಸ್ಪಷ್ಟತೆ''ಯನ್ನು ಮೆಚ್ಚಿ ಕೊಳ್ಳಬೇಕೋ ? ಇಂತಹ ದ್ವಂದ್ವವು ಕಾಣದ ಕೈಗಳಿಗೆ ಪ್ರಾಬಲ್ಯವನ್ನು ತುಂಬುತ್ತದೆ. ಆ ಕೈಗಳು ಕೇವಲ ಸಿ.ಪಿ.ಐ.(ಎಂ) ಪಕ್ಷವನ್ನು ಉತ್ಪಾಟಿಸುವುದಿಲ್ಲ; ಎಲ್ಲ ಛಾಯೆಗಳ ಎಡಪಕ್ಷಗಳಿಗೂ ಸಮಾನವಾದ ಹೊಡೆತ ಕೊಡುವುದು ಆ ಕೈಗಳ ನೀತಿ. ಎಡ ಪಕ್ಷಗಳಿಗಿರುವ ಎರಡು ಮೂರು ಗಡಿಗೆಗಳಲ್ಲಿ ಒಂದನ್ನು ಚೂರು ಚೂರು ಮಾಡಿದರೆ ಗುಜರಾತುಗಳ ಸರಣಿಗೆ ಪ್ರೇರಣೆ ಕೊಟ್ಟಂತಾಗುವುದಿಲ್ಲವೇ ಎಂಬುದನ್ನು ಎಲ್ಲ ಎಡ ಚಿಂತಕರೂ ತಮ್ಮ ತಮ್ಮಲ್ಲೇ ಪರಾಮರ್ಶೆ ಮಾಡಿಕೊಳ್ಳ ಬೇಕಾಗಿದೆ. ಕೂದಲು ಸೀಳುತ್ತಾ ರಾಜಕೀಯ ಸಿದ್ಧಾಂತಗಳನ್ನು ವಿಶ್ಲೇಷಿಸುವ ಸಾಮರ್ಥ್ಯ ಎಲ್ಲ ಕಮ್ಯುನಿಸ್ಟರಿಗೂ ಇರಬಹುದು. ಆದರೆ ಕೂದಲುಗಳನ್ನೆಲ್ಲಾ ಸೇರಿಸಿ ಸುಂದರವಾದ ಜಡೆಯೊಂದನ್ನು ಹೆಣೆಯುವುದನ್ನು ಅವರು ಕಲಿಯಬೇಕೆಂದು ನೈಜ ಜನಪರ ಅಭಿವೃದ್ಧಿಯ ಆಕಾಂಕ್ಷೆ ಹೊಂದಿರುವ ಜನತೆ ನಮ್ರವಾಗಿ ವಿನಂತಿಸಿ ಕೊಳ್ಳುತ್ತದೆ. ಒಡೆದು ಆಳುವ ಕುನೀತಿಯನ್ನು ಅನುಸರಿಸಿದರೆಂದು ಬ್ರಿಟಿಷರನ್ನು ಮೂದಲಿಸುವವರು ತಾವೇಕೆ ಒಡೆದುಹೋಗಲು ಸಮ್ಮತಿಸಿದರೆಂಬುದನ್ನು ವಿಶ್ಲೇಷಿಸಿಕೊಳ್ಳುವುದು ಆರೋಗ್ಯಕರ. ಅದು ಬೇರೆ ಸಂದರ್ಭಗಳಿಗೂ ಅನ್ವಯವಾಗುತ್ತದೆ. ಇಂದಿನ ನಂದೀಗ್ರಾಮಕ್ಕೂ ಸಹ.

# ಕನಸು ಅರಳದೆ ಪಯಣ ಮುಗಿಸಿದ ಪ್ರೇಮಾ

ಮಂಗಳಾ ಎನ್.

''ನನ್ನನ್ನು ಪ್ರೇಮಾ ಅಂತಲೇ ಕರೀರಿ. ನನಗದೇ ಇಷ್ಟ.'' ತಮಿಳುನಾಡಿನ ಖ್ಯಾತ ನರ್ತಕಿ, ನೃತ್ಯ ಸಂಯೋಜಕಿ ಚಿತ್ರಲೇಖಾ ತಮ್ಮ ತಂಡದೊಂದಿಗೆ ರಂಗಾಯಣಕ್ಕೆ ಬಂದಿದ್ದಾಗ, ಆಕೆಯ ಶಿಷ್ಯೆಯರು ಆಕೆಯನ್ನು ಹೆಸರಿನಿಂದಲೇ ಸಂಬೋಧಿಸುವುದನ್ನು ಕಂಡು ನಾವೆಲ್ಲ ಅಚ್ಚರಿಯಿಂದ ನೋಡುತ್ತಿದ್ದಾಗ ಪ್ರೇಮಾ ಕಾರಂತರು ಮೇಲಿನ ಮಾತನ್ನು ಹೇಳಿದ್ದರು. ನಮ್ಮ ಅವರ ಸಂಬಂಧ ಬಹುಶಃ ಶುರುವಾದದ್ದು ಹೀಗೆ. ಪ್ರೇಮಾ ಕಾರಂತರ ಹೆಸರು ನಮಗೆ ಪರಿಚಿತವಿತ್ತೇ ಹೊರತು ಹತ್ತಿರದಿಂದ ಅವರನ್ನು ನಾವು ಕಾಣಲು ಸಾಧ್ಯವಾಗಿದ್ದು ರಂಗಾಯಣದಲ್ಲಿ. ನಂತರ ರಂಗಾಯಣದ ಮೊದಲ ಮಹತ್ತರ ಪ್ರಯೋಗವಾಗಿದ್ದ ಹಿಪ್ಪೋಲಿಟಸ್ ನಾಟಕಕ್ಕೆ ವಸ್ತ್ರವಿನ್ಯಾಸ ಮಾಡಿದ್ದರು. ಆಗ ನಮಗೆ ಅವರು ಎಷ್ಟು strict ಎಂಬುದರ ಪರಿಚಯವಾಗಿತ್ತು. ನಮಗೋ ಎಲ್ಲವೂ ಹೊಸತು. ಅವರು ಪ್ರತಿಯೊಬ್ಬರಿಗೂ ವಸ್ತ್ರಗಳನ್ನು, ಆಭರಣಗಳನ್ನು ನೀಡಿ 'ಎಲ್ಲರೂ ಭದ್ರವಾಗಿಟ್ಟುಕೊಳ್ಳಬೇಕು. ಏನಾದರೂ ಕಳಕೊಂಡಿರೋ cut.' ಅನ್ನೋರು. ನಾವೆಲ್ಲ ಮುಖ ಮುಖ ನೋಡಿಕೊಳ್ಳುತ್ತಾ ಏನು cut ಅಂತೆ ಅಂತ ಪ್ರಶ್ನಿಸಿಕೊಳ್ಳುತ್ತಿದ್ದವು. ಈಗಲೂ ರಂಗಾಯಣದ costume ರೂಂನಲ್ಲಿ ಈ 'cut' ಪದ ಬಳಕೆಯಾಗುತ್ತಲೇ ಇರುತ್ತದೆ. ಅದು ಪ್ರೇಮಾ ಕಾರಂತರನ್ನು ನೆನಪಿಸಿಕೊಳ್ಳುವ ಬಗೆ. ಪ್ರೇಮಾ ಕಾರಂತರು ನಮಗೆಲ್ಲರಿಗೂ ಪ್ರೇಮಾ ಮೇಡಂ ಆಗಿದ್ದು ಹೀಗೆ.

ಹಾಗೆ ನೋಡಿದರೆ ನನಗವರ ಭೇಟಿ ನಾನು ಹೈಸ್ಕೂಲ್‌ನಲ್ಲಿದ್ದಾಗಲೇ ಆಗಬೇಕಿತ್ತು. ನಾನು ವಿಜಯ ಹೈಸ್ಕೂಲ್‌ನಲ್ಲಿ ಓದುತ್ತಿದ್ದಾಗ ನಮ್ಮ ಶಾಲೆಯ ಮಕ್ಕಳಿಗಾಗಿ ಅವರು ಆಲಿಬಾಬ ಮತ್ತು ೪೦ ಜನ ಕಳ್ಳರು ನಾಟಕ ಮಾಡಿಸೋಕೆ ಬಂದಿದ್ದರು. ಆದರೆ ಅವರು ಶಾಲೆಗೆ ಬಂದು ಮಕ್ಕಳನ್ನು ಆಯ್ಕೆ ಮಾಡಿಕೊಳ್ಳೊ ದಿವಸ ನಾನು ಯಾವ ಕಾರಣಕ್ಕೋ ಏನೋ ಶಾಲೆಗೆ ಚಕ್ಕರ್ ಹೊಡೆದಿದ್ದೆ. ಹಾಗಾಗಿ ಅವರ ಆಯ್ಕೆಪಟ್ಟಿಯಲ್ಲಿ ನನ್ನ ಹೆಸರು ಸೇರಿಕೊಳ್ಳಲಿಲ್ಲ. ಅಂದೇನಾದರೂ ನಾನು ನಾಟಕ ಮಾಡಿದ್ದಿದ್ದರೆ ನನಗೆ ನನ್ನ ರಂಗಭೂಮಿಯ ಗುರು ಪ್ರೇಮಾ ಕಾರಂತ ಆಗುತ್ತಿದ್ದರು. ಆದರೆ ನನಗದು ತಪ್ಪಿ ಹೋಗಿತ್ತು. ನಾನು ರಂಗಾಯಣಕ್ಕೆ ಸೇರಿ ಬಿ. ವಿ. ಕಾರಂತರು ನನಗೆ ಗುರುವಾಗಿದ್ದರು. ಪ್ರೇಮಾ ಕಾರಂತರು 'ಗುರುಪತ್ನಿ' ಯಾದರು. 'ಪ್ರೇಮಾ ಮೇಡಂ' ಆದರು. ನಂತರದ ದಿನಗಳಲ್ಲಿ ನನ್ನನ್ನು ಮಗಳಂತೆಯೇ ಕಾಣುತ್ತಿದ್ದ ಅವರು 'ಅಮ್ಮ' ಆದರು.

ನಾನು ಅವರೊಡನೆ ಹೆಚ್ಚೇನೂ ಕೆಲಸ ಮಾಡಿಲ್ಲ. ಮೊಟ್ಟ ಮೊದಲ ಬಾರಿಗೆ ಅವರೊಡನೆ ಕೆಲಸ ಮಾಡಿದ್ದು 'ಬಂಡ್ ಝುರೋಂಕೆ' ಹಿಂದಿ ಸಿನಿಮಾದಲ್ಲಿ. ಅವರು ನಿರ್ದೇಶಿಸುತ್ತಿದ್ದ ಆ ಚಲನಚಿತ್ರಕ್ಕೆ ವಸ್ತ್ರವಿನ್ಯಾಸ ಮಾಡಿದ್ದೆ. ಅದು ಬಿಟ್ಟರೆ ಅವರೊಡನೆ ಕೆಲಸ ಮಾಡಲು ಕೈ ಜೋಡಿಸಿದ್ದು ಬಿ. ವಿ. ಕಾರಂತರ ನಿಧನದ ನಂತರವೇ. ಅವರ ಜೀವನದ ಉಸಿರಾಗಿದ್ದ ಮಕ್ಕಳ ರಂಗಭೂಮಿಗಾಗಿ ಅವರು ಬಹಳಷ್ಟು ಪ್ರಯೋಗಗಳನ್ನು ನಡೆಸಿದ್ದಾರೆ. ಚಲನಚಿತ್ರ ನಿರ್ದೇಶನ, ವಸ್ತ್ರವಿನ್ಯಾಸ, ಡಾಕ್ಯುಮೆಂಟರಿಗಳು, ಥಿಯೇಟರ್ ವರ್ಕ್‌ಶಾಪ್‌ಗಳು, ವಸ್ತ್ರವಿನ್ಯಾಸದ ತರಗತಿಗಳು, ಫಿಲ್ಮ್ ಇನ್‌ಸ್ಟಿಟ್ಯೂಟ್‌ನಲ್ಲಿ ಪಾಠಗಳು – ಹೀಗೆ ಬಿಡಿ ಬಿಡಿಯಾಗಿ ಕೆಲಸ ಮಾಡುತ್ತಲೇ ವರ್ಷಕ್ಕೊಂದು ಮಕ್ಕಳಿಗಾಗಿ ನಾಟಕ ಮಾಡಿಸುವುದನ್ನು ಮಾತ್ರ ಮರೆಯುತ್ತಿರಲಿಲ್ಲ.

'ಮಕ್ಕಳು ಏನು ಮಾಡಿದರೂ ಚೆಂದ' ಅನ್ನುವ ಲೋಕಾರೂಢಿ ಮಾತನ್ನು ಅವರು ವಿರೋಧಿಸುತ್ತಿದ್ದರು. 'ಮಕ್ಕಳೂ ಚೆನ್ನಾಗಿ ಮಾಡುತ್ತಾರೆ' ಅನ್ನುವ ಸತ್ಯವನ್ನು ಎತ್ತಿ ಹಿಡಿಯುವ ಪ್ರಯತ್ನ ಮಾಡುತ್ತಿದ್ದರು. ಹಾಗಾಗಿ ಅವರ ನಾಟಕಗಳು ಎಂದೂ ಬಳಲಿದ್ದನ್ನು ಯಾರೂ ಕಂಡಿಲ್ಲ. ಅವರ ಮಕ್ಕಳ ನಾಟಕಗಳು ವರ್ಣರಂಜಿತವಾಗಿ, ವೈಭವೋಪೇತದಿಂದ ಭ್ರಮೆಯ ಲೋಕಕ್ಕೆ ಕೊಂಡೊಯ್ಯುತ್ತಿದ್ದವು. ರಂಗಸಜ್ಜಿಕೆ, ವಸ್ತ್ರವಿನ್ಯಾಸಕ್ಕೆ ಹೆಚ್ಚು ಪ್ರಾಶಸ್ತ್ಯವಿರುತ್ತಿತ್ತು. ಎಲ್ಲ ನಾಟಕಗಳಿಗೂ ಕಾರಂತರ ಅದ್ಭುತ ಸಂಗೀತವಿರುತ್ತಿತ್ತು. ಕಾರಂತರು ಸಮಯವಿಲ್ಲವೆಂದರೂ ಬಿಡದೆ ಅವರನ್ನು ಕೋಣೆಯೊಳಗೆ ಕೂಡಿಹಾಕಿ ಹಟಹಿಡಿದು ತಮ್ಮ ನಾಟಕಗಳಿಗೆ ಸಂಗೀತ ನಿರ್ದೇಶನ ಮಾಡಿಸಿಕೊಂಡಿದ್ದರು. ಕಾರಂತರು ಸಂಗೀತ ನೀಡಿದ ಕೊನೆಯ ಮಕ್ಕಳ ನಾಟಕ 'ಸುಣ್ಣದ ಸುತ್ತು' (ಕಕೇಶಿಯನ್ ಚಾಕ್ ಸರ್ಕಲ್). ಆದರೆ ಅನಾರೋಗ್ಯದಿಂದ ಬಳಲುತ್ತಿದ್ದ ಕಾರಂತರನ್ನು ಕಂಡು ''ನಿಮಗೆ ಆಯಾಸವಾಗುವುದಾದರೆ ನಾನು ಬೇರೆಯವರ ಕೈಯಲ್ಲಿ ಸಂಗೀತ ಮಾಡಿಸಿಕೊಳ್ಳುತ್ತೇನೆ. ಬಿಟ್ಟುಬಿಡಿ'' ಎಂದು ಪ್ರೇಮಾ ಹೇಳಿದರೂ ಈ ನಾಟಕಕ್ಕೆ ಮಾತ್ರ ಕಾರಂತರು ಹಟಹಿಡಿದು ಸಂಗೀತ ಮಾಡಿಕೊಟ್ಟಿದ್ದರು. ಕಾರಂತರ ನಂತರ ಗಜಾನನ, ಪ್ರೇಮಾ ಅವರ ನಾಟಕಗಳಿಗೆ ಜೊತೆಯಾದರು.

ಕೇವಲ ಕಾಗಕ್ಕ, ಗುಬ್ಬಕ್ಕ ಕತೆಗಳಷ್ಟೆ ಮಕ್ಕಳಿಗೆ ಮುಖ್ಯವಲ್ಲ. ಅವರಿಗೆ ಕ್ಲಾಸಿಕ್‌ಗಳ ಬಗ್ಗೆ ಗೊತ್ತಿರಬೇಕು, ಪ್ರಹಸನವೆಂದರೇನು ಎಂಬುದು ತಿಳಿದಿರಬೇಕು, ಗಂಭೀರವಾದದ್ದು ಅರ್ಥವಾಗಬೇಕು ಎಂಬ ಕಾರಣಕ್ಕಾಗಿ ಇತ್ತೀಚಿನ ವರ್ಷಗಳಲ್ಲಿ ಷೇಕ್ಸ್‌ಪಿಯರ್‌ನ 'ಕಿಂಗ್ ಲಿಯರ್' ನಾಟಕವನ್ನೂ ಬ್ರೆಕ್ಟ್‌ನ 'ಕಕೇಶಿಯನ್ ಚಾಕ್ ಸರ್ಕಲ್' ನಾಟಕಗಳನ್ನು ಮಕ್ಕಳಿಗಾಗಿ ಎಚ್. ಎಸ್. ವೆಂಕಟೇಶಮೂರ್ತಿಯವರ ಕೈಯಲ್ಲಿ ಹೊಸದಾಗಿ ಬರೆಸಿದ್ದರು. 'ಮರ್ಚೆಂಟ್ ಆಫ್ ವೆನಿಸ್' ನಾಟಕವನ್ನು ಮಾಡುವ ಕನಸು ಹೊತ್ತಿದ್ದರು.

ಸಂಗೀತ ನಾಟಕ ಅಕಾಡೆಮಿ ಪ್ರೇಮಾ ಕಾರಂತರಿಗೆ ವಸ್ತ್ರವಿನ್ಯಾಸಕಿ ಪ್ರಶಸ್ತಿಯನ್ನು ನೀಡಿ ಗೌರವಿಸಿತ್ತು. ಆಗ ಪ್ರೇಮಾ ವಸ್ತ್ರವಿನ್ಯಾಸಕ್ಕಿಂತಲೂ ನಾನು ಹೆಚ್ಚು ಕೆಲಸ ಮಾಡಿರುವುದು ಮಕ್ಕಳ ರಂಗಭೂಮಿಗಾಗಿ. ಹಾಗಾಗಿ ತಾವು ಅದಕ್ಕಾಗಿ ಪ್ರಶಸ್ತಿ ನೀಡಿದರೆ ತನಗೆ ಹೆಚ್ಚು ಸಂತೋಷವಾಗುತ್ತದೆ ಎಂಬ ಇಂಗಿತ ವ್ಯಕ್ತಪಡಿಸಿದರು. ಆದರೆ ಮಕ್ಕಳ ರಂಗಭೂಮಿಗೆಂದು ಯಾವ ಪ್ರಶಸ್ತಿಯೂ ಇಲ್ಲದಿರುವ ಕಾರಣ ತಾವು ಈ ಪ್ರಶಸ್ತಿಯನ್ನೇ ಸ್ವೀಕರಿಸಿ ಎಂದು ಅವರು ಹೇಳಿದೊಡನೆ ಕೆಂಡಮಂಡಲವಾದ ಪ್ರೇಮಾ, ಮಕ್ಕಳ ರಂಗಭೂಮಿಗಾಗಿ ಪ್ರಶಸ್ತಿಯೆಂಬುದೇ ಇಲ್ಲವಾದರೆ ನನಗೆ ನೀವು ಕೊಡುವ ಯಾವ ಪ್ರಶಸ್ತಿಯೂ ಬೇಕಿಲ್ಲ ಎಂದು ತಿರಸ್ಕರಿಸಿದರು. ಇದು ಮಕ್ಕಳ ರಂಗಭೂಮಿಯ ಪರವಾಗಿ ಅವರು ತೆಗೆದ ದನಿ; ಮಕ್ಕಳ ರಂಗಭೂಮಿಗೆ ಸಿಗಬೇಕಾದ ಮಾನ್ಯತೆ ಸಿಗುತ್ತಿಲ್ಲ ಎಂಬ ನೋವು; ಮತ್ತು ತಾನೆಂದಿಗೂ ಮಕ್ಕಳ ರಂಗಭೂಮಿಯ ಪರವಾಗಿರುವೆ ಎಂಬ ನಿಲುವಾಗಿತ್ತು. ಬೆನಕ ಮಕ್ಕಳ ಕೇಂದ್ರದ ೨೫ನೇ ವರ್ಷದ ಸಂದರ್ಭದಲ್ಲಿ ಅವರು ಮಕ್ಕಳ ರಂಗಭೂಮಿಗಾಗಿ ದುಡಿದ ಹಲವರನ್ನು ಗುರುತಿಸಿ ಸನ್ಮಾನಿಸಿದ್ದರು.

ಹುಟ್ಟಿನಿಂದಲೂ ಹೋರಾಟದ ಬದುಕನ್ನೇ ನಡೆಸಿರುವ ಪ್ರೇಮಾ ಎಲ್ಲ ಸಂಕಷ್ಟಗಳ ಮಧ್ಯೆಯೂ ಯಾವಾಗಲೂ ಗರಿಗರಿ ಬಟ್ಟೆ, ತೆಳುವಾದ make-up, ರುಚಿಕಟ್ಟಾದ ಅಡಿಗೆ, ಶಿಸ್ತಿನ ದಿನಚರಿ, ಸಮಯಕ್ಕೆ ಸರಿಯಾಗಿ ಔಷಧಿಗಳು, ಚೆಂದವಾದ ಮನೆ, ನಿಂಜನ ಆರೈಕೆ – ಇವುಗಳ ಮೂಲಕ ಜೀವನೋತ್ಸಾಹದ ಚಿಲುಮೆಯಂತೆ ಇರುತ್ತಿದ್ದರು. ಸಿಟ್ಟು ಬಂದಾಗ ಮುಲಾಜಿಲ್ಲದೆ ಜಗಳವಾಡುತ್ತಿದ್ದರು. ಯಾರ ಬಗ್ಗೆ ಕಿರಿಕಿರಿ, ಅಸಮಾಧಾನ ಮೂಡಿಬಂದರೂ ಫೋನಿನಲ್ಲಾದರೂ ಸರಿ ತಕ್ಷಣವೇ ಚುಕ್ತಾ ಮಾಡಿಬಿಡುತ್ತಿದ್ದರು. ಕಾರಂತರ ಸೃಜನಶೀಲ ಅತಿರೇಕಗಳನ್ನು ನಿಭಾಯಿಸಿದರು. ಅವರೆಂದೂ ಎಲ್ಲವನ್ನೂ ಸಹಿಸಿಕೊಂಡವರಂತೆ ಬದುಕಲಿಲ್ಲ. ಬದಲಾಗಿ ಅವುಗಳ ಜೊತೆ ಹೋರಾಡುತ್ತ ಬದುಕಿದರು. ಸ್ವಾತಂತ್ರ್ಯವನ್ನು ಚೆನ್ನಾಗಿ ಉಪಯೋಗಿಸಿಕೊಂಡರು. ಬದುಕಿನ ಬಗ್ಗೆ ಅವರಿಗಿದ್ದ ಈ ಸಕಾರಾತ್ಮಕ ಧೋರಣೆಯೇ ಅವರನ್ನು ಕೊನೆಯವರೆಗೂ ಜೀವಂತವಾಗಿಟ್ಟಿತ್ತು.



೭೫ನೇ ಹುಟ್ಟುಹಬ್ಬದ ಸಂದರ್ಭದಲ್ಲಿ ಶ್ರೀಮತಿ ಪ್ರೇಮಾ ಕಾರಂತರಿಗೆ ಲೇಖಕಿ ಹಾಗೂ ಇತರರು ಅಭಿನಂದನೆ ಸಲ್ಲಿಸುತ್ತಿರುವುದು

ಶಿಸ್ತು, ಯೋಜನೆ, ನಿರ್ದಾಕ್ಷಿಣ್ಯ, ನಿಷ್ಠುರ, ನಿಷ್ಟತನ, ಅಸಮಾಧಾನ, ಸಿಟ್ಟು, ಕಹಿಭಾವ, ಪ್ರೀತಿ, ಸ್ನೇಹ, ಸಂಭ್ರಮ, ಸಂತಸ, ತಮಾಷೆ, ಸಾಹಸ – ಈ ಎಲ್ಲವುಗಳ ಸಮ್ಮಿಶ್ರಣವೇ ಪ್ರೇಮಾ ಕಾರಂತ. ಕಾರಂತರ ಸಾವಿನ ನಂತರ ಸ್ವಲ್ಪ ಮೆತ್ತಗಾಗಿ ಬಿಟ್ಟಿದ್ದರಾದರೂ ಕೆಲಸವನ್ನು ಅದೇ ಚುರುಕಿನಿಂದ ಮಾಡುತ್ತಿದ್ದರು. ಬಾಬುಕೋಡಿ ರಂಗ ಪ್ರತಿಷ್ಠಾನದ ಕನಸು ಹೊತ್ತು ಓಡಾಡಿದರು; ಪರದಾಡಿದರು; ಸಿಟ್ಟಾಗಿ ಜಗಳ ಕಾಯ್ದರು; ಎಲ್ಲರ ಮೇಲೂ ಅಸಮಾಧಾನಗೊಂಡರು. ತಾನು ಸಾಯುವ ಮುನ್ನ ಪ್ರತಿಷ್ಠಾನಕ್ಕೊಂದು ರೂಪ ಕೊಡಬೇಕೆಂದು ಪರಿತಪಿಸಿದರು. ಕೊನೆ ಕೊನೆಗೆ ಕೊರಗಲು ಪ್ರಾರಂಭಿಸಿದರು. ಇತ್ತೀಚೆಗೆ ಆರು ತಿಂಗಳಿಂದ ತುಂಬ ಖಿನ್ನರಾಗಿಬಿಟ್ಟಿದ್ದರು. ಕೂತರೆ ನಿಂತರೆ ಒಂದೇ ಹಾಡು 'ಪ್ರತಿಷ್ಠಾನ'. ಅವರಂದು ಕೊಂಡಂತೆ ಯಾವುದೂ ಜರುಗಲಿಲ್ಲ. ಕಡೆಕಡೆಗೆ ಊಟದ ಬಗ್ಗೆ, ಬಟ್ಟೆಯ ಬಗ್ಗೆ, ಹೊರಗೆ ಓಡಾಡುವುದರ ಬಗ್ಗೆ, ಔಷಧಿಗಳನ್ನು ತೆಗೆದುಕೊಳ್ಳುವುದರ ಬಗ್ಗೆಯೂ ನಿರಾಸಕ್ತಿ ತೋರಲು ಪ್ರಾರಂಭಿಸಿದ್ದರು.

ಆಗಸ್ಟ್ ೧೫, ಪ್ರೇಮಾ ಕಾರಂತರ ಹುಟ್ಟುಹಬ್ಬವಾದ್ದರಿಂದ, ಬೆನಕ ಕೇಂದ್ರದ ಮಕ್ಕಳು ಪ್ರೇಮಾ ಅವರಿಗಾಗಿ ಒಂದು surprise birthday party ಏರ್ಪಡಿಸಿದ್ದರು. ಎಲ್ಲ ಹಳೆಯ ವಿದ್ಯಾರ್ಥಿಗಳಿಗೂ, ಅವರೊಡನೆ ಕೆಲಸ ಮಾಡುತ್ತಿದ್ದ ಸ್ನೇಹಿತರೆಲ್ಲರಿಗೂ SMS ಮೂಲಕ ಆಹ್ವಾನ ಹೋಗಿತ್ತು. ಅಂದು ಬೆಳಗ್ಗೆಯಿಂದಲೇ ಎಲ್ಲರೂ ಅವರ ಮನೆಗೆ ಬಂದು ಪ್ರೇಮಾ ಅವರನ್ನು wish ಮಾಡುತ್ತಿದ್ದರೆ ಅವರಿಗಾದ ಆನಂದ ಹೇಳತೀರದು. ಮಕ್ಕಳೆಲ್ಲ ಮೇಲೆ ಕಾರಂತರಂಗಮನೆಯನ್ನು ಅಲಂಕರಿಸುತ್ತಿದ್ದರೆ, ಪ್ರೇಮಾ ಅವರು, ನೀವೆಲ್ಲ ಸೇರಿ ಏನೋ ಮಾಡ್ತಿದೀರಿ ಎನ್ನುತ್ತಾ ಮೆಟ್ಟಲೇರಿ ಬಂದು ಕಾರಂತ ರಂಗಮನೆಯನ್ನು ಅಲಂಕರಿಸುತ್ತಿದ್ದ ಮಕ್ಕಳೊಂದಿಗೆ ಸೇರಿಕೊಂಡು ಇಡೀ ವಾತಾವರಣವನ್ನು informal ಮಾಡಿ ತಾವೂ ಸಂತೋಷಗೊಂಡು ಎಲ್ಲರನ್ನು ಸಂತಸದಲ್ಲಿ ಮುಳುಗಿಸಿದ್ದರು. "ನನ್ನ ಜೀವನದಲ್ಲಿ ನಾನೆಂದೂ ಹೀಗೆ birthday ಮಾಡಿಕೊಂಡಿರಲಿಲ್ಲ. ಇದೇ ಮೊದಲ ಸಲ. ಇವತ್ತು ನಾನು ಹತ್ತು ವರ್ಷ ಚಿಕ್ಕವಳಾಗಿಬಿಟ್ಟೆ" ಎಂದು ಸಂಭ್ರಮಿಸಿ, ಸಿಹಿ ತಿಂದು ಮಕ್ಕಳೊಡನೆ ಕುಣಿದಾಡಿದ ಪ್ರೇಮಾ, ಆದಾದ ಎರಡು ತಿಂಗಳಿಗೇ ಆಸ್ಪತ್ರೆಗೆ ದಾಖಲಾಗಿದ್ದಾರೆ. ತಳಮನೆಯ ಲೈಬ್ರರಿಯನ್ನು, ಸಂಗೀತ ಉಪಕರಣಗಳನ್ನು, ಮೇಲ್ಮನೆಯ ಕಾರಂತ ರಂಗಮನೆಯನ್ನು, ದೇವರಮನೆಯಲ್ಲಿದ್ದ ಆಡಿಯೊ ವೀಡಿಯೊ ಕ್ಯಾಸೆಟ್‌ಗಳು, ಸಿಡಿಗಳನ್ನು, ಆಫೀಸ್ ರೂಂನಲ್ಲಿ ಪ್ರತಿಷ್ಠಾನಕ್ಕೆ ಸಂಬಂಧಪಟ್ಟಂತೆ ಸರ್ಕಾರಕ್ಕೆ, ಮಂತ್ರಿಗಳಿಗೆ, ಆಫೀಸರ್‌ಗಳಿಗೆ ಬರೆದ ರಾಶಿ ರಾಶಿ ಫೈಲ್‌ಗಳನ್ನೂ, ಇನ್ನೂ ಸಂಸ್ಕರಣಗೊಳ್ಳಬೇಕಾಗಿದ್ದ ತಮ್ಮ ಆಟೋ ಬಯಾಗ್ರಫಿಯನ್ನು, ಮಗುವಿನಂತೆ ಹಿಂದೆ ಹಿಂದೆಯೇ ಸುತ್ತುತ್ತಿದ್ದ ನಿಂಜನನ್ನು, ನಮ್ಮೆಲ್ಲರನ್ನೂ ದಿಢೀರನೆ ಬಿಟ್ಟುಹೋಗಿದ್ದಾರೆ. ಮಾಡಬೇಕಾದ ಕೆಲಸಗಳನ್ನು ಕನವರಿಸುತ್ತಲೇ, ಅರಳಬೇಕಾಗಿದ್ದ ಕನಸುಗಳನ್ನು ಹೊತ್ತುಕೊಂಡೇ ಹೊರಟುಹೋಗಿದ್ದಾರೆ.

ಮಂಗಳಾ ಎನ್.
೯೦/೨, ೨ನೇ ಮುಖ್ಯರಸ್ತೆ, ೨ನೇ ಕ್ರಾಸ್, ಮಾರೇನಹಳ್ಳಿ, ಮಾರುತಿ ಲೇಔಟ್
ವಿಜಯನಗರ, ಬೆಂಗಳೂರು - ೫೬೦ ೦೪೦

'ಹೊಸತು' ಪತ್ರಿಕೆಯ ಸಹಸಂಪಾದಕರಲ್ಲೊಬ್ಬರಾದ ಪ್ರೊ|| ಚಿ. ಶ್ರೀನಿವಾಸರಾಜು ಅವರಿಗೆ ಈ ವರ್ಷದ ರಾಜ್ಯೋತ್ಸವ ಪ್ರಶಸ್ತಿಯನ್ನು ನೀಡಿ ಗೌರವಿಸಲಾಗಿದೆ. ಅಂತೆಯೇ ಪತ್ರಿಕೆಯ ಬೇರೆ ಹಲವು ಲೇಖಕರಿಗೆ ಸಹ ಈ ಪ್ರಶಸ್ತಿ ಸಂದಿದೆ. ಅವರೆಲ್ಲರನ್ನೂ 'ಹೊಸತು' ಹರ್ಷದಿಂದ ಅಭಿನಂದಿಸುತ್ತದೆ.

- ಸಂ.

## ಸೀಮಾತೀತ ಸಂತೆ ಕುರಿತು

ಯಾರ ಕಾವ್ಯಕೂ ಸಿಗದೆ ಆ ಸಂಜೆ
ಬಲಿಯಾಯ್ತು ಕತ್ತಲಕೆ ಗೆಳೆಯಾ
ಸಂಜೆಯಲಿ ಸೊಗಸಿತ್ತು
ಹೊಂಗಿರಣ ತುಂಬಿತ್ತು
ಹೊಂಗಿರಣದೆಳೆಗಳಲಿ
ಬದುಕಿನಾ ಛಲವಿತ್ತು.
ಕತ್ತಲೆಯ ಬೇಟೆಯಲಿ
ಬೇಟೆಗೇ ಬೇಟೆಯಾಯ್ತು.
ಕಾಂಚಾಣ ಬರಿ ಕುರುಡಲ್ಲೋ ಅಣ್ಣಾ
ಮೈಮನಗಳ ವ್ಯಾಪಿಸಿದ ಬರಡು.

ಅಂದು ಯಂತ್ರ ದಾಹ
ಇಂದು ತಂತ್ರ ದಾಹ.
ಸೀಮಾತೀತ ಸಂತೆಯಲಿ;
ಭೂಮಿ ನದಿ ಬೆಟ್ಟ ಸಾಗರ ಪರ್ವತ
ಗಾಳಿ ಸೂರ್ಯ ಚುಕ್ಕೆ ಚಂದ್ರ
ಆಕಾಶಗಳಿಗೆಲ್ಲ ಬೆಲೆ ನಿಗದಿಯಾಯ್ತು.

ಬೆಲೆ ಇಲ್ಲದ್ದು ಮನುಷ್ಯ ಮಾತ್ರ.
ಆಚರಣೆಯ ಅಂಗಳದಲಿ
ಆದರ್ಶಗಳ ಆತ್ಮಹತ್ಯೆ.

ನಿಲ್ಲಲಾರದು ಭೂಮಿ,
ಕತ್ತಲೆಯ ಸೆರಗಲ್ಲೆ ಬೆಳಕಿನಾ ಗಿರಿಗೆ
ಬಾ.
ನನ್ನೊಳಗಿನ ನಿನ್ನೊಳಗಿನ ನೀನು
ಕೂತು ಮಾತನಾಡೋಣ.

ಮಾತು ಎಂದರೆ ವಚನ
ಮಾತು ಎಂದರೆ ಸಂವಹನ
ಮನದಾಳದ ಮಾತುಗಳೇ
ಮನ್ವಂತರದ ಮುನ್ನುಡಿ
ಬಾ.
ನನ್ನೊಳಗಿನ ನಾನು ನಿನ್ನೊಳಗಿನ ನೀನು
ಕೂತು ಮಾತನಾಡೋಣ.

ಡಾ|| ಸಿದ್ದನಗೌಡ ಪಾಟೀಲ
ಘಾಟೆ ಭವನ, ಮಲ್ಲೇಶ್ವರಂ ೧೫ನೇ ಅಡ್ಡರಸ್ತೆ, ಬೆಂಗಳೂರು - ೫೬೦ ೦೦೩



# ಅವಳು ಕಲಿಸಿದ ಪಾಠ

ಬ. ನಾ. ರಘುರಾಮ

ಅದೊಂದು ಪುಟ್ಟ ಹಿರಿಯ ಪ್ರಾಥಮಿಕ ಶಾಲೆ. ನಗರಕ್ಕೆ ಸಮೀಪವೇ ಇದ್ದ ಹಳ್ಳಿಯದು. ವಾರ್ಷಿಕ ಪರೀಕ್ಷೆಗೆ ಸಮೀಪದ ದಿನಗಳು. ನಾಲ್ಕನೆಯ ತರಗತಿಯ ಮಕ್ಕಳು ಮಾತನಾಡಿಕೊಳ್ಳುತ್ತಿದ್ದರು: ''ಈ ಸಾರಿ ನಿಮಗ್ಯಾರೇ ಮೇಡಮ್.'' ''ದೇವರ ದಯ ಕಣೇ, ಶಾರದಾ ಬಾಯಿ ಮೇಡಮ್.'' ಮೂರರಿಂದ ನಾಲ್ಕಕ್ಕೆ ಬರುವ ಹುಡುಗ ಅಂದ, ''ಪುಣ್ಯವಂತರು ಕಣ್ರೇ ನೀವು, ಈ 'ಗೂಬೇ ಮೇಡಮ್'ನ ತಪ್ಪಿಸಿ ಕೊಂಡು ಹೋಗುತ್ತಿದ್ದೀರಿ. ನಮಗೆ ಅವಳೇ ಗತಿ. ಏನಾಗತ್ತೋ ನಮ್ಮ ಗತಿ!''

ಅವಳನ್ನು ಕಂಡರೆ ಯಾರಿಗೂ ಆಗುತ್ತಿರಲಿಲ್ಲ, ಎಲ್ಲ ಶಿಕ್ಷಕ-ಶಿಕ್ಷಕಿಯರು, ಮಕ್ಕಳು, ಸೇವಕರು ಎಲ್ಲರಿಗೂ. ಮಕ್ಕಳ ತಂದೆ ತಾಯಿಯರಿಗೂ ಅಷ್ಟೇ. ಅವಳಿಗೆ ಗೆಳತಿಯರು ಇರಲಿಲ್ಲ, ಒಂಟಿಬಡಕಿ. ಅವಳ ರೂಪೋ! ನೀಳ ಬಡಕಲು ನಿಲವು, ಉಬ್ಬು ಹಲ್ಲು, ವಿಕಾರ ನೋಟ. ಸಾಲದೆಂದರೆ ಸಿಡುಕು ಮೋರೆ. ಬಿಡುವು ಹೊತ್ತಿನಲ್ಲಿ ಯಾರ ಜೊತೆಯೂ ಸೇರದೆ ಒಬ್ಬಳೇ ಕೂತಿರುತ್ತಿದ್ದಳು. ಮಕ್ಕಳು ಕೋಣೆಯಲ್ಲಿ ಹಣಕಿದರೆ ಅಂಜಿ ಓಡುತ್ತಿದ್ದರು.

ಐದನೇ ತರಗತಿಗೆ ತೇರ್ಗಡೆಯಾಗಲಿದ್ದ ಮಕ್ಕಳಲ್ಲೊಂದು ಹುಡುಗಿ ಅಂದಳು, ''ಏ, ಯಾಕೋ ಹಾಗಂತೀಯ? ಅವಳ ಕ್ಲಾಸಿನಲ್ಲಿ ಬೇಕಾದಷ್ಟು ತಮಾಷೆ ಇರತ್ತಲ್ಲ!'' ನಿಜ, ಮೇಜಿನ ಡ್ರಾಅರ್ ತೆಗೆದ ಕೂಡಲೇ ಛಂಗ್ ಎಂದು ಇಲಿ ಅವಳ ಮೈ ಮೇಲೆ ಹಾರುವುದು. ಬೆಚ್ಚಿ ಅವಳು ಕುಸಿದರೆ ಮಕ್ಕಳು ಮುಸಿಮುಸಿ ನಗುವರು, ಗಟ್ಟಿಯಾಗಿ ನಗಲು ಧೈರ್ಯ ಬೇಕಲ್ಲ. ಅದಿಲ್ಲವಾದರೆ ಡ್ರಾಅರ್ ಒಳಗೆ ಕೆಟ್ಟ ವಾಸನೆ ಹೊಡೆಯುವ ಕೊಳೆತ ಈರುಳ್ಳಿ, ಟಮೇಟೋ ಅಥವಾ ಶಾಯಿ ತೊಪ್ಪಡಿ, ಇಂಥ ಪುಂಡಾಟಿಕೆ ಇರದ ದಿನವೇ ಇರದು. ಅವಳು ರೇಗಾಡುತ್ತಿರಲೇ ಇಲ್ಲ, ಮೌನವಾಗಿ ಸಹಿಸಿಕೊಳ್ಳುವುದೇ ಅಭ್ಯಾಸವಾಗಿ ಹೋಗಿತ್ತು ಅವಳಿಗೆ. ಡ್ರಾಅರ್‌ಗೆ ಬೀಗ ಹಾಕಿ ನೋಡಿದ್ದಳು. ಹಾಕಿದ ಬೀಗಗಳೆಲ್ಲ ಮುರಿಯುತ್ತಿದ್ದರಾಗಿ ಆ ಪ್ರಯತ್ನ ನಿಂತಿತ್ತು. ಮುಖ್ಯೋಪಾಧ್ಯಾಯಿನಿಗೆ ದೂರು ಸಹ ಅವಳು ಕೊಡುತ್ತಿರಲಿಲ್ಲವಾಗಿ ಮಕ್ಕಳ ಚೇಷ್ಟೆಗೆ ಕಡಿವಾಣವೇ ಇರಲಿಲ್ಲ. ಹೀಗಾಗಿ ಕೇಳಿದರೆ ಕೇಳಲಿ, ಬಿಟ್ಟರೆ ಬಿಡಲಿ ಎಂದು ದೊಡ್ಡ ದನಿಯಲ್ಲಿ ಪಾಠ ಮಾಡುತ್ತಿದ್ದಳು. ಹೇಳಿಕೊಳ್ಳುವಂಥ ಶಿಕ್ಷಕಿ ಏನಾಗಿರಲಿಲ್ಲ. ಪರೀಕ್ಷೆ ದಿನಗಳು ಹತ್ತಿರವಾದಾಗ ಮಾತ್ರ ಮಕ್ಕಳ ಚೇಷ್ಟೆ ಸ್ವಲ್ಪ ನಿಲ್ಲುತ್ತಿತ್ತು. ಪಾಸು ಫೇಲು ಅವಳ ಕೈಲಿ ಇರುತ್ತದಲ್ಲ ಎಂದು. ಆದರೆ ಅವಳು ಯಾರನ್ನೂ ಫೇಲ್ ಮಾಡುತ್ತಿರಲೇ ಇಲ್ಲ. ಎಲ್ಲರೂ ಪಾಸ್. ಸದ್ಯ ಅವರ ಕಾಟ ಕೆಲವು ದಿನವಾದರೂ ತಪ್ಪುತ್ತದಲ್ಲ! ಬರುವ ವರ್ಷದ ಹೊಸ ಮಕ್ಕಳಾದರೂ ಸ್ವಲ್ಪ ಕಡಿಮೆ ಕಾಟ ಕೊಡುವರೊ?... ಆ ಆಸೆ ಎಂದೋ ಕಮರಿತ್ತು.

ಒಂದು ಮಳೆಯ ದಿವಸ ಒಂದು ಬಡಕಲು ಹುಡುಗಿ ಲೇಟಾಗಿ ಕ್ಲಾಸಿಗೆ ಬಂದು ಬಾಗಿಲಲ್ಲಿ ಛಳಿ ಹಾಗೂ ಭಯಗಳಿಂದ ನಡುಗುತ್ತ ನಿಂತಿತು. ''ರೇವಮ್ಮಾ, ದಿನಾ ಲೇಟಾಗಿ ಬರ್ತೀಯಲ್ಲ ನಿಂಗೆ ನಾಚಿಕೆ ಆಗೋಲ್ಲಾ? ಥೂ, ಹೆಡ್ಮೇಡಮ್‌ಗೆ ಸುಟ್ಟು ಮುಸುಡಿ ತೋರ್‍ಸಿ ಬಾ, ಹೋಗು.'' ಹುಡುಗಿ ಹಾಗೇ ನಿಂತಿತ್ತು. ''ತೋರ್‍ಸಿ ಬಂದಾಯ್ತ? ನಡೀ ಒಳಗೆ, ಕುಕ್ಕರಿಸು.'' ಆ ಮಗುವನ್ನು ಕಂಡರೆ ಮಾತ್ರ ಅವಳು ಸದಾ ರೇಗುತ್ತಿದ್ದಳು, ಬಯ್ಯುತ್ತಿದ್ದಳು, ಕಂಡರೆ ಆಗದವಳಂತೆ ವರ್ತಿಸುತ್ತಿದ್ದಳು. ಆ ಹುಡುಗಿ ಸಹ ಕಣ್ಣೀರು ತಂದುಕೊಂಡು ಪಿಳಿಪಿಳಿ ನೋಡುತ್ತ ನಿಲ್ಲುತ್ತಿತ್ತು. ಎಲ್ಲ ಮಕ್ಕಳು ಆ ಮಗುವನ್ನು ಹಾಸ್ಯ ಕುಚೇಷ್ಟೆ ಮಾಡುವವರೇ. ಜಿಗಟುವರು, ಅವಳ ಸ್ಲೇಟು ಪುಸ್ತಕಗಳನ್ನು ಬಚ್ಚಿಟ್ಟು ಗೋಗರೆಸುವರು. ಯಾವ ರೀತಿಯೂ ಆ ಮಗು ಪ್ರತಿಭಟಿಸುತ್ತಿರಲೇ ಇಲ್ಲ. ಶಿಕ್ಷಕಿಗೂ ದೂರು ಕೊಡುತ್ತಿರಲಿಲ್ಲ. ಮೌನವಾಗಿ ಸಹಿಸಿಕೊಳ್ಳುತ್ತಿತ್ತು. ಪಾಪ! ಒಂದೆರಡು ಮೈಲು ದೂರದಿಂದ ಒಂಟಿಯಾಗಿ ಶಾಲೆಗೆ ಬರಬೇಕಾಗಿತ್ತು. ತಿನ್ನಲು ತಿಂಡಿ-ತೀಪಲು ಇರದೆ ಹಸಿದೇ ಆ ದೂರ ನಡೆಯಬೇಕಾಗುತ್ತಿತ್ತು. ಸಾಲದ್ದಕ್ಕೆ ಮಳೆಗಾಲದಲ್ಲಂತೂ ಇನ್ನೂ ಫಜೀತಿ. ಲೇಟ್ ಬರೋದು ಒಂದು ರೀತಿ ನಿರ್ವಾಹವಿಲ್ಲವಾಗಿತ್ತು. ಯಾರಿಗೂ ಆ ಮಗುವಿನ ಮನೆಯ ಪರಿಸ್ಥಿತಿ ತಿಳಿದುಕೊಳ್ಳುವ ಆಸಕ್ತಿ ಇರದೆ ಕೇವಲ ಬಯ್ಗಳು ಮಾತ್ರ.

ಈ ಹುಡುಗಿಯನ್ನು ಕಂಡರೆ ಮಾತ್ರ ಇವಳು ಏಕೆ ಸಿಡಿಮಿಡಿಯಾಗುತ್ತಿದ್ದಳು? ಹುಡುಗಿ ತನ್ನ ಪ್ರತಿರೂಪು! ಒಂಟಿ ಬಡಕಿ, ಅಂಜುಬುರುಕಿ, ಎಲ್ಲರ ಹಾಸ್ಯಕ್ಕೆ ಕುಚೇಷ್ಟೆಗೆ ಏಕೈಕ ಗುರಿ. ಪ್ರತಿಭಟನೆಯ ಯತ್ಕಿಂಚಿತ್ ರೋಷವೇ ನಾಸ್ತಿ. ತಾನು ಸಿಡಿಮಿಡಿಗೊಳ್ಳಲು, ಯಾವ ಪ್ರತೀಕಾರವೂ ತೋರದಂಥ ಆ ಅಸಹಾಯಕ ಮಗುವನ್ನು ಕಾಣುವಾಗಿನ ಕಳಕಳಿ – ಅದಕ್ಕೆ ನೆರವಾಗಲು ತನ್ನ ಅಶಕ್ತಿ ಎರಡೂ ಕೂಡಿ ಕಾರಣವಾಗುತ್ತಿತ್ತು. ಮಧ್ಯಂತರ ಬಿಡುವು ವೇಳೆ ಎಲ್ಲ ಮಕ್ಕಳೂ ಈ ಮಗುವಿನ ಕಡೆಗೂ ನೋಡದೆ ನಗುತ್ತ ಕೆಲೆಯುತ್ತ ಹೊರನಡೆದು ಒಟ್ಟಾಗಿ ಕುಳಿತು ಪರಸ್ಪರ ಹಂಚಿಕೊಳ್ಳುತ್ತ, ಉಣ್ಣುತ್ತಿದ್ದರೆ, ಇದು ತಿನ್ನಲು ಏನೂ ಇರದೆ ಒಂದೇ ಹೊರಗೆ ಕೂತಿರುತ್ತಿತ್ತು, ಅವರ ಕಡೆ ಆಗಾಗ ನೋಡುತ್ತ.

ಮಕ್ಕಳಿಗೆ ಒಬ್ಬರನ್ನು ಕಂಡರೆ ಅಸಡ್ಡೆ, ಸ್ವಲ್ಪವೂ ಆಗದಿರುವುದಕ್ಕೆ ಒಂದೆರಡು ಕಾರಣಗಳಿರುತ್ತವೆ. ತಮ್ಮಂತೆಯೇ ಹುಡುಗಾಟಿಕೆ, ಲವಲವಿಕೆ, ನಗು-ಹಾಸ್ಯ ಇರುವವರೊಡನೆ ಬೇಗ ಬೆರೆಯುತ್ತಾರೆ. ಅವಿಲ್ಲದವರೊಡನೆ ಸ್ನೇಹ ತೋರುವುದು ಅಪರೂಪ. ಜೊತೆಗೆ ಅವರ ಕೀಟಲೆಗೆ, ಹಾಸ್ಯಕ್ಕೆ ಗುರಿಯಾಗಬಲ್ಲ ಒಂದು ಪ್ರಾಣಿ ಎಂದು ಒಳಗೇ ಹಿಗ್ಗು. ತಮ್ಮ ಬಗ್ಗೆ ಚಾಡಿ, ದೂರು ಯಾವುದೂ ಮಾಡದ ರೇವಮ್ಮನ್ನ ಎಲ್ಲರೂ ದೂರವೇ ಇರಿಸಿದ್ದರು.

ಅವತ್ತು ಆ ಮಗು ಲೇಟಾಗಿ ಬಂದು ಬಾಗಿಲಲ್ಲಿ ನಿಂತಾಗ ಅವಳ ಬಡಕಲು ಮೈ ಮೇಲಿದ್ದ ಹೊಸದರಂತಿದ್ದ ಕೆಂಪು ಕೋಟನ್ನು ಈ ಶಿಕ್ಷಕಿ ಗಮನಿಸಿರಲಿಲ್ಲ. ಎಲ್ಲ ಮಕ್ಕಳು ನೋಡಿ ಗುಸುಗುಸು ಪಿಸಪಿಸ-ಕಿಸಿಕಿಸಿ ಮಾಡಿದ್ದರು. ಆ ಕೋಟು ದೊಡ್ಡದನ್ನು ಚಿಕ್ಕದಾಗಿ ಮಾಡಿದಂತಿತ್ತು. ಅಡ್ಡಾ-ದಿಡ್ಡಿ ಹೊಲಿಗೆ, ಚಳಿ ಏನೂ ಹೋಗುವಂತಿರಲಿಲ್ಲ. ತೇಪೆಗಳು ಕಾಣುತ್ತಿತ್ತು. ಬಿಡುವು ಬಿಟ್ಟಾಗ ರೇವಾ ಆ ಕೋಟು ಬಿಚ್ಚಿ, ಅದನ್ನು ತಗುಲಿಸಲು ಜಾಗವೇ ಇರದೆ, ನೀಟಾಗಿ ಮಡಿಚಿ ಮುಚ್ಚಿದ ಕಿಟಕಿ ಅಂಚಿನಲ್ಲಿಟ್ಟು ಕೋಣೆಯ ಹೊರಗೆ ಒಬ್ಬಳೇ ಕುಳಿತು ಇತರ ಮಕ್ಕಳು ತಿನ್ನುವುದು ಮುಗಿಸಿ ಆಡುತ್ತಿರುವುದನ್ನು ಮಿಕಿಮಿಕಿ ನೋಡುತ್ತಿದ್ದಳು.

ತರುವಾಯ ಮತ್ತೆ ಪಾಠ ಪಿರಿಯಡ್‌ಗಳು ಮುಗಿದು ಶಾಲೆ ಬಿಟ್ಟಿತು. ಮಕ್ಕಳೆಲ್ಲ ಮನೆಗಳಿಗೆ ಕೇಕೆ ಹೊಡೆಯುತ್ತ ಓಡಿದರು. ಎಲ್ಲ ಶಿಕ್ಷಕಿಯರು ಮನೆಗಳಿಗೆ ಹೋಗಲು ಸಿದ್ಧರಾಗುತ್ತಿದ್ದರು. ಇವಳೊಬ್ಬಳು ಕ್ಲಾಸಿನಲ್ಲೇ ಮುರಕಲು



ರ್ಚಿಯನ್ನೊರಗಿಕೊಂಡು ಕಣ್ಮುಚ್ಚಿಕೊಂಡು ಕುಳಿತೇ ಇದ್ದಳು. ಹೊರಗೆ ಧಪ್ ಧಪ್ ಎಂದು ಟ್ಟು ಬಿಟ್ಟು ಸಪ್ಪಳವಾಗುತ್ತಿದ್ದುದು ಸ್ವಲ್ಪ ಹೊತ್ತಾದ ಬಳಿಕ ಅವಳಿಗೆ ಕೇಳಿಸಿತು. ಆದರೂ ಅದರ ಡೆ ಗಮನ ಹರಿಸದೆ ಹಾಗೆಯೇ ಕುಳಿತಿದ್ದಳು. ಇನ್ನೂ ಸ್ವಲ್ಪ ಹೊತ್ತಾದ ಮೇಲೆ ಅಂಜುತ್ತಂಜುತ್ತಾ ೀವಾ ಕೋಣೆಯೊಳಕ್ಕೆ ಕಾಲಿರಿಸಿದಳು. ಅವಳ ಕೈ ಮೈ ಎಲ್ಲ ಧೂಳುಮಯವಾಗಿತ್ತು. ಕೆನ್ನೆಗಳ ಮೇಲೆ ಬರೆಯಂತೆ ಗೀರುಗಳಿದ್ದುವು. ಮೇಡಮ್ ಬಳಿಗೆ ಸದ್ದಿಲ್ಲದೆ ಬಂದು ನಿಂತಳು. ಮೇಡಮ್ ತಲೆಯನ್ನು ಎರಡೂ ಕೈಗಳಿಂದ ಒತ್ತಿ ಹಿಡಿದುಕೊಂಡು ಬೆನ್ನು ಗೂನು ಮಾಡಿಕೊಂಡು ಕಣ್ಮುಚ್ಚಿಕೊಂಡೇ ಕುಳಿತಿದ್ದಳು. ರೇವಾ ಉಸಿರಿದಳು, ''ಮೇಡಮ್.'' ಕಣ್ಣು ಬಿಡದಿದ್ದುದು ಕಂಡು ಸ್ವಲ್ಪ ದನಿ ಏರಿಸಿ, ''ಮೇಡಮ್'' ಎಂದಾಗ ಅವಳು ತಲೆ ಎತ್ತಿ ನೋಡಿದಳು. ''ಏನು ? ಏನು ಬೇಕು'' ಗದ್ದರಿಸಿ ಕೇಳಿದಳು. ''ಮೇಡಮ್, ನನ್ನ ಕೋಟು... ನಂಗೆ ಸಿಗ್ತಾ ಇಲ್ಲ'' ಎಂದು ಹುಡುಗಿ ವಟಗುಟ್ಟಿತು. ಅವಳು ಎದ್ದು ಹುಡುಗರು ತಮ್ಮ ಕೋಟು ಪುಸ್ತಕಗಳಿರಿಸಿದ್ದ ಕಡೆಗೆ ನಡೆದಳು. ತಲೆ ಮೇಲೆತ್ತಿದಾಗ ಮೇಲ್ಕಿಟಕಿಗೆ ಕೆಂಪು ಬಣ್ಣದ ಕೋಟು ಸಿಕ್ಕುಹಾಕಿಕೊಂಡಿರುವುದು ಕಂಡಿತು. ಯಾವುದೋ ಕಿಡಗೇಡಿ ಹುಡುಗ ಆಟಕ್ಕೆ ಹೋಗ್ತಾ ರೇವಾಳ ಕೋಟನ್ನು ಮೇಲಕ್ಕೆಸೆದು ನಡೆದಿದ್ದ. ಯಾರಿಗೂ ಎಟುಕಿಸುವಂತಿರಲಿಲ್ಲ. ''ಎಗರಿ ಎಗರಿ ಸಾಕಾಯ್ತು. ಮೇಡಮ್, ಸಿಗ್ತಾನೇ ಇಲ್ಲ.'' ರೇವಾಳ ದನಿಯಲ್ಲಿ ದೈನ್ಯವಿತ್ತು. ''ಹೋಗು, ಜವಾನನ್ನ ಕರಕೊಂಡು ಬಾ, ನಾನೇನೂ ಕೋತಿಯಲ್ಲ!'' ರೇವಾ ಒಬ್ಬಳೇ ಹಿಂದಿರುಗಿ ಬಂದಾಗ ಮೇಡಮ್ ನಿಂತಲ್ಲಿಯೇ ಮೇಲೆ ನೋಡುತ್ತ ನಿಂತೇ ಇದ್ದಳು. ''ಏನು ? ಯಾಕೆ ಒಬ್ಬಳೇ ಬಂದೆ ?'' ಜೋರಾಗಿ ಕೇಳಿದಳು. ''ಅವನಿಗೆ ಬೇರೆ ಕೆಲಸವಿದೆಯಂತೆ, ನಿಮ್ಮ ಕೈಲೇ ತೆಗೆಸಿಕೋ ಹೋಗು ಎಂದ, ಮೇಡಮ್'' ಎಂದಿತು ಹುಡುಗಿ. ಮೇಡಮ್ ಮುಖ ಅವಮಾನ ದಿಂದ ಕಳೆಗುಂದಿತು. ಮಹಾ ಸಿಟ್ಟೂ ಬಂದಿತು. ಜವಾನನಿಗೂ ತನ್ನ ಲಕ್ಷ್ಯವಿಲ್ಲವೆಂದು ಅವಳಿಗೂ ತಿಳಿದಿತ್ತು. ಇತರ ಎಲ್ಲರಂತೆ ಅವನೂ ! ಅವಳು ಸ್ವಲ್ಪ ಸುಮ್ಮನೆ ನಿಂತು, ''ಏನು ನೋಡ್ತಾ ನಿಂತಿ, ಮುಂಡೇದೆ ? ಹೋಗು, ಆ ಕುರ್ಚಿ ಎಳೆದುಕೊಂಡು ಬಾ.'' ಅದನ್ನು ಕಿಟಕಿಯ ಬಳಿ ಇಟ್ಟು ಅದರ ಮೇಲೆ ಮೆಟ್ಟಂಗಾಲಲ್ಲಿ ನಿಂತು ಕೋಟು ಎಟುಕಿಸಿಕೊಳ್ಳಲು ಯತ್ನಿಸಿದಳು. ನಾಲ್ಕಾರು ಸಾರಿ ಪ್ರಯತ್ನದ ತರುವಾಯ ಸಿಕ್ಕಿತು. ಅದನ್ನು ಹರಿದರೆ ಹರಿಯಲಿ ಎಂದೆಳೆದು ಬೇಕೆಂತಲೇ ಹುಡುಗಿಯ ಕಾಲು ಬಳಿ ಧೂಳು ತುಂಬಿದ್ದ ನೆಲದ ಮೇಲೆ ರೊಯ್ಯನೆ ಬೀಸಿ ಒಗೆದಳು. ಕುರ್ಚಿಯಿಂದ ಇಳಿದಾಗ ಅವಳ ಮುಖವೆಲ್ಲ ಬೆವತು ಮುದ್ದೆಯಾಗಿತ್ತು.

ಇಷ್ಟಕ್ಕೆಲ್ಲ ಕಾರಣವಾಗಿದ್ದ ಧೂಳು ಅಂಟಿದ್ದ ತನ್ನ ಕೋಟನ್ನು ರೇವಾ ಎತ್ತಿಕೊಂಡು ತಲೆ ಎತ್ತಿದಾಗ ಅವಳ ಮುಖ ಕೆಂಪಡರಿತ್ತು: ನಾಚಿಕೆ, ಅವಮಾನದಿಂದ. ಅಲ್ಲದೆ ಮೇಡಮ್ ಬೇಕೆಂತಲೇ ಧೂಳಿನಲ್ಲಿ ಅದನ್ನು ಎಸೆದದ್ದು ಸಿಟ್ಟೂ ಬರಿಸಿತ್ತು. ಅದಕ್ಕಂಟಿದ್ದ ಧೂಳು ಕೊಡವುತ್ತ ''ಬಾಳಾ ಉಪಕಾರ ಮಾಡಿದಿರಿ, ಮೇಡಮ್'' ಎಂದಾಗ ಅವಳ ಕಣ್ಣುಗಳು ದ್ವೇಷಕಾರುವಂತಿದ್ದವು. ಮೇಡಮ್ ತನ್ನ ಒಣಕಲು ಕೈಯಿಂದ ರೇವಾಳ ರೆಟ್ಟೆಯನ್ನು ಬಲವಾಗಿ ಹಿಡಿದುಕೊಂಡಳು. ಹುಡುಗಿ ಹೆದರಿಕೊಂಡು ಮುಖ ಬಿಳಿಚಿ ಮೇಡಮ್ ಕಡೆಗೆ ನೋಡಿದಳು. ಆಕೆ ತನ್ನ ಔಡು ಕಚ್ಚಿಕೊಂಡು, ಕಣ್ಣುಗಳು ಕೆಂಡದಂತಾಗಿ ನಡುಗುತ್ತಿದ್ದಳು. ರೇವಾಳ ರಟ್ಟೆ ಹಿಡಿತ ಇನ್ನಷ್ಟು ಬಿಗಿಮಾಡಿ ಅವಳನ್ನು ಬಲವಾಗಿ ಅಲ್ಲಾಡಿಸಿಬಿಟ್ಟಳು. ರೇವಾ ನಡುಗಿ, ಕೊಸರಿಕೊಳ್ಳಲು ಯತ್ನಿಸಿದಳೇ ಆದರೂ ಹಿಡಿತ ಬಿಡಲಿಲ್ಲ. ಒಮ್ಮೆಲೇ ಹುಡುಗಿ ತಲೆ ಪಕ್ಕಕ್ಕೆ ತಿರುಗಿಸಿ ತನ್ನ ರಟ್ಟೆ ಹಿಡಿದಿದ್ದ ಮೇಡಮ್ ಕೈಯನ್ನು ಬಲವಾಗಿ ಕಚ್ಚಿಬಿಟ್ಟಳು. ಮೇಡಮ್ ನೋವಿನಿಂದಾಗಿ ಚೀರಿ ಹುಡುಗಿಯನ್ನು ನೆಲಕ್ಕೆ ಕುಕ್ಕಿದಳು. ತತ್‌ಕ್ಷಣ ರೇವಾ ತಪ್ಪಿಸಿಕೊಂಡು ಬಾಗಿಲ ಕಡೆಗೆ ಓಡಿದಳು. ಆದರೆ ಅವಳಿಗಿಂತ ಮುಂಚೆಯೇ ಮೇಡಮ್ ಅಡ್ಡಗಟ್ಟಿ ಬಾಗಿಲು ಮುಚ್ಚಿ ಅದಕ್ಕೊರಗಿ ನಿಂತಿದ್ದಳು. ತಲೆಗೂದಲು ಕೆದರಿತ್ತು. ಮೋರೆ ಬೆವತಿತ್ತು. ರೇವಾ ಕಚ್ಚಿದ್ದ ಕೈ ಮೇಲೆ ಕೆಂಪು ಕಾಣಿಸಿತ್ತು. ರಕ್ತ ಬರುವಷ್ಟು ಬಲವಾಗಿ ಕಚ್ಚಿದ್ದಳು ಹುಡುಗಿ.

''ಏ ಹುಚ್ಚು ಮುಂಡೇದೇ, ಇಲ್ಲಿ ಸ್ವಲ್ಪ ಕೇಳು''. ಗಂಟಲು ಕೀರು ದನಿ ಹೊರಡಿಸಿತ್ತು. ''ಇಲ್ಲಿ ಕೇಳೇ'' ಮತ್ತೆ ಕೂಗಿದಳು. ''ನನ್ನ ಬಿಟ್ಬಿಡಿ, ಮೇಡಮ್, ನಾ ಹೋಗಬೇಕು.'' ''ಯಾಕೇ ಹೆದರಿಕೆ ಆಗತ್ತೇನೆ ನನ್ನ ಕಂಡರೆ ?'' ''ಅಯ್ಯೋ ಬಿಡಿ, ಮೇಡಮ್, ನನ್ನ ಬಿಟ್ಬಿಡಿ.'' ಕೈ ಕೊಸರಿಕೊಳ್ಳತೊಡಗಿತು ಹುಡುಗಿ. ಆಕೆ ಗದ್ದರಿಸಿದಳು, ''ರೇವಾ, ಸುಮ್ಮನೆ ನಿಂತುಕೋ !'' ರೇವಾ ಪೆಚ್ಚುಮೋರೆಯಿಂದ ನಿಂತು ಸುಮ್ಮನಾದಳು. ''ಇಷ್ಟೆಲ್ಲ ಯಾಕಾಯಿತು ಅಂತ ಹೇಳತೇನೆ, ಸ್ವಲ್ಪ ಚೆನ್ನಾಗಿ ಕೇಳಿಸಿಕೋ. ನಿನಗೆ ವರ್ಷ ಎಷ್ಟೇ ?'' ''ಯಾಕೆ ಹಾಗೆ ನನ್ನ ನುಂಗೋ ಹಾಗೆ ನೋಡ್ತೀಯಾ ? ಹೇಳು, ನಿನ್ನ ವಯಸ್ಸೆಷ್ಟು? ಏ, ಪೆದ್ದಿ! ರೇವಾ !'' ''ಹನ್ ಹನ್ನೆರಡು'' ''ಓ, ಹನ್ನೆರಡಾ ? ಸರಿ, ಹೇಳೋದನ್ನ ಒಂದಿಷ್ಟು ಅರ್ಥ ಮಾಡಿಕೊಳ್ಳುವಷ್ಟು ವಯಸ್ಸೇ, ರೇವಾ, ನನ್ನ ಕಂಡರೆ ಎಲ್ಲರೂ ದ್ವೇಷಿಸೋ ಹಾಗೇ ನಿನ್ನನ್ನೂ ಎಲ್ಲ ಹುಡುಗರೂ ದ್ವೇಷಿಸುತ್ತಾರಲ್ಲೇನು? ಹಾಸ್ಯ ಮಾಡ್ತಾರೆ, ಗೋಳಾಡಿಸ್ತಾರೆ, ನಿನ್ನ ಸ್ಲೇಟು ಬುಕ್ಕೂ ಎತ್ತಿ ಹಾಕ್ತಾರೆ. ಯಾಕೆ ಗೊತ್ತಾ? ಗೊತ್ತಾಗುತ್ತಾ ಇಲ್ಲಾ ?'' ''ಹೌದು, ಮೇಡಮ್.'' ''ಹೌದು ತಾನೇ ? ಯಾಕೆ ಅಂತ ಹೇಳ್ತೀನಿ,

# ಸಾದರ ಸ್ವೀಕಾರ

**ವಿಜ್ಞಾನದ ರಮ್ಯ ಕಥೆಗಳು** (ಕಿರಿಯರ ಕಥಾಮಾಲೆ)
ವಿವಿಧ ಲೇಖಕರು, ಸಂ : ಸಹನ
**ಪುಟ :** ೧೧೨ **ಬೆಲೆ : ರೂ.** ೪೦

**ಸಾಹಸ ಕಥೆಗಳು** (ಕಿರಿಯರ ಕಥಾಮಾಲೆ) ವಿವಿಧ ಲೇಖಕರು, ಸಂ : ಸಹನ
**ಪುಟ :** ೧೨೪ **ಬೆಲೆ : ರೂ.** ೪೦

**ಕಾಡಿನ ಕಥೆಗಳು** (ಕಿರಿಯರ ಕಥಾಮಾಲೆ) ವಿವಿಧ ಲೇಖಕರು, ಸಂ : ಸಹನ
**ಪುಟ :** ೧೧೨ **ಬೆಲೆ : ರೂ.** ೪೦

**ಮನರಂಜನೆಯ ಕಥೆಗಳು** (ಕಿರಿಯರ ಕಥಾಮಾಲೆ)
ವಿವಿಧ ಲೇಖಕರು, ಸಂ : ಸಹನ
**ಪುಟ :** ೧೧೨ **ಬೆಲೆ : ರೂ.** ೪೦

**ಅತ್ಯುಪಯುಕ್ತ ವೆಬ್‌ಸೈಟ್, ಸಿ.ಡಿ. ಮತ್ತು ಡಿಜಿಟಲ್ ಪುಸ್ತಕಗಳು**
ಸಂಕಲನ : ಬೇದ್ರೆ ಮಂಜುನಾಥ
**ಪುಟ :** ೧೬೦ **ಬೆಲೆ : ರೂ.** ೯೦

ಮೇಲಿನ ಐದು ಪುಸ್ತಕಗಳ ಪ್ರಕಾಶಕರು
**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦ ೦೦೧

**ಅಮೋಘ ನಾಯಕ ಗಾಂಧೀ** ಪಾಸ್ಕಲ್ ಅಲೆನ್ ನಜ಼ರತ್
ಅನು : ನೀಲತ್ತಹಳ್ಳಿ ಕಸ್ತೂರಿ
**ಪುಟ :** ೧೩೬ **ಬೆಲೆ : ರೂ.** ೧೦೦

**ವೇದಾಂಗ ಜ್ಯೋತಿಷ** (ಲಗಧ ಮಹರ್ಷಿಯ ಖಗೋಳ ವಿಜ್ಞಾನ)
ಡಾ|| ಎಸ್. ಬಾಲಚಂದ್ರರಾವ್
**ಪುಟ :** ೧೧೫ **ಬೆಲೆ : ರೂ.** ೬೦

ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ಸರ್ವೋದಯ ಇಂಟರ್‌ನ್ಯಾಷನಲ್ ಟ್ರಸ್ಟ್**, ವಿಜ್ಞಾನ ಮತ್ತು ಮಾನವೀಯ ಮೌಲ್ಯಗಳ ಗಾಂಧೀ ಕೇಂದ್ರ, ಭಾರತೀಯ ವಿದ್ಯಾಭವನ, ಬೆಂಗಳೂರು-೧

**ದಾರಿಬಿಡಿ** (ಲಲಿತ ಪ್ರಬಂಧಗಳು) ಸಂ : ಪ್ರೊ|| ಎಂ. ಸರಸ್ವತಿ ಮತ್ತಿತರರು
**ಪುಟ :** ೧೦೨ **ಬೆಲೆ : ರೂ.** ೬೫
**ಕನ್ನಡ ವೇದಿಕೆ, ಶ್ರೀ ಭಗವಾನ್ ಮಹಾವೀರ್ ಜೈನ್ ಕಾಲೇಜು,** ನಂ. ೩೪, ೧ನೇ ಅಡ್ಡರಸ್ತೆ, ಜೆ. ಸಿ. ರಸ್ತೆ, ಬೆಂಗಳೂರು - ೫೬೦ ೦೨೭

ಕೇಳಿಸಿಕೋ, ನೀನು ಎಷ್ಟೂ ಸಿಟ್ಟು ಮಾಡಿಕೊಳ್ಳಲ್ಲ. ಚಾಡಿ ಹೇಳಲ್ಲ, ನಂಗಾಗಲಿ, ಹೆಡ್ ಮೇಡಮ್‌ಗಾಗಲಿ ದೂರು ಹೇಳಲ್ಲ, ಎಲ್ಲ ಸಹಿಸಿಕೊಳ್ತೀ, ಅಳ್ತೀ, ನಿನಗೆ ಸ್ವಲ್ಪವೂ ಧೈರ್ಯ ಇಲ್ಲ. ಸ್ವಾಭಿಮಾನ ಇಲ್ಲ. ಎಂದಾದರೂ ಅವರನ್ನ ಎದುರಿಸಿ, ಅವರ ಸ್ಲೇಟು ಬುಕ್ಕೂ ಎತ್ತೆಸೆಯ ಬಲ್ಲೆಯಾ ? ನೀನೂ ನನ್ನ ಹಾಗೇ ಸಪ್ಪೆ, ಎಲ್ಲ ಮಾತಿಲ್ಲದೆ ಸಹಿಸಿಕೊಳ್ತೀ. ಆದರೆ... ನಾನು ಬಯ್ದಾಗ ಮಾತ್ರ ದುರುದುರು ನೋಡ್ತಿ, ಕಣ್ಣು ಕೆಂಪು ಮಾಡಿಕೊಂಡು. ನನಗೆ ಅರ್ಥ ಆಗತ್ತೆ. ಹೋಗಲಿ, ನೀನು ನನ್ನ ಕೈ ರಕ್ತ ಬರೋ ಹಾಗೆ ಕಚ್ಚಿದೆಯಲ್ಲ, ನನಗೆ ಭಾಳಾ... ಭಾಳಾ ಸಂತೋಷವಾಯ್ತು ಅಂದರೆ ನೀ ನಂಬ್ತೀಯಾ ? ನೀನು ಕಚ್ಚಿದ್ದು ಸರಿ ! ಹಾಗೆ ಮಾಡಿದ್ದು ಏನು ಅರ್ಥವಾಗತ್ತೆ ನಂಗೆ ಗೊತ್ತಾ ? ನಿನ್ನಲ್ಲಿ ಒಂದು ಥರದ ಜಂಬ, ಗರ್ವ ಇದೆ, ಬಿಸಿಯಾಗಿಯೇ ಇದೆ; ನನ್ನಲ್ಲಿನ ಹಾಗೆ ತಣ್ಣಗಾಗಿ ಹೋಗಿಲ್ಲ. ನನ್ನ ಪಾಡಂತೂ ಹೀಗಾಯ್ತು. ತಿದ್ದುವ ಹಾಗಿಲ್ಲ. ನೀನು ಬದುಕಿ ಬಾಳೋಳು ಕಣೇ. ನಿನ್ನ ಬದುಕು ನನ್ನಂತಾಗಬಾರದಮ್ಮ...'' ಸ್ವಲ್ಪ ಆಯಾಸ ಪರಿಹಾರ ಮಾಡಿಕೊಂಡು ಮತ್ತೆ ಮಾತಾಡಿದಳು, ''ನಿನ್ನ ಮನೇಲಿ ಯಾರ್‍ಯಾರಿದ್ದೀರಿ ? ತಂದೆ ತಾಯಿ ಇದ್ದಾರಾ ? ನೀವು ಬಾಳಾ ಬಡವರೇನು ?'' ರೇವಳ ಮೋರೆ ಕೆಂಪಾಯಿತು. ''ಏನಿಲ್ಲ!'' ಒಂದು ಬಗೆ ಗರ್ವದಿಂದಲೇ ಹೇಳಿದಳು ಹುಡುಗಿ. ''ನೀನು ಸುಳ್ಳು ಹೇಳ್ತಿದ್ದೀ. ನಂಗೊತ್ತಾಗುತ್ತೆ. ಅದೂ ಸರಿ ಅನ್ನು.

ಅಷ್ಟಾದರೂ ಜಂಬ ಇರಲೇಬೇಕು. ಹಾಗೆ ಜಂಬ, ಗರ್ವ ಇರೋದು ತಪ್ಪು ಅಂತ ತಿಳಕೋ ಬೇಡ. ಆಯ್ತು, ಈ ಕೋಟು ಯಾರು ಹೊಲಿದು ಕೊಟ್ರು ?'' ''ನಾನೇ ಮಾಡಿಕೊಂಡೆ, ಮೇಡಮ್.'' ''ಸುಳ್ಳು. ಹೋಗಲಿ ಬಿಡು. ಇದು ಸ್ವಲ್ಪೂ ಛಂದ ಇಲ್ಲ. ಎಸೆದುಬಿಡು. ಅದನ್ನ ತೊಟ್ಟುಕೊಂಡು ಬರಬೇಡ. ಅದಿಲ್ಲದೇನೆ ಹಾಗೇ ಬಾ, ಗೊತ್ತಾಯ್ತಾ? ಇನ್ಮೇಲೆ... ಹೇಳ್ತೀನಿ ಕೇಳು, ಇನ್ಮೇಲೆ ಯಾರು ನಿನ್ನ ನೋಡಿ ಅಣಕಿಸ್ತಾರೆ, ನಗ್ತಾರೆ ನೀನೂ ಪ್ರತಿಯಾಗಿ ನಗು, ಅಣಕಿಸು, ಹೆಚ್ಚಾಗಿಯೇ ಮಾಡು. ಯಾವುದಕ್ಕೂ ಅವರಿಗೆ ಸೋಲದಂತಿರು. ನೀನು ಅವರು ಕಾಡಿದರೆ ಬೇಡುತ್ತಿದ್ದೆ, ಅಳುತ್ತಿದ್ದೆ, ಅಲ್ವಾ ? ಅದಕ್ಕೇ ಅವರು ನಿನ್ನ ಗೋಳು ಹೊಯ್ಕೊಳ್ತಿದ್ದಾರೆ. ಅವರಿಗೆ ತಿರುಗಿ ಬೀಳೋದನ್ನ ನೀನು ಕಲಿತುಕೊಂಡೆಯಾದರೆ ಅವರು ನಿನ್ನ ತಂಟೆಗೆ ಬರಲು ಅಂಜುತ್ತಾರೆ. ನೀನು ಜೋರಾಗಬೇಕು ತಿಳಿಯಿತೇ ? ಆಗ, ಅವರು ಮೆತ್ತಗಾಗುತ್ತಾರೆ. 'ಮೆತ್ತಗಿರುವವರನ್ನು ಮೊಳಕೈಯಿಂದ ಗುದ್ದು' ಎಂಬುದೇ ಲೋಕದ ಸ್ವಭಾವ ಕಣೇ ಹುಡುಗೀ ! ನಿನ್ನ ಹಕ್ಕಿಗಾಗಿ ಬಡಿದಾಡುವುದನ್ನು ಕಲಿತುಕೊ. ಬೇಕಮ್ಮ ನಮ್ಮಂಥವರು. ನಾನು ನಿನಗೆ ಎಂದಿಗೂ ಮಾದರಿಯಾಗಬಾರದು, 'ನಾನು ಗರ್ವದಿಂದ ತಲೆ ಎತ್ತಿಕೊಂಡು ಬದುಕುತ್ತೀನಿ' ಅಂತ ಆಣೆ ಮಾಡಬೇಕು ನೀನು. ಗೊತ್ತಾಯ್ತಾ, ಮಗೂ ?'' ಇಷ್ಟು ಮಾತನಾಡಿದ್ದು ತುಂಬಾ ಆಯಾಸವಾಗಿತ್ತು. ಅವಳು ನಿಟ್ಟುಸಿರಿಟ್ಟು ಕುರ್ಚಿಯಲ್ಲಿಯೇ ಕುಸಿದು ಕಣ್ಮುಚ್ಚಿದ್ದಳು. ''ಇನ್ನು ನೀನು ಮನೆಗೆ ಹೋಗು, ನಾನೊಬ್ಬಳೇ ಸ್ವಲ್ಪ ಸಮಯ ಇಲ್ಲಿಯೇ ಕೂತಿರ್ತೇನೆ, ನಡಿ.''

ರೇವಾ ಬಾಗಿಲ ಕಡೆಗೆ ಹೋಗುತ್ತ ನಿಂತು ಹಿಂದೆ ನೋಡುತ್ತ ಮೆಲ್ಲಗೆ ಅವಳಿಗೆ ಕೇಳಿಸುವಂತೆ, ''ಮೇಡಮ್, ಈ ವಿಷಯ ನಾ ಯಾರಿಗೂ ಹೇಳಲ್ಲ.'' ಕಣ್ಮುಚ್ಚಿ ಕುಳಿತಿದ್ದ ಅವಳು ಅವು ತೆರೆದು ರೇವಾಳನ್ನು ದುರುಗುಟ್ಟಿ ನೋಡಿದಳು, ''ಯಾರಿಗೆ ಬೇಕಾದರೂ ಹೇಳು ಹೋಗು. ಇನ್ನೆಷ್ಟು ದಿನ, ಒಂದು ತಿಂಗಳು ಮಾತ್ರ ತಾನೆ ಈ ನರಕದಲ್ಲಿ ಇರೋದು ?'' ಎಂದು ಪುನಃ ಕಣ್ಮುಚ್ಚಿಕೊಂಡಳು. ಕೈ ಗಾಯದ ನೋವಿನಿಂದ, ನೊಂದ ಮನಸ್ಸಿನಿಂದ ಕ್ಷೀಣವಾಗಿ ಮುಲುಗುಟ್ಟುತ್ತ ಕುರ್ಚಿ ಬೆನ್ನಿಗೆ ಒರಗಿ ನಿಶ್ಚಲ ಕುಳಿತೇ ಇದ್ದಳು.

ಕೋಣೆ ನಿಶ್ಶಬ್ದವಾಗಿತ್ತು. ಮಕ್ಕಳು, ಶಿಕ್ಷಕಿಯರು ಎಲ್ಲ ಹೊರಟುಹೋಗಿದ್ದರು. ಜವಾನ ಎಲ್ಲ ಕೋಣೆಗಳ ಕಿಟಕಿ ಬಾಗಿಲುಗಳನ್ನು ಹಾಕಿಕೊಂಡು ಈ ಕೋಣೆಗೆ ಬರುವವರೆಗೂ ಕೂತಿರಬಹುದು ತಾನು. ಪ್ರಪಂಚವೆಲ್ಲ ಒಂದು ತಾನೊಬ್ಬಳೇ ಒಂದು ಎನ್ನಿಸಿತ್ತು. ನಿಶ್ಶಬ್ದವಾಗಿ ಅಳುತ್ತಿದ್ದಳು. ಮೌನವಾಗಿ ದುಃಖಪಟ್ಟುಕೊಳ್ಳುವುದು ಮನಸ್ಸನ್ನು ಹಗುರ ಮಾಡಬಲ್ಲದೇನೋ. ಏನಾದರೇನಂತೆ ಬದುಕು ನೂಕಲೇ ಬೇಕಲ್ಲ. ತಾನು ಮನೆಯಲ್ಲಿ ಒಬ್ಬಳೇನಲ್ಲವಲ್ಲ. ತನ್ನನ್ನು ಆಶ್ರಯಿಸಿರುವವರು ಹಲವರಿದ್ದಾರೆ. ಅವಳಿಗೋ ಈ ಜೀವನ ಸಾಕಾಗಿಹೋಗಿತ್ತು. ಈ ತಿಂಗಳು ಮುಗಿಯುವ ವರೆಗೂ ತಾಳಿಕೊಳ್ಳಬೇಕು.



ಹೀಗೆ ಒಳಗೆ ಯೋಚನೆ ನಡೆಯುತ್ತಿರುವಾಗಲೇ ಏನೋ ಮೆತ್ತಗಿನ ವಸ್ತು ಅವಳ ಬೆನ್ನು ಸವರಿದಂತಾಯಿತು. ಪುಟ್ಟ ತಣ್ಣಗಿನ ಕೈ ಅವಳ ಬಡಕಲು ಕೈಯನ್ನು ಮೆಲ್ಲಗೆ ತಟ್ಟಿತು. ಮುಚ್ಚಿದ್ದ ಕಣ್ಣು ಅರಳಿಸಲು ಆಗದಿದ್ದರೂ ತನ್ನನ್ನು ರೇವಾ ಅಪ್ಪಿಕೊಂಡಿದ್ದುದು ಅರಿವಾಯಿತು. ಪಾಪ, ತನ್ನಂತೆಯೇ ಏಕಾಕಿ, ಯಾರೊಬ್ಬರೂ ಆಪ್ತರಿಲ್ಲದ ಮಗು. ಅದು ತನ್ನ ಕಿವಿಯಲ್ಲಿ ನಿಧಾನವಾಗಿ ಹೇಳುತ್ತಿದ್ದುದು ಕೇಳಿಸಿತು, ''ಮೇಡಮ್, ನೀವು ಹೇಳಿದ್ದೆಲ್ಲ ಕೊನೆಯವರೆಗೂ ನೆನಪಿಸಿಕೊಳ್ಳುತ್ತಿರುತ್ತೇನೆ. ಎಂದಿಗೂ ಮರೆಯಲ್ಲ. ನೀವು ಹೇಳಿಕೊಟ್ಟಂತೆ, ಕಲಿಸಿದಂತೆ ಸ್ವಾಭಿಮಾನವನ್ನು ಎಂದಿಗೂ ಕಳೆದುಕೊಳ್ಳಲ್ಲ. ನನ್ನ ಹಕ್ಕಿಗಾಗಿ ಧೈರ್ಯವಾಗಿ ಹೊಡೆದಾಡುತ್ತೇನೆ.'' ಮೇಡಮ್ ಮೌನವಾಗಿಯೇ ಎಲ್ಲ ಕೇಳುತ್ತಿದ್ದಳು, ಉತ್ತರಿಸಲು ಉಸಿರೂ ಇರಲಿಲ್ಲ. ಹುಡುಗಿ ಮಾತು ನಿಲ್ಲಿಸಲಿಲ್ಲ, ''ಆದರೆ ಈ ಕೋಟನ್ನು ಮುಂದೆಯೂ ಹಾಕಿಕೊಳ್ಳುತ್ತೇನೆ, ಬಿಡುವುದಿಲ್ಲ. ಹಾಕಿಕೊಳ್ಳಲೇಬೇಕು. ಮೇಡಮ್, ನಾನೇ ಹೊಲಿದುಕೊಂಡೆ ಅಂತ ಸುಳ್ಳು ಹೇಳಿದೆ. ಅದು ನಾನಲ್ಲ. ನಮ್ಮಮ್ಮ ಹೊಲಿದುಕೊಟ್ಟಳು. ಅವಳಿಗೆ ಏನೂ ಕಾಣಿಸಲ್ಲ, ಕುರುಡಿ !'' ಮೇಡಮ್‌ಗೆ ಮಾತನಾಡಲು ಈಗ ಉಸಿರು ಬಂದಿತು. ಮನಸಿನ, ಕೈಯ ನೋವು ಮರೆತು ಹೇಳತೊಡಗಿದಳು, ''ಅದೇ ಸರಿ. ಆ ಕೋಟನ್ನು ಮುಂದೆಯೂ ಹಾಕಿಕೊಂಡೇ ಬಾ. ಅದು ಸ್ವಾಭಿಮಾನದ ಒಂದು ಗುರುತು, ಲಾಂಛನ.'' ಅವಳ ದನಿ ಏರಿತು, ''ಕುರುಡರೂ ಕಾಣಬಲ್ಲವರಾಗುವರು, ಬಡವರೂ ಮುಂದೊಂದು ದಿನ ಬಲ್ಲಿದರಾಗಿಯೇ ಆಗುವರು. ಇವತ್ತು ಎಲ್ಲರಿಂದಲೂ ಉಗುಳಿಸಿ ಕೊಂಬುವರೂ, ತುಳಿಸಿಕೊಳ್ಳುತ್ತಿರುವವರೂ ಒಂದಾಗಿ ಎದ್ದು ಸೆಟೆದು ನಿಂತು ತಮಗೆ ನ್ಯಾಯಕ್ಕಾಗಿ ಆಗ್ರಹಿಸುವರು, ಆ ಧೈರ್ಯ, ಸ್ವಾಭಿಮಾನ- ಅವೆರಡು ಆಗ ಅವರಿಂದ ಅದನ್ನು ಮಾಡಿಸಿಯೇ ತೀರುತ್ತದೆ. ಅವೆರಡನ್ನು ಬೇಗ ಸಂಪಾದಿಸಬೇಕು ನಾವು.'' ರೇವಾ ಪಿಳಿಪಿಳಿ ನೋಡುತ್ತ, ಬಹಳಷ್ಟು ಅರ್ಥವಾಗದೆ ಅಂಜಿಕೊಂಡು ನಿಂತಿದ್ದಳು. ಅವಳನ್ನು ಮೇಡಮ್ ನೋಡಿ, ''ಒಗ್ಗಟ್ಟು, ರೇವಾ. ನಮ್ಮನಮ್ಮಲ್ಲಿ ಒಗ್ಗಟ್ಟು ಮುಖ್ಯ.'' ಮೂಳೆ ಎದ್ದುಕಾಣಿಸುತ್ತಿದ್ದ ಕೈಯಿಂದ, ತನ್ನನ್ನು ಅಪ್ಪಿಕೊಂಡಿದ್ದ ಮಗುವಿನ ಪುಟ್ಟ ಕೈಯನ್ನು ಪ್ರೀತಿಯಿಂದ ಹಿಡಿದು ಸವರುತ್ತ ಹೇಳಿದಳು, ''ಇದೊಂದೂ ನಿನಗೆ ಈಗ ಅರ್ಥವಾಗುತ್ತಿಲ್ಲ ಅಲ್ಲವೇ, ಮಗು ? ನೀನು ಇನ್ನು ಸ್ವಲ್ಪ ದೊಡ್ಡವಳಾದ ಮೇಲೆ ನಾನು ಈಗ ಹೇಳಿದುದೆಲ್ಲ ಜ್ಞಾಪಿಸಿಕೊಂಡು ಅರ್ಥಮಾಡಿಕೊಳ್ಳುವಿ.''

ಬ. ನಾ. ರಘುರಾಮ
ಹೌಸಿಂಗ್‌ಬೋರ್ಡ್ ಕಾಲೋನಿ, ಗಾಂಧೀನಗರ, ಸಾಗರ - ೫೭೭೪೦೧



# ಠಾಕುರನ ಬಾವಿ

**ಜೋ**ಕು ಲೋಟವನ್ನು ತುಟಿಗೆ ತಾಗಿಸಿದಾಗ ನೀರಲ್ಲಿ ದುರ್ವಾಸನೆ. ''ಇದೆಂಥ ನೀರು ? ಕುಡಿಯೋಕಾಗದಂಥ ವಾಸನೆ, ಗಂಟಲು ಒಣಗಿ ಹೋಗ್ತಾ ಇದೆ. ನೀನು ಕೆಟ್ಟುಹೋಗಿರೋ ನೀರು ಕೊಡ್ತಿದಿ ಕುಡಿಯೋಕೆ ?'' ಎಂದ ಗಂಗಿಯೊಂದಿಗೆ.

ಗಂಗಿ ಪ್ರತಿ ಸಂಜೆ ನೀರು ತರುವಳು. ಬಾವಿ ದೂರ. ಪದೇ ಪದೇ ಹೋಗೋದು ಕಷ್ಟ. ನಿನ್ನೆ ನೀರು ತಂದಾಗ ಅದರಲ್ಲಿ ಸ್ವಲ್ಪವೂ ಕೆಟ್ಟ ವಾಸನೆ ಇರಲಿಲ್ಲ. ಇವತ್ತು ಲೋಟವನ್ನು ಮೂಗಿನ ಬಳಿ ತಂದಾಗ ಗಬ್ಬು ವಾಸನೆ. ಖಂಡಿತಾ ಯವುದೋ ಪ್ರಾಣಿ ಬಾವಿಯಲ್ಲಿ ಬಿದ್ದು ಸತ್ತಿರಬೇಕು. ಆದ್ರೆ ಬೇರೇ ನೀರು ತರೋದಾದ್ರೂ ಎಲ್ಲಿಂದ ?

ಠಾಕುರನ ಬಾವಿ ಕಟ್ಟೆ ಹತ್ತೋಕ್ಕೆ ಯಾರು ಬಿಡ್ತಾರೆ ? ದೂರದಿಂದ್ಲೇ ಬೆದರ್ಸಿ ಕಳಿಸ್ತಾರೆ, ಸಾಹುವಿನ ಬಾವಿ ಹಳ್ಳಿಯ ಇನ್ನೊಂದು ಅಂಚಿನಲ್ಲಿದೆ. ಆದ್ರೆ ಅಲ್ಲಾದ್ರೂ ನೀರು ತುಂಬಿಸ್ಕೋಳೋಕೆ ಬಿಡ್ತಾರೆಯೆ ? ಹಳ್ಳೀಲಿ ನಾಲ್ಕನೇ ಬಾವೀನೇ ಇಲ್ಲ.

ಜೋಕು ಅನೇಕ ದಿನದಿಂದ ಕಾಯಿಲೆ ಮಲ್ಗಿದಾನೆ. ಸ್ವಲ್ಪ ಹೊತ್ತಿನವರ್ಗೂ ಬಾಯಾರ್ಕೆ ತಡ್ಕೊಂಡು ಸುಮ್ನೆ ಮಲ್ಗಿದ್ದ. ಆದ್ರೆ ''ಬಾಯಾರ್ಕೆ ತಡ್ಕೋಕಾಗಲ್ಲ. ಸ್ವಲ್ಪ ನೀರ್ಕೊಡು. ಮೂಗು ಮುಚ್ಕೊಂಡು ಕುಡಿದುಬಿಡ್ತೀನಿ'' ಎಂದ ಈಗ.

ಗಂಗಿ ನೀರು ಕೊಡಲಿಲ್ಲ. ಕೆಟ್ಟ ನೀರು ಕುಡಿಯೋದ್ರಿಂದ ಆರೋಗ್ಯ ಮತ್ತಷ್ಟು ಹದಗೆಡತ್ತೆ ಅನ್ನೋದಷ್ಟು ಗೊತ್ತಿತ್ತು. ಆದ್ರೆ ನೀರು ಕುಡಿಸೋದ್ರಿಂದ ಕೆಡಕು ಸ್ವಲ್ಪ ದೂರ ಆಗುತ್ತೇನೋ ವಿಷ್ಯ ಗೊತ್ತಿರ್ಲಿಲ್ಲ. ''ಈ ನೀರು ಹೇಗೆ ಕುಡೀತೀಯಾ ? ಯಾವ ಪ್ರಾಣಿ ಸತ್ತಿದ್ಯೋ ಯಾರಿಗ್ಗೊತ್ತು ? ಬಾವಿಯಿಂದ ಬೇರೆ ನೀರು ತಂದ್ಕೊಡ್ತೀನಿ.''

ಜೋಕು ಆಶ್ಚರ್ಯದಿಂದ ಅವಳತ್ತ ನೋಡಿದ : ''ಬೇರೆ ನೀರು ಎಲ್ಲಿಂದ ತರ್ತಿ ?'' ''ಠಾಕುರ್ ಹಾಗೂ ಸಾಹು ಇಬ್ಬರ ಬಾವಿಗಳಿವ್ಯಲ್ಲ. ಒಂದು ಲೋಟ ನೀರು ತುಂಬ್ಕೊಳ್ಳೋಕೆ ಬಿಡಲ್ವೇನು ?''

''ಕೈಕಾಲು ಮುರಿಸ್ಕೊಂಡು ಬರ್ತೀಯಾ, ಬೇರೇನೂ ಆಗಲ್ಲಾ, ತೆಪ್ಪಗೆ ಕೂತ್ಕೊ. ಠಾಕುರ್ ಒಂದಕ್ಕೆ ನಾಲ್ಕು ಮಾತಾಡ್ತಾನೆ, ಲಾಠಿ ಬೀಸ್ತಾನೆ. ಬಡವ್ರ ನೋವನ್ನು ಕೇಳೋರ್ಯಾರು ? ನಾವು ಸತ್ರೂ ಯಾರೂ ಬಾಗ್ಲಲ್ಲಿ ಇಣಕಿ ನೋಡೋದೂ ಇಲ್ಲ. ಹೆಗಲು ಕೊಡೋದು ಎಲ್ಲಾದ್ರೂ ಇರ್ಲಿ. ಇಂಥ ಜನ ಬಾವಿ ನೀರು ಕೊಡ್ತಾರಾ ?''

ಈ ಮಾತುಗಳಲ್ಲಿ ಕಹಿ ಸತ್ಯವಿತ್ತು. ಗಂಗೆ ಏನು ಉತ್ತರ ಕೊಡಬಲ್ಲಳು ? ಆದ್ರೂ ಈ ಕೆಟ್ಟ ನೀರನ್ನು ಕುಡಿಯಲು ಕೊಡಲಿಲ್ಲ.

ರಾತ್ರಿಯ ಒಂಬತ್ತು ಘಂಟೆ, ದಣಿದ ಕೂಲಿಗಳು ಮಲಗಿದ್ದರು. ಠಾಕುರನ ಮನೆಯ ಬಾಗಿಲಲ್ಲಿ ಕೆಲಸವಿಲ್ಲದ ಹತ್ತಾರು ಮಂದಿ ಕೂಡಿದ್ದರು. ಇವು ರಣಕೌಶಲ್ಯ ತೋರೋ ದಿನಗಳಲ್ಲ. ಕಾನೂನೀ ಕುಶಲತೆಯ ಮಾತುಗಳಾಗುತ್ತಿದ್ದವು. ಎಷ್ಟು ಜಾಣ್ಮೆಯಿಂದ ಠಾಕುರ್ ಒಂದು ಖಾಸಗಿ ಮೊಕದ್ದಮೆಯಲ್ಲಿ ಠಾಣೆದಾರನಿಗೆ ಹೇಗೆ ಲಂಚಕೊಟ್ಟು ನುಸುಳಿಕೊಂಡ; ನಾಜಿರ್, ಮೊಹತಮಿಮ್ ಅಷ್ಟೇಕೆ, ಯಾರೇ ಕೇಳಿದ್ರು ಸಿಗದಿರೋ ನಕಲನ್ನು ಎಷ್ಟು ಚಾಲೂಕಾಗಿ ತಂದ ಠಾಕುರ್. ಕೆಲವರು ಅದಕ್ಕಾಗಿ ೫೦ ರೂ. ಕೇಳ್ತಾರೆ ನೂರು ರೂ. ಕೇಳ್ತಾರೆ, ಆದ್ರಿಲ್ಲಿ ಕಾಸು ಖರ್ಚಿಲ್ಲ. ಕೆಲ್ಸ ಮಾಡೋ ರೀತಿ ಗೊತ್ತಿರ್ಬೇಕು.

ಇದೇ ಸಮಯಕ್ಕೆ ಗಂಗಿ ಬಾವಿಯಿಂದ ನೀರು ಸೇದಿಕೊಳ್ಳಲು ಬಂದಳು. ಪಾತ್ರೆಯ ಹೊಳಪು ಬಾವಿಯತ್ತ ಬರುತ್ತಿತ್ತು. ಗಂಗಿ ಮರದ ಮರೆಯಲ್ಲಿ ಕುಳಿತು ಸಮಯದ ನಿರೀಕ್ಷೆ ಮಾಡುತ್ತಿದ್ದಳು. ಈ ಬಾವಿಯ ನೀರನ್ನು ಇಡೀ ಹಳ್ಳಿಯವರು ಕುಡಿಯುತ್ತಾರೆ. ಯಾರಿಗೂ ತಡೆ ಇಲ್ಲ. ಕೇವಲ ಈ ದುರದೃಷ್ಟವಂತಳು ಮಾತ್ರ ತುಂಬಿಕೊಳ್ಳುವಂತಿಲ್ಲ.

ಗಂಗಿಯ ವಿದ್ರೋಹಿ ಹೃದಯ ಪದ್ಧತಿಯ ಅಡೆತಡೆಗಳು, 'ಅನಿವಾರ್ಯತೆಯ ಬಗ್ಗೆ ವಿಚಾರ ಮಾಡತೊಡಗಿತು. ನಾವೇಕೆ ನೀಚರು ? ಈ ಜನಗಳೇಕೆ ಉತ್ತಮರು ? ಇಲ್ಲಿರೋವ್ರೆಲ್ಲಾ ಒಬ್ಬರಿಗಿಂತ ಮತ್ತೊಬ್ಬರು ಅಪ್ರಯೋಜಕರು, ಕಳ್ಳತನ ಮಾಡೋರು ಇವ್ರು. ಮೋಸ ವಂಚನೆ ಇವ್ರದ್ದು. ಸುಳ್ಳು ಮೊಕದ್ದಮೆ ಇವ್ರು ಹೂಡ್ತಾರೆ. ಈ ಠಾಕುರನಂತೂ ಪಾಪ, ಆ ಬಡಪಾಯಿ ಕುರುಬನ ಒಂದು ಹಿಂಡು ಕುರೀನೇ ಕದ್ದು ಕೊಂದು ತಿಂದ. ಇವೇ ಪಂಡಿತನ

೨೧ನೇ ಪುಟಕ್ಕೆ

ಮೂಲ

ಮುನ್ಷಿ ಪ್ರೇಮಚಂದರ ಹಿಂದಿ ಕಥೆ

# ಸೂಪರ್‌ಮಾಮ್ ಸಿಂಡ್ರೋಮ್

''**ಸು**ಮತಿ ಸೂರ್ಯನನ್ನು ನಿಲ್ಲಿಸಿದ್ದಾಗ್, ಅನುರಾಧ ಕಾಲಚಕ್ರವನ್ನು ನಿಲ್ಲಿಸಿದ್ದಾಳೇನು ?'' ಎಂದುಕೊಂಡ ಸೂರ್ಯರಾವು.

ತಕ್ಷಣ ಬೆಚ್ಚಿಬಿದ್ದು, ಹಾಸಿಗೆಯಿಂದ ಎದ್ದು ಕುಳಿತುಕೊಳ್ಳುತ್ತಾ,

''ಕಾಲಚಕ್ರವೇನೂ ನಿಲ್ಲಲಿಲ್ಲ, ಅನುರಾಧಳೆ ನಿಂತುಬಿಟ್ಟಿದ್ದಾಳೆ'' ಎಂದ ಹಾಗೆ, ಗೋಡೆ ಗಡಿಯಾರ ಒಂಬತ್ತು ಗಂಟೆಗಳನ್ನು ಬಾರಿಸಿತು. ಅನುರಾಧ ಎದ್ದು ಅರ್ಧ ಕೆಲಸಗಳನ್ನು ಮುಗಿಸಿದರೂ ಸೂರ್ಯನು ಬೆಳಗಲಾರ, ಅಡುಗೆಮನೆ ಎಚ್ಚರವಾಗದು, ಬಾಗಿಲಲ್ಲಿ ರಂಗೋಲಿ ಅರಳದು, ಅಡುಗೆಮನೆ ಹೊಗೆ ಸಿಳ್ಳುಗಳಿಂದ, ಪಾತ್ರೆ ಸಪ್ಪಳಗಳಿಂದ ಚೈತನ್ಯವಾಗಲಾರದು. ಒಂದೇನು – ಲೋಕವೇ ನಿಶ್ಶಬ್ದದಿಂದ ಚೈತನ್ಯವಾಗಲಾರದು. ಅಂಥ ಅನುರಾಧ ಇನ್ನು ಚಾದರ ಹೊದ್ದು ಮಲಗಿರುವುದ ಏನು ? ಸೂರ್ಯರಾವುಗೆ ಅರ್ಥವಾಗಲಿಲ್ಲ – ಆಕೆಯ ಜವಾಬ್ದಾರಿಯಿಲ್ಲದ ಗೃಹಿಣಿಯಂತೂ ಅಲ್ಲವೆ ಅಲ್ಲ.

ಪ್ರತಿದಿನ ಐದು ಗಂಟೆಗೆ ತಪ್ಪದೆ ಎದ್ದು ಓಣಿಯ ಕೊನೆಯವರೆಗೆ ನಡೆದು ಹೋಗಿ ಹಾಲಿನ ಪಾಕೆಟ್ ತರುತ್ತಾಳೆ. ಹಾಲು ತರುವವಳು ಈ ಮಧ್ಯ ಪಾಕೆಟ್‌ಗೆ ಹತ್ತು ರೂಪಾಯಿ ಮಾಡಿದಾಗಿನಿಂದ ಅನುರಾಧ ಮಾರ್ನಿಂಗ್ ವಾಕ್ ಸುರುವು ಮಾಡಿದ್ದಾಳೆ. ಅದರಿಂದ ಆಕೆ ತಿಂಗಳಿಗೆ ಮೂವತ್ತು ರೂಪಾಯಿ ಉಳಿಸುತ್ತಾಳೆ. ಬೆಳಗಾಗೊದರೊಳಗೆ ಬಂದು ಬಾಗಿಲಲ್ಲಿಯ ಕಸ ನೂಕಿ ರಂಗೋಲಿ ಹಾಕುವವಳನ್ನು ಇಟ್ಟುಕೊಂಡಿದ್ದಾಳೆ. ಆ ಸಮಯದಲ್ಲೇ ಪಾತ್ರೆಗಳನ್ನು ತೊಳೆದುಹೋಗುತ್ತಾಳೆ ಆಕೆ. ಯಾಕೆಂದರೆ, ಅನುರಾಧಳು ಎಂಟೂವರೆ ಗಂಟೆಗೆಲ್ಲ ಕೆಲಸ ಮುಗಿಸಬೇಕು. ಆಕೆಯನ್ನು ಈಗ ಒಂದು ಬ್ರ್ಯಾಂಚ್ ಆಫೀಸಿಗೆ ವರ್ಗಾಯಿಸಿದ್ದಾರೆ. ಟೌನ್ ಬಹಳ ರಷ್ ಇರುತ್ತದೆ. ರಿಕ್ಷಾ ಹತ್ತಿದರೆ ಬಹಳ ಖರ್ಚಾಗುತ್ತದೆ. ಆಟೊ ಎಂದರೆ ಹೇಳಲಾಗದು. ಅದಕ್ಕಾಗಿ ಮೊಪೆಡ್ ಖರೀದಿಸಿದ್ದಾಳೆ. ಇತ್ತೀಚೆಗೆ ಆ ಮೊಪೆಡ್ ಕೊಂಡಾಗ ಆಕೆಯ ವಯಸ್ಸು ನಲವತ್ತೈದು ವರ್ಷ. ಟ್ರಾಫಿಕ್ ಗಜಿಬಿಜಿ ಇದ್ದು, ಒಂದು ಕ್ರಮವಿಲ್ಲದ ಟ್ರಾಫಿಕ್‌ನಲ್ಲಿ ಡ್ರೈವ್ ಮಾಡೋದು ಕಷ್ಟ. ಕಾರಣ ಮುಕ್ಕಾಲು ಗಂಟೆ ಮೊದಲೇ ಮನೆ ಬಿಡುತ್ತಾಳೆ. ಆದರೆ ಇಂಥ ಅನುರಾಧ ಒಂಬತ್ತು ಗಂಟೆಯವರೆಗೆ ತುಂಬಾ ಹೊದ್ದು ಮಲಗಿದ್ದಾಳೆಂದರೆ ಮೈಯಲ್ಲಿ ಹುಷಾರಿರಲಿಕ್ಕಿಲ್ಲ. ಅನುರಾಧಳ ಮೈಯಲ್ಲಿ ಹುಷಾರಿಲ್ಲದಿರುವುದು, ಸೂರ್ಯರಾವು ಎಂದೂ ನೋಡಿರಲಿಲ್ಲ ಈ ಮಧ್ಯೆ.

ಸೂರ್ಯರಾವು ಆಕೆಯ ಮುಖದ ಮೇಲೆ ಹೊದ್ದುಕೊಂಡ ಚಾದರ್ ಎಳೆದನು. ಕಣ್ಣು ದೊಡ್ಡವು ಮಾಡಿ, ಬಾಯಿ ಮೇಲೆ ಕೈಯಿಟ್ಟುಕೊಂಡ. ಜೋಲಿ ಹೋಗಿ ಗೋಡೆಗೆ ಆನಿಕೊಂಡು ನಿಂತನು. ಅನುರಾಧಳ ಶರೀರವೆಲ್ಲ ಬೆಳ್ಳಗೆ ಸುಣ್ಣ ಬಳಿದಂತಾಗಿದೆ. ಕಣ್ಣು ತೆರೆದುಕೊಂಡೇ ಇವೆ. ಆಕೆ ಉಟ್ಟ ಸೀರೆ ಉಟ್ಟಂತಿದೆ. ಆದರೆ ಕೈಕಾಲು ಸೀಮೆಸುಣ್ಣದಿಂದ ಮಾಡಿದಂತಾಗಿವೆ. ಕಣ್ಣು ಕೂದಲು ಬಿಟ್ಟರೆ ಉಳಿದೆಲ್ಲ ಶರೀರವು ಬಿಳಿಯಾಗಿಯೆ ಇದೆ. ಕಣ್ಣು ಪ್ರಶಾಂತವಾಗಿ ನಿರ್ಮಲವಾಗಿ ಎಂದೂ ಇಲ್ಲದಂತಹ ಹೊಳಪಿನಿಂದ ಹೊಳೆಯುತ್ತಿವೆ.

ರಾತ್ರಿ ಹನ್ನೆರಡೂವರೆಗೆ ಆಕೆ ಎಂದಿನಂತಿದ್ದಳು. ವರ್ಷದಿಂದ ತಪ್ಪದೇ ದಿನಾ ನೋಡುವ ಹಿಂದಿ ಸೀರಿಯಲ್ ನೋಡಿದ್ದಳು. ಬೆಳಿಗ್ಗೆ ನಾಷ್ಟಕ್ಕೆಂದು ಇಡ್ಲಿ ದಿನಸನ್ನು ಗ್ರೈಂಡ್ ಮಾಡಿದ್ದಳು. ಕುಡಿಯುವ ನೀರು ಕಾಸಿ ಫಿಲ್ಟರ್‌ಗೆ ಹಾಕಿದ್ದಳು. ಒಂದೇನು ಸಾವಿರಾರು ಕೆಲಸ ಮಾಡಿದ್ದಾಳೆ. ಆಕೆಯದು ಬಹು ದೂರದೃಷ್ಟಿ. ಈ ದಿನಕ್ಕಾಗಿ ನಿನ್ನೆಯೇ ಎಲ್ಲಾ ಏರ್ಪಾಟು ಗಳನ್ನು ಮಾಡಿದ್ದಾಳೆ. ಇದು ಏನು ? ಹೇಗೆ ಬೆಳಿಗ್ಗೆ ಸುಣ್ಣದ ಗೊಂಬೆಯಂತಾಗಿದ್ದಾಳೆ. ಇಂಥ ಕಾಯಿಲೆಯವರನ್ನು ಇದುವರೆಗೆ ಯಾರನ್ನೂ ನೋಡಿರಲಿಲ್ಲ ಸೂರ್ಯರಾವು. ಮೂಗಿನ ಹತ್ತಿರ ಕೈ ಹಿಡಿದು ನೋಡಿದ, ಶ್ವಾಸ ನಿಂತು ಹೋಗಿದೆ. ಎದೆಯ ಮೇಲೆ ಕಿವಿಯಿಟ್ಟು ನೋಡಿದನು, ಸ್ಪಂದನೆ ಇಲ್ಲ, ಬೆಚ್ಚಿ ಬಿದ್ದನು. ಅನುರಾಧ ಸತ್ತು ಹೋದಳಾ ! ಅನುರಾಧ ಸಾಯುವದೆಂದರೆ ಏನು ? ಸೂರ್ಯರಾವು ಬೆವರಿನಿಂದ ತೋಯ್ದುಹೋದನು. ಹೆಜ್ಜೆಯಲ್ಲಿ ಹೆಜ್ಜೆ ಹಾಕುತ್ತಾಹೋಗಿ ಗೆಳೆಯ ಸುಬ್ಬರಾವುಗೆ ಫೋನ್ ಮಾಡಿ, ಡಾಕ್ಟರ್‌ನನ್ನು ಕರೆದುಕೊಂಡು ಬಾ ಎಂದನು. ಅನುರಾಧಳಿಗೆ ಬಂದ ಕಾಯಿಲೆ ಯಾವುದು ? ಬಂದ ಆ ಡಾಕ್ಟರ್‌ಗೆ ಅರ್ಥವಾಗಲಿಲ್ಲ. ಆದರೆ ಆಕೆ ಸತ್ತು ಹೋದುದ್ದಾಗಿ ಮಾತ್ರ ಸ್ಪಷ್ಟಪಡಿಸಿದನು. ಕ್ಷಣದಲ್ಲಿಯೇ ಅನುರಾಧಳ ಮರಣ ವಾರ್ತೆ ಬೀದಿಯೆಲ್ಲಾ ಹಬ್ಬಿತು. ಅಕ್ಕಪಕ್ಕದವರು ಗಬಗಬನೆ ಕಾಫಿಯನ್ನು ಕುಡಿದು ನೀರುಗೀರು ತುಂಬಿ ಸೂರ್ಯರಾವರ ಮನೆಗೆ ಬಂದರು.

ಶವವನ್ನು ಕೆಳಕ್ಕೆ ಇಳಿಸಿ ತಲೆಯ ಹತ್ತಿರ ದೀಪ ಹಚ್ಚಬೇಕು ಎಂದರು, ಪಕ್ಕದ ಮನೆಯ ಅಜ್ಜಿ.

ವರಾಂಡದಲ್ಲಿ ಚಾಪೆ ಹಾಸಿ ಅದರ ಮೇಲೆ ಮಲಗಿಸಿದರು. ''ಮಕ್ಕಳಿಗೆ ಫೋನ್

■

**ಪಿ. ಸತ್ಯವತಿ**



ಮಾಡಿ ಸೂರ್ಯರಾವು'' ಎಂದನು ಸುಬ್ಬರಾವು. ಸೂರ್ಯರಾವು ಹೆಚ್ಚಾಗಿ ಎಸ್.ಟಿ.ಡಿ.ಗಳು ಮಾಡುತ್ತಾನೆಂದು ಆ ಸೌಕರ್ಯವನ್ನು ಕಟ್ ಮಾಡಿಸಿದ್ದಳು ಅನುರಾಧ. ಹಣ ಮತ್ತು ಮಕ್ಕಳ ಫೋನ್ ನಂಬರನ್ನು ಕೊಟ್ಟು ಸುಬ್ಬರಾವರನ್ನು ಆ ಕೆಲಸಕ್ಕೆ ಕಳುಹಿಸಿದನು ಸೂರ್ಯರಾವು. ಆತನು ಇನ್ನೂ ಹಲ್ಲು ಉಜ್ಜಿರಲಿಲ್ಲ. ಎದ್ದು ಹಲ್ಲುಜ್ಜಿ ಬರುವುದರೊಳಗೆ ದೊಡ್ಡ ಮಗ್ಗಿನ ತುಂಬ ಹವೆಯನ್ನು ಎಬ್ಬಿಸುವ ಕಾಫಿ ತಯಾರು ಮಾಡಿಟ್ಟಿರುತ್ತಿದ್ದಳು ಅನುರಾಧ. ಎರಡು ಮಗ್ಗು ಕಾಫಿಗೆ, ಎಷ್ಟು ಪುಡಿ ಹಾಕಬೇಕು ಎಷ್ಟು ಹಾಲು ಹಾಕಬೇಕು, ಎಷ್ಟು ಬಿಸಿ ಮಾಡಬೇಕು, ಆಕೆಗೆ ಗೊತ್ತಿರುವಂತೆ ಯಾರಿಗೂ ಗೊತ್ತಿಲ್ಲ.

ಸುಬ್ಬರಾವುಗೆ ಅನುರಾಧಳ ಶರೀರವನ್ನು ಒಂದು ಸಾರಿ ಮುಟ್ಟಿ ನೋಡಬೇಕೆನಿಸುತ್ತದೆ. ಮಂಚದ ಮೇಲಿಂದ ಇಳಿಸುವಾಗ ಕಾಲುಗಳನ್ನು ಹಿಡಿದಿದ್ದ ಆದರೆ, ಕಾಲ ಮೇಲೆ ಸೀರೆಯ ನಿರಿಗೆಗಳಿದ್ದವು. ಆಕೆಯ ಶರೀರ ಸುಣ್ಣದಂತೆ ಹೇಗಾಯಿತೋ ಅದು ನಿಜವಾಗಿ ಸುಣ್ಣವೋ ಅಥವಾ ಮತ್ತೇನೋ ತಿಳಿದುಕೊಳ್ಳಬೇಕೆಂದು ಬಹಳ ಕುತೂಹಲದಿಂದಿದ್ದಾನೆ. ಆದರೆ ಆ ಶರೀರ ಆತನ ಗೆಳೆಯನ ಹೆಂಡತಿಯದು. ಆತನ ವಸ್ತುವಲ್ಲ? ಶವವಾದರೂ ಆತನದೇ ಅಲ್ಲವೆ ಅದರ ಮೇಲೆ ಅಧಿಕಾರ. ಮುಟ್ಟಿದರೆ ಸುಮ್ಮನಿರುತ್ತಾನೋ ಇಲ್ಲೋ ?

ಯಾರೋ ಸ್ವತಂತ್ರವಾಗಿ ಮನೆಯೊಳಕ್ಕೆ ಹೋಗಿ ಕಾಫಿ ಮಾಡಿ ಸೂರ್ಯರಾವುಗೆ ಒತ್ತಾಯದಿಂದ ವಿನಂತಿಸಿಕೊಳ್ಳುತ್ತಾ ಕೊಟ್ಟರು. ಆದರೆ, ಶವದ ಪಕ್ಕದಲ್ಲಿ ಕುಳಿತು ಕುಡಿಯಲಿಕ್ಕೆ ಇಷ್ಟವಿಲ್ಲದ್ದಕ್ಕೆ ಪಕ್ಕದ ಕೋಣೆಯೊಳಕ್ಕೆ ಹೋದನು ಆತ. ಇದೇ ಹದವಾದ ಸಮಯವೆಂದು ಆಕೆಯ ಕಾಲ ಹತ್ತಿರ ಚೂಟಿ, ಬೆಳ್ಳನೆಯ ಚಿಕ್ಕ ತುಂಡೊಂದು ಜೇಬಿನಲ್ಲಿ ಹಾಕಿಕೊಂಡು, ಫೋನ್ ಮಾಡಲು ಹೋದನು ಸುಬ್ಬಾರಾವು.

''ಮಾಮ್‌ಳನ್ನು ನಾನು ಬರುವವರೆಗೆ ಇಟ್ಟಿರಿ, ಯಾವುದೊಂದು ಫ್ಲೈಟಿಗೆ ಹೇಗೋ ಬಂದು ಸೇರುತ್ತೀನಿ ಓಕೆ'' ಎಂದಳು ಸೂರ್ಯರಾವನ ಮಗಳು ನ್ಯೂಜೆರ್ಸಿಯಿಂದ.

ಮಗ ಫೋನ್‌ನಲ್ಲಿಯೇ ಅತ್ತುಬಿಟ್ಟನು. ಆತನಿಗೆ ಇಂಡಿಯಾಕ್ಕೆ ಬಂದರೆ ಪುನಃ ವಿಸಾ ರೀನ್ಯೂ ಆಗುವುದು ಕಷ್ಟವಂತೆ. ''ಮಾಮ್ ಯಾಕೆ ಹೀಗೆ ಹೊರಟು ಹೋದಳು, ಅಂಕಲ್-ವಾಟ್ ಹಾಪೆನ್ಡ್'' ಎಂದು ಆಕ್ರೋಶಪಟ್ಟನು.

ನಾನಾ ರೀತಿಯ ತೊಂದರೆಯಿಂದ ಓದಿಸಿ, ಬಹಳಷ್ಟು ಹಣ ಖರ್ಚು ಮಾಡಿ ಅವನನ್ನು ಸ್ಟೇಟ್ಸ್‌ಗೆ ಕಳಿಸಿದ್ದೂ ಅನುರಾಧಳೆ. ಅವನನ್ನು ಹೇಗಾದರೂ ಸ್ಟೇಟ್ಸ್‌ಗೆ ಕಳುಹಿಸಬೇಕೆಂದು ಕಂಕಣ ಕಟ್ಟಿಕೊಂಡಿದ್ದು ಆಕೆಯೆ. ಬ್ಯಾಂಕ್‌ನಲ್ಲಿ ಎಲ್ಲರೂ ಅವಳನ್ನು ಬಹಳಷ್ಟು ಅಭಿನಂದನ ರೀತಿಯಲ್ಲಿ ನೋಡ್ತಾರೆ. ''ನಿಮ್ಮ ಮಕ್ಕಳು ರತ್ನಗಳು'' ಎನ್ನುತ್ತಾರೆ. ಆ ರೀತಿ ಎಲ್ಲರೂ ತನ್ನನ್ನು ಅನ್ನಬೇಕೆಂದು ಆಕೆ ಆಸೆಪಟ್ಟಿದ್ದಳು. ಆಕೆಯ ಕೋರಿಕೆ ಫಲನೀಡಿತು. ಬಟ್ ಫಾರ್ ಮಾಮಾ ಕುಡನ್ಟ್ ಹಾವ್ ಮೇಡಿಟ್ ಆದರೆ ಈಗ ತಾನು ಮಾಮ್‌ಳನ್ನು ನೋಡಲಾರ ಕಾಂಟ್ ಮೆಕಿಟ್...

''ಬಾಡಿಯನ್ನು ಐಸ್ ಮೇಲೆ ಇಡಬೇಕೇನೋ – ಮಗಳು ಬರುವುದರೊಳಗೆ ಹೀಗೆ ಇಟ್ಟರೆ ಕೆಟ್ಟು ಹೋಗುತ್ತದೆ'' ಎಂದರು ಯಾರೋ. ''ಇದು ಸಾಮಾನ್ಯ ಶವವಲ್ಲ, ಇದು ಸುಣ್ಣದಂತೆ ಇದೆ. ಐಸ್ ಮೇಲಿಟ್ಟರೆ ಕರಗಿ ಹೋಗುವುದಿಲ್ಲಾ?'' ಎಂದರು ಮತ್ತೊಬ್ಬರು.

''ಹೋಗಲಿ ಶವದ ಸುತ್ತ ಏನಾದರೂ ಔಷಧ ಹಾಕ್ರಿ'' ಎಂದು ಇನ್ನೊಬ್ಬರು ಸಲಹೆ ನೀಡಿದರು.

ಫೋನು ಮಾಡುವ ಕೆಲಸ ಮುಗಿಸಿದ ಸುಬ್ಬಾರಾವು ಕೆಲಸದಲ್ಲಿಯ ಕೆಲಸವೆಂದು ತನ್ನ ಮನೆಗೆ ಹೋಗಿ ಟಿಫಿನ್ ಮಾಡಿ ತನ್ನ ಜೇಬಿನಲ್ಲಿಯ ಟ್ಯಾಬ್ಲೆಟ್‌ದಂತಹ ವಸ್ತುವನ್ನು ತೆಗೆದು ತನ್ನ ಮಗಳ ಕೈಯಲ್ಲಿಟ್ಟು, ಅನುರಾಧ ಮರಣೋದಂತವನ್ನು ವಿವರಿಸಿದನು. ಆ ಹುಡುಗಿ ಟಕ್ಕನೆ ಪರ್ಸ್‌ನಲ್ಲಿ ಹಾಕಿಕೊಂಡು ಹತ್ತಿರದ ಲ್ಯಾಬೋರೇಟರಿಗೆ ಓಡಿಹೋದಳು. ಅವರು ಆ ಸುಣ್ಣದ ತುಂಡನ್ನು ತಲೆನೋವಿಗೆ ತೆಗೆದುಕೊಳ್ಳುವ ಆಸ್ಪಿನ್ ಟ್ಯಾಬ್ಲೆಟ್ ಎಂದು ಹೇಳಿದರು.

''ನಾನು ಅಲ್ಲಿಗೆ ಬರುತ್ತೀನಿ ಅಪ್ಪಾಜಿ'' ಎಂದು ಲೆನ್ಸ್‌ವೊಂದನ್ನು ತೆಗೆದುಕೊಂಡು ಸೂರ್ಯರಾವು ಮನೆಗೆ ಬಂದಳು ಸುಬ್ಬರಾವನ ಮಗಳು. ಆ ಹುಡುಗಿ ಹೆಸರು ಸುಶೀಲ. ಆ ಬೀದಿಯಲ್ಲಿ ಅನುರಾಧಳಿಗೆ ಗೊತ್ತಿಲ್ಲದವರು ಯಾರೂ ಇಲ್ಲ. ಆಕೆಯ ಮನೆಗೆ ಬರುವುದು ಹೋಗುವುದನ್ನು ನೋಡಿ ಗಡಿಯಾರಗಳನ್ನು ಸರಿಮಾಡಿಕೊಳ್ಳುವವರು ಕೆಲವರು. ಆಕೆಯನ್ನು ನೋಡಿ ಮನೆಯನ್ನು ಸ್ವಚ್ಛ ಇಟ್ಟುಕೊಳ್ಳುವವರು, ಅಲ್ಲದೆ ಅನೇಕ ವಿಷಯಗಳಲ್ಲಿ ಆಕೆಯನ್ನು ಅನುಕರಿಸುತ್ತಿದ್ದರು ಇನ್ನು ಕೆಲವರು. ಅಂಥವರು ಎಷ್ಟೋ ಜನರು ಅಲ್ಲಿ – ಸುಶೀಲ ಜನರನ್ನು ಸರಿಸುತ್ತಾ ಬಂದು ಅನುರಾಧಳ ಶವವನ್ನು ಲೆನ್ಸ್ ಹಿಡಿದು ನೋಡಿದಳು. ಆಕೆಯ ಶರೀರ ಸುಣ್ಣದಂತೆ ಅಲ್ಲ, ಆದದ್ದು. ಆಕೆಯ ಶರೀರವೆಲ್ಲ ತರತರದ ಮಾತ್ರೆಗಳು ಅಂಟಿಸಿದಂತೆ ಇದೆ. ಕೆಲವು ದೊಡ್ಡವು ಕೆಲವು ಚಿಕ್ಕವು, ಇನ್ನೂ ಕೆಲವು ತಿಳಿ ಗುಲಾಬಿ ಬಣ್ಣದವು ಮತ್ತೆ ಕೆಲವು ದುಂಡನೆಯವು, ಚೌಕಾಕಾರದವು. ಹೀಗೆ ತರತರದ ಮಾತ್ರೆಗಳು ಅಂಟಿಸಿ ಮಾಡಿದ ಬೊಂಬೆಯಂತಿದ್ದಾಳೆ ಅನುರಾಧ.

''ಆಂಟಿ ಮೈಯಲ್ಲಿ ಟ್ಯಾಬ್ಲೆಟ್ಸ್ ನೋಡಿ ಇಲ್ಲಿ'' ಎಂದು ಆಕೆಯ ಕೈ ಹತ್ತಿರ ಎರಡು ಮಾತ್ರೆಗಳನ್ನು ಚಿವುಟಿ ತೆಗೆದಳು ಸುಶೀಲ.

''ಇರುವೆ ಬರುತ್ತಾ ಇದ್ದಾವೆರ್ರಿ'' ಎಂದಳು ಒಬ್ಬಾಕೆ ಗಾಬರಿಯಿಂದ. ''ಹೌದು ಇದರಲ್ಲಿ ಕೆಲವು ಶುಗರ್ ಕೋಟೆಡ್ ಟ್ಯಾಬ್ಲೆಟ್ಸ್ ಇದ್ದಿರಬಹುದಲ್ಲ'' ಎಂದಳು ಸುಶೀಲ. ಹೌದು, ಶುಗರ್ ಕೋಟೆಡ್ ಟ್ಯಾಬ್ಲೆಟ್ಸ್‌ಗಳನ್ನು ಆಕೆಗೆ ನಾನು ಕೆಲವು ಕೊಟ್ಟಿದ್ದೆ ಎಂದುಕೊಂಡನು ಸೂರ್ಯರಾವು. ಸುಶೀಲಳ ಕೈಯಿಂದ ಲೆನ್ಸ್ ತೆಗೆದುಕೊಂಡು ನೋಡುತ್ತಿದ್ದಾರೆ ಕೆಲವರು. ಸೂರ್ಯರಾವುಗೆ ಕಾಣದಂತೆ ಆಕೆಯ ಕೈಯನ್ನು ಕಾಲುಗಳನ್ನು ಚಿವುಟಿ ನೋಡುತ್ತಿದ್ದಾರೆ ಇನ್ನು ಕೆಲವರು.

ಚಾಪೆಯ ಮೇಲಿಂದ ಆಕೆಯ ಶರೀರವನ್ನು ಒಂದು ಬೆಂಚ್ ಮೇಲೆ ಸೇರಿಸಿದರು. ಸುತ್ತಲೂ ಇರುವೆ ಔಷಧ ಹಾಕಿದರು. ಮಗಳು ಬರುವುದರೊಳಗೆ ಆಕೆಯ ಶರೀರ ವನ್ನು ಒಬ್ಬೊಬ್ಬರೂ ಚಿವುಟಿ ಮಾಯ ಮಾಡುತ್ತಾರೆ ಎಂದೆನಿಸಿತು. ಸೂರ್ಯರಾವುಗೆ ಕಾರಣ ''ಶವವನ್ನು ಬೆಡ್‌ರೂಂಗೆ ಒಯ್ಯಿರಿ'' ಎಂದನು ಇದ್ದಕ್ಕಿದ್ದಂತೆ.

''ತಪ್ಪಪ್ಪ ಬೆಡ್‌ರೂಂನಲ್ಲಿ ಇಡಬಾರದು ಏನು ನಕ್ಷತ್ರ ಏನೋ'' ಎಂದರು ಪಕ್ಕದ ಮನೆಯ ಅಜ್ಜಿ.

''ಪರ್ವಾಗಿಲ್ಲ ಅಜ್ಜಿ. ಈ ಮನೆ ಆಕೇನೇ ಲೋನ್ ಮಾಡಿ ಕಟ್ಟಿಸ್ಯಾಳ. ಈ ಮನೆಗಾಗಿ ಆಕೆ ಪ್ರತಿ ರಕ್ತದ ತಿಲಕದ ಬೊಟ್ಟು ಹಚ್ಚಿದ್ದಾಳೆ. ಅದಕ್ಕಾಗಿ ಆಕೆಯ ಶರೀರವನ್ನು ಎಲ್ಲಾದರೂ ಇಡಬಹುದು'' ಎಂದು ಅನುರಾಧಳ ಶರೀರವನ್ನು ಬಚ್ಚಿಟ್ಟನು ಸೂರ್ಯರಾವು.

ಇಪ್ಪತ್ತೆಂಟು ವರ್ಷಗಳ ಸಾಹಚರ್ಯೆ. ಎಲ್ಲವನ್ನು ಧಾರೆಯೆರೆದಿದ್ದಾಳೆ. ಸ್ನೇಹ-ಪ್ರೇಮ-ಧನ-ಸೇವೆ-ಕೊನೆಗೆ ಈಗ ಪ್ರಾಣ.

ಮನೆ ಜನರಿಂದ ತುಂಬಿಹೋಗಿದೆ. ಮನೆಯಲ್ಲಿ ಇಷ್ಟು ಜನ ಇರುವುದು ಅನುರಾಧಳಿಗೆ ಇಷ್ಟವಿರುತ್ತಿರಲಿಲ್ಲ. ತಾನು ಹಾಕಿಸಿಕೊಂಡ ಮಾರ್ಬಲ್ ಕಲ್ಲುಗಳು ಮಾಸಿಹೋದರೆ, ಸಬ್ಬು ಹಚ್ಚಿ ತೊಳೆದು ಒರೆಸುತ್ತಿದ್ದಳು. ಬಾತುರೂಂಗಳನ್ನು ತಾನೆ ತೊಳೆದುಕೊಳ್ಳುತ್ತಿದ್ದಳು. ಮನೆಗೆ ಬಂದವರು, ತಳತಳ ಹೊಳೆಯುವ ಅನುರಾಧಳ ಗ್ಯಾಸ್ ಒಲೆಯನ್ನು ಈಗ ಹಾಲು ಕುದಿಸಿ ಉಕ್ಕಿಸುತ್ತಿದ್ದಾರೆ –ಸೋಫಾಗಳನ್ನೆಲ್ಲ ಕಚ್ಚಿ-ಪಿಚ್ಚಿ ತುಳಿದಾಡುತ್ತಿದ್ದಾರೆ. ಅನುರಾಧಳ ಪ್ರಾಣ ಎಷ್ಟು ವಿಲಿವಿಲಿ ಒದ್ದಾಡುತ್ತಿತ್ತೋ! ಸೂರ್ಯರಾವು ನಿಸ್ಸಹಾಯಕನಾಗಿದ್ದಾನೆ. ಆತನಿಗೆ ಏನೂ ಮಾಡಲಾಗದು, ಹೇಳಲಾಗದು. ಹೌಸ್ ಕೀಪಿಂಗ್‌ನಿಂದ ಹಿಡಿದು ಮನಿ ಮ್ಯಾನೇಜ್‌ಮೆಂಟ್‌ವರೆಗೂ ಆಕೆಯದೆ ಕೆಲಸ. ಷೇರುಗಳನ್ನು ಕೊಳ್ಳುವುದು, ಮಾರುವುದು, ಬಂಗಾರ ಅಡವಿಟ್ಟು ಸಾಲ ತಂದು ಬಂಗಾರ ಕೊಳ್ಳುವುದು, ಒಂದೇನು ಇಂದು ಸೂರ್ಯರಾವರ ಸಂಸಾರ ಇಂಥ ಉನ್ನತಿಗೆ ಬರಲು ಕಾರಣ ಆಕೆ ಅಲ್ಲಾ?

''ಐ ಯಾಮ್ ಸೋ ಸಾರೀ ಪಾಪಾ'' ಎನ್ನುತ್ತಾ ಮಗಳು ಬಂದಳು.

ಮಗಳಿಗೆ ಅಮೆರಿಕಾ ಸಂಬಂಧ ಮಾಡಲು ಅನುರಾಧ ಎಷ್ಟು ಕಷ್ಟಪಟ್ಟಿದ್ದಳೋ ಸೂರ್ಯರಾವುಗೆ ಗೊತ್ತು. ಅಳಿಯನ ತಾಯಿ ಬೇಡಿದ ಸಾವಿರಾರು ಬೇಕುಗಳನ್ನು ತೀರಿಸಲು ಎಂಥ ಅವಸ್ಥೆ ಪಟ್ಟಿದ್ದಳು ಆತನಿಗೆ ಗೊತ್ತು – ಆ ಮಗಳು ಹೊಟ್ಟೀಲಾದರೆ ತಾನು ಬಾಣಂತನ ಮಾಡಲು ಅಮೆರಿಕಾಕ್ಕೆ ಹೋಗಬೇಕೆಂದು ಈಗಿನಿಂದಲೇ ಏರ್ಪಾಟುಗಳನ್ನು ಮಾಡಿಕೊಳ್ಳುತ್ತಿದ್ದಳು. ಟಿಕೇಟ್ ಹೇಗೋ ಮಗಳೇ ಕೊಡುಸುತ್ತಾಳೆ ಆದರೆ ತನಗಾಗಿ ಕೆಲವು ಡಾಲರ್ಸ್ ಬೇಕಲ್ಲ, ಅದಕ್ಕಾಗಿ ಈ ಮಧ್ಯೆ ಆಕೆ ಪಿಕನಾಸಿಯಂತೆ ಹಣ ಉಳಿಸುತ್ತಿದ್ದಾಳೆ.

ಮಗಳ ಹೆರಿಗೆಗೆ ಇನ್ನೂ ಟೈಂ ಇದೆ. ಆಕೆ, ಆಕೆಯ ಗಂಡ ಬಳಸುವ ಕಾರುಗಳಿಗೆ ಮಾಡಿದ ಸಾಲ – ಕೊಂಡ ಮನೆಗೆ ಕಟ್ಟಬೇಕಾದ ಇನ್‌ಸ್ಟಾಲ್‌ಮೆಂಟ್ಸ್ ಇತ್ಯಾದಿಗಳನ್ನೆಲ್ಲ ಒಂದು ದಾರಿಗೆ ಬರುವವರೆಗೆ ಮಕ್ಕಳನ್ನು ಹೆರಲು ಆಗದು, ಪೋರ್ ಮಾಮಾ, ಆಗಲೇ ಮಕ್ಕಳನ್ನು ಹೆರೆ ಎನ್ನುತ್ತಿದ್ದಾಳೆಂದು ನಗುತ್ತಿದ್ದನು. ಪೋರ್ ಮಾಮಾ ಹೊರಟು ಹೋಗಿದ್ದಾಳೆ. ಸ್ಟೇಟ್ಸ್‌ನಲ್ಲಿ ಮಗಳ ವೈಭವ ನೋಡಲಾರದೆ, ಶೀ ಕುಡಂಟ ಮೇಕ್ ಇಟ್. ಆದರೆ ಈ ಕಾಯಿಲೆಯೇನು ಕ್ವಯಿಟ್ ಎಮೆಜಿಂಗ್. ''ಅಳಿಯ ಬರಲಿಲ್ವೇನಮ್ಮ'' ಎಂದನು, ಸೂರ್ಯರಾವು. ''ರವಿಗೆ ರಜೆ ಸಿಗಲಿಲ್ಲ ಪಾಪಾ. ಹೀ ವಾಸ್ ಸೋ ಸಾರಿ ಹಿ ಕುಡಂಟ್ ಮೇಕಿಟ್'' ಎಂದಳು ರಜನಿ. ನಿಮ್ಮ ಅಮ್ಮ ಅಲ್ಲಾ - ನೀನು ಹೋಗುತ್ತಾ ಪುನಃ ಬರುವಾಗ ನಿಮ್ಮ ಪಾಪಾನು ಕರೆದುಕೊಂಡು ಬಾ ಇಲ್ಲಿಗೆ.

''ಶವಕ್ಕೆ ಸ್ನಾನ ಮಾಡಿಸ್ರಿ'' ಎಂದರು ಬಂಧುಗಳು. ''ಸ್ನಾನ ಮಾಡಿಸಿದರೆ ಟ್ಯಾಬ್ಲೆಟ್‌ಗಳೆಲ್ಲ ಕರಗಿಹೋಗುತ್ತವೆ; ಸಂಸ್ಕಾರ ಮಾಡಕ ಏನೂ ಉಳಿಯುವುದಿಲ್ಲ. ಅರಿಶಿಣ ನೀರು ಪ್ರೋಕ್ಷಿಸಿ ಪವಿತ್ರ ಮಾಡಿ'' ಎಂದನು ಒಬ್ಬಾತ.

''ಶವಕ್ಕೆ ಸ್ನಾನ ಮಾಡಿಸದಿದ್ದರೆ ಪುಣ್ಯಲೋಕಕ್ಕೆ ಹೋಗೋದಿಲ್ಲಾ'' ಎಂದಳು ಪಕ್ಕದ

ಮನೆ ಅಜ್ಜಿ ಪವಿತ್ರ ಸ್ನಾನನಾ, ಅರಿಶಿನ ನೀರಾ ಚರ್ಚೆ ನಡೆಯಿತು ಸ್ವಲ್ಪಕಾಲ. ಕೊನೆಗೆ ಅರಿಶಿನ ನೀರಿಗೆ ಓಟು ಬಿದ್ದವು. ''ಇಷ್ಟಕ್ಕೂ ಶವ ಕಣ್ಣು ಮುಚ್ಚಿಲ್ಲ ಯಾಕೋ'' ಯಾರೋ ಎಂದಾಗ ''ಐ ಕಾಂಟ್ ಡು ಇಟ್'' ಎಂದಳು ರಜನಿ.

ಸೂರ್ಯರಾವು ಪ್ರಯತ್ನಿಸಿದನು. ಆತನಿಗೆ ಆಶ್ಚರ್ಯವಾಯಿತು. ಆಕೆ ಬದುಕಿರುವಾಗಲೇ ಎಷ್ಟೋ ಸಾರಿ ಮುಚ್ಚಿದ್ದನು. ಸುಭದ್ರಳಿಗೆ ಪ್ರತಿ ತಿಂಗಳು ಹಣ ಕಳುಹಿಸಿ, ಮಣಿ ಜೊತೆ ಕೋವಲಂ ಬೀಚಿಗೆ ಹೋಗಿ.

ಈಗ ಆ ಕಣ್ಣು ಮುಚ್ಚಿಕೊಳ್ಳುತ್ತಿಲ್ಲ ಯಾಕೋ – ಶವವನ್ನು ಒಯ್ಯುತ್ತಿರುವಾಗ ಅಯಾಸದಿಂದ ಓಡಿಬಂದನು. ಪೇಥಾಲಜಿ ಪ್ರೊಫೆಸರ್ ಪ್ರಕಾಶರಾವು. ಆತನು ಅನುರಾಧಳಿಗೆ ದೊಡ್ಡಮ್ಮನ ಮಗ. ಆತ ಏನೇನೋ ಸಾಮಾನುಗಳನ್ನು ಜೊತೆ ತಂದಿದ್ದಾನೆ.

''ನನ್ನ ಹೆಂಡತಿ ಶವದ ಮೇಲೆ ನಿನ್ನ ಸಂಶೋಧನೆಗೆ ನಾನು ಸತ್ತರೂ ಆಸ್ಪದ ಮಾಡಿಕೊಡುವುದಿಲ್ಲ'' ಎಂದನು ಸೂರ್ಯರಾವು. ಆತನಿಗೆ ಪ್ರಕಾಶರಾವು ಎಂದರೆ ಎಲ್ಲಿಲ್ಲದ ಕೋಪ. ಅನುರಾಧಳಿಗೆ ಆತನೆಂದರೆ ಇಷ್ಟ ಅದಕ್ಕೆ.

''ನನ್ನ ಹೆಂಡತಿಯನ್ನು ಸಕಲ ಕರ್ಮಾದಿಗಳಿಂದ ಸ್ವರ್ಗಕ್ಕೆ ಕಳುಹಿಸಬೇಕಾದ ಜವಾಬ್ದಾರಿ ನನ್ನದು. ಆಕೆಗೆ ಬಂದ ಈ ಸಾವು ನನ್ನ ಹೃದಯವನ್ನು ಛಿದ್ರವಾಗಿಸಿ ಸಾಯುತ್ತಿದೆ. ಅದರಲ್ಲಿ ಇದೊಂದಾ'' ಎಂದನು ಸೂರ್ಯರಾವು.

''ಅದಲ್ಲ ಸೂರ್ಯ; ಇದು ವೈದ್ಯ ಪ್ರಪಂಚಕ್ಕೆ ವಿಚಿತ್ರವಾದ ಸವಾಲು. ಇದು ಈ ರೀತಿ ಹೇಗೆ ಸಂಭವಿಸಿತೋ ತಿಳಿದುಕೊಳ್ಳೋದು ನಮ್ಮ ಕರ್ತವ್ಯ. ಇದು ಬಹಳ ಅಗತ್ಯ ನಮಗೆ'' ಎಂದು ವಾದಿಸಿದ ಪ್ರಕಾಶರಾವು. ಅನುರಾಧಳ ಶರೀರ ಟ್ಯಾಬ್ಲೆಟ್‌ಗಳಂತಾಗಿ ಆಕೆ ಸತ್ತು ಹೋದ ವಿಷಯ ಎಲ್ಲಾ ಪತ್ರಿಕೆಗಳ ಸ್ಟ್ರಿಂಜರ್‌ಗಳಿಗೆ ಗೊತ್ತಾಗಿದೆ. ಆ ಜಿಲ್ಲೆಯಲ್ಲಿ ನಡೆಯುವ ಪ್ರತಿ ಆಶ್ಚರ್ಯ ವಿಷಯಗಳನ್ನು ಎಳ್ಳಷ್ಟೂ ಬಿಡದೆ ವಿಡಿಯೊ ಮಾಡಿ ಒಂದು ಚಾನೆಲ್‌ಗೆ ಮಾರುವ ವೀಡಿಯೊಗ್ರಾಫರಿಗೂ ಕೂಡ ಗೊತ್ತಾಗಿದೆ. ಇವರೆಲ್ಲಾ ಬರುವ ಮೊದಲೇ ಶವದಹನ ನಡೆದಿದ್ದರೆ ಚೆನ್ನಾಗಿರುತ್ತಿತ್ತು ಎಂದುಕೊಂಡನು ಸೂರ್ಯರಾವು.

''ಮಾಮನನ್ನು ನೋಡಲು ಬಿಡು ಪಾಪ'' ಎಂದಳು ರಜನಿ. ಪ್ರಕಾಶರಾವು ಅರ್ಧ ಗಂಟೆ ಕಾಲ ಅನುರಾಧಳ ಶವವನ್ನು ಪರೀಕ್ಷೆ ಮಾಡಿ, ನೋಟ್ಸ ಮಾಡಿಕೊಂಡನು. ಅದೇ ಸಮಯದಲ್ಲಿ ಕೆಲವರು ಫೋಟೊ ತೆಗೆದುಕೊಂಡರು. ''ಇದೆಲ್ಲಾ ಅಮ್ಮನ ಶವಕ್ಕೆ ಮಾತ್ರ – ಪಾಪ. ಆಕೆಯ ಆತ್ಮ ಆಗಲೇ ಸ್ವರ್ಗಕ್ಕೆ ಹೋಗಿದೆ'' ಎಂದು ತಂದೆಯನ್ನು ಸಮಾಧಾನಿಸಿದಳು ರಜನಿ.

ಕೊನೆಗೆ ಅನುರಾಧಳ ಶವ ಕಟ್ಟಿಗೆಗಳ ಮೇಲೆ ಹೋಗಿದೆ.

''ಅದು ಅಂಥ ಮಹಾ ಶರೀರವೇನೂ ಅಲ್ಲ! ಅದರಲ್ಲಿ ಬಹಳಷ್ಟು ಭಾಗಗಳು ಇಲ್ಲ. ನಾಲ್ಕು ವರ್ಷಗಳ ಹಿಂದೆ ಗರ್ಭಚೀಲ ತೆಗೆದುಹಾಕಿದ್ದಾರೆ. ಅದರೊಂದಿಗೆ ಓವರಿಸ್ ಕೂಡ ತೆಗೆದುಹಾಕಿದರು. ಕೆಲಸದಲ್ಲೊಂದು ಕೆಲಸವೆಂದು ಅಪೆಂಡಿಕ್ಸ್ ಕೂಡ ತೆಗೆದರು. ಇನ್ನು ಉಳಿದ ರಕ್ತ ಮಾಂಸಖಂಡವೆಲ್ಲಾ ಮಾತ್ರೆಗಳಾಗಿಬಿಟ್ಟಿವೆ. ಇದ್ದರೆ ಮೆದುಳು-ಹೃದಯ ಇರಬೇಕು'' ಎಂದು ಕಣ್ಣು ಒರೆಸಿಕೊಂಡನು ಸೂರ್ಯರಾವು. ಅನುರಾಧಳ ಶರೀರವು ರಂಗುರಂಗಿನ ಉರಿಯಾಗಿ ಉರಿಯುತ್ತಿದೆ. ಟ್ಯಾಬ್ಲೆಟ್ಸ್‌ನಲ್ಲಿಯ ಕೆಮಿಕಲ್ಸ್‌ನಿಂದ ಬರುವ ಬಣ್ಣಗಳು – ಇದ್ದಕ್ಕಿದ್ದಂತೆ ಏನೋ ಒಡೆದ ಶಬ್ದ ಕೇಳಿಸಿತು. ಚಿತೆಯೊಳಗಿನಿಂದ ಒಂದು ಎಲೆಯಸರಿನ, ಪಾಚಿ ಹಿಡಿದ ವಸ್ತು. ಸಿಡಿದುಬಂದು ಸೂರ್ಯರಾವು ಪಾದಗಳ ಹತ್ತಿರ ಬಿದ್ದಿತು. 'ಇದೇನು' ಎಂದು ಬೆಚ್ಚಿಬಿದ್ದನು ಆತ. ಪ್ರಕಾಶರಾವು ಅದನ್ನು ಕೈಯಲ್ಲಿಡಿದು ಚಾಕಿನಿಂದ ಪಾಚಿಯನ್ನೆಲ್ಲ ಶುಭ್ರವಾಗಿ ಗೀರಿದನು. ಅದು ತಳತಳ ಹೊಳೆಯುತ್ತಿದೆ. ಅದು ಅನುರಾಧಳ ಮೆದುಳು. ಅದನ್ನು ಗುರುತಿಸಿದನು ಸೂರ್ಯರಾವು. ಮದುವೆಯಾದ ಹೊಸತನದಲ್ಲಿ ತನ್ನೊಂದಿಗೆ ಚೆಸ್ ಆಡಿದ ಮೆದುಳು. ಬ್ಯಾಂಕ್ ಟೆಸ್ಟಿನಲ್ಲಿ ಮೊದಲನೇ ರ್‍ಯಾಂಕ್ ಪಡೆದ ಮೆದುಳು. ಯಾಕೆ ಹೀಗೆ ಪಾಚಿ ಹಿಡಿದಿದೆ.

ಪ್ರಕಾಶ್‌ರಾವ್ ನಕ್ಕು ''ನಿಮ್ಮ ಮನೆಯಲ್ಲಿ ಸಿಂಕ್-ಬಾತ್‌ರೂಂಗಳು ತಳತಳಾ ಪಳಪಳ ಹೊಳೆಯುವಂತೆ ತೊಳೆಯುತ್ತಿತ್ತು ಅಲ್ಲಾ, ಆ ಪಾಚಿಯೆಲ್ಲಾ ಅವುಗಳಿಂದ ಈಕೆ ಮೆದುಳಿಗೆ ಸೇರಿದೆ'' ಎಂದನು.

ಹಾಗೆ ಅನುರಾಧಳ ಶರೀರ ಅಗ್ನಿಗೆ ಅರ್ಪಿಸಿ, ಸ್ನಾನ ಮಾಡಿ ಮನೆಗೆ ಬಂದು, ಆಕೆಯ ಫೋಟೊಗಳಲ್ಲಿ ಒಂದನ್ನು ಆಯ್ದು ಲ್ಯಾಮಿನೇಟ್ ಮಾಡಿಸುವ ಕಾರ್ಯಕ್ರಮಕ್ಕೆ ಉಪಕ್ರಮಿಸಿದ ಸೂರ್ಯರಾವುಗೆ ''ನಾ ಬರ್‍ತೀನಿ'' ಎಂದನು ಪ್ರಕಾಶರಾವ್.

''ನಾನು ನಿನ್ನ ಜೊತೆ ಬರುತ್ತೀನಿ ಅಂಕಲ್'' ಎಂದಳು ಸುಬ್ಬರಾವರ ಮಗಳು ಸುಶೀಲ.

''ನನ್ನಲ್ಲಿ ಏನು ಕೆಲ್ಸ ನಿನಗೆ'' ಎಂದನು ಪೇಥಾಲಜಿ ಪ್ರೊಫೆಸರ್ ಪ್ರಕಾಶರಾವು. ಆತನು ಅನುರಾಧಳನ್ನು ಸ್ವಂತ ತಂಗಿಯಂತೆ ನೋಡಿಕೊಳ್ಳುತ್ತಿದ್ದನು. ಎಷ್ಟೋ ಸಾರಿ, ಎಷ್ಟೋ ಕೇಳದ ಸಲಹೆಗಳನ್ನು ನೀಡಿ ಆಕೆಯಿಂದ ಬೈಗಳು ತಿನ್ನುತ್ತಿದ್ದನು.

''ಅನುರಾಧ ಆಂಟಿಗೆ ಬಂದ ಕಾಯಿಲೆ ಯಾವುದು, ನೀವು ನನಗೆ ಹೇಳಬೇಕು'' ಎಂದಳು ಸುಶೀಲ.

''ನನಗೂ ಹೇಳಿ ಅಂಕಲ್ ನಮ್ಮ ಮಾಮ್‌ಗೆ ಬಂದ ಕಾಯಿಲೆ ನನಗೆ ಗೊತ್ತಾಗದಿದ್ದರೆ ಹೇಗೆ'' ಎನ್ನುತ್ತಾ ಬಂದಳು ರಜನಿ. ಪ್ರಕಾಶರಾವು ನಕ್ಕು ''ಇದನ್ನು ಸೂಪರ್ ಮಾಮ್ ಸಿಂಡ್ರೋಮ್ ಎನ್ನುತ್ತಾರಮ್ಮ'' ಎಂದನು.

''ನಿಜವಾಗಲೂ ನಮ್ಮ ಮಾಮ್ ಸೂಪರ್ ಮಾಮ್ ಅಂಕಲ್'' ಅಂದಳು ರಜನಿ, ಕಣ್ಣು ಒರೆಸಿಕೊಳ್ಳುತ್ತಾ.

''ಅದೇ ಆಕೆಯ ಕಾಯಿಲೆ'' ಎಂದನಾತ. ''ಅದೇನು ಹೇಗೆ ಬಂತು ಹೇಳಿ ಅಂಕಲ್, ನಗಲಾರದೆ ಸರಿಯಾಗಿ ಬಿಡಿಸಿ'' ಎಂದು ಮುನಿಸಿಕೊಂಡಳು ಸುಶೀಲ.

''ನಮ್ಮ ಅನುರಾಧಳಿಗೆ ಈ ಪ್ರಪಂಚದಲ್ಲಿನ ಹೆಂಗಸರಿಗಿಂತ ತಾನು ಬುದ್ಧಿವಂತಳೆಂದು, ಸಮರ್ಥಳೆಂದು, ಬಲವಾದ ನಂಬಿಕೆ. ಆಕೆಯ ದೃಷ್ಟಿಯಲ್ಲಿ ಬುದ್ಧಿ, ಸಾಮರ್ಥ್ಯ ಎಂದರೆ ಒಳ್ಳೆ ಮನೆ ಕಟ್ಟಿಕೊಳ್ಳುವುದು, ಅದನ್ನು ಪಳಪಳ ಹೊಳೆಯುವಂತೆ ನೋಡಿಕೊಳ್ಳುವುದು. ಆದಷ್ಟು ಹಣ ಗಳಿಸುವುದು, ಕಷ್ಟಪಟ್ಟು ಕೆಲಸ ಮಾಡುವುದು, ಮಕ್ಕಳನ್ನು ಒಳ್ಳೆಯವರನ್ನಾಗಿ ಮಾಡುವುದು; ಒಳ್ಳೆಯವರನ್ನಾಗಿ ಮಾಡುವುದೆಂದರೆ : ಡಾಕ್ಟರನ್ನೋ, ಇಂಜಿನಿಯರನ್ನೋ ಮಾಡಿ ಸ್ಟೇಟ್ಸ್‌ಗೆ ಕಳಿಸುವುದು – ಅದೂ ಆಗದಿದ್ದರೆ ನಿನ್ನಂತೆ, ಅಮೆರಿಕಾದಲ್ಲಿ ಇರುವ ಹುಡುಗನಿಗೆ ಕೊಟ್ಟು, ಮದುವೆ ಮಾಡಿ ಕಳಿಸುವುದು... ಇದೇ ಆಕೆಯ ಜೀವನ ಧ್ಯೇಯ – ಆ ಧ್ಯೇಯ ಸಾಧನೆಗೆ ಪ್ರತಿಕ್ಷಣ ಶ್ರಮಿಸಿದ್ದಾಳೆ. ಆಕೆಯ ಆ್ಯಂಬಿಷನ್ ಸಿದ್ಧಿಸಿದೆ'' ಎಂದು ನಿಲ್ಲಿಸಿದನು ಪ್ರಕಾಶರಾವು.

''ಅದಕ್ಕೂ ಈ ಕಾಯಿಲೆಗೂ ಲಿಂಕೇನು ?'' ಎಂದು ಕೋಪದಿಂದ ಕೇಳಿದಳು ರಜನಿ.

''ಇದೇ ಪುಟ್ಟ – ಈ ಗುರಿ ಸಾಧನೆಯಲ್ಲಿ ನಿಮ್ಮಮ್ಮ ತನ್ನ ಮನಸ್ಸಿಗೇನು ಬೇಕೋ, ತನ್ನ ಶರೀರಕ್ಕೇನು ಬೇಕೋ, ನೋಡಿಕೊಳ್ಳಲಿಲ್ಲ. ತರತರ ಅಡಿಗೆ ಮಾಡಿ, ತಿನ್ನುವುದು, ಒಳ್ಳೆ ಸೀರೆಗೆ ಗಂಜಿಹಾಕಿ ಉಡುವುದು, ಗೆಳತಿಯರಲ್ಲಿ ಬಂಧುಗಳಲ್ಲಿ ಪ್ರತ್ಯೇಕವಾಗಿ ಕಾಣುವುದು, ಇದೇ ಆಕೆಗೆ ಬೇಕೆಂದುಕೊಂಡಿದ್ದಳು. ಆದರೆ ಹಣ ಉಳಿಸಲು ನಿಮ್ಮಮ್ಮ ಯಂತ್ರದಂತೆ ಕೆಲಸ ಮಾಡುತ್ತಿದ್ದಳು. ಮನೆಯ ಸ್ವಚ್ಛತೆಗಾಗಿ ಯಾರನ್ನೂ ಕೆಲಸ ಮಾಡಲು ಬಿಡುತ್ತಿದ್ದಿಲ್ಲ. ಸೋಮಾರಿ ಕೋಣದಂತೆ ನಿಮ್ಮಪ್ಪನನ್ನು ಕುಳ್ಳಿರಿಸಿ ಕಾಫಿ ಕೈಗೆ ಕೊಡುತ್ತಿದ್ದಳು. ಹೆಚ್ಚು ಹಣ ಕೊಟ್ಟು ಕೆಲಸದವರನ್ನು ಇಟ್ಟುಕೊಂಡರೆ ಹೇಗೆ ಎಂದು, ಕೆಲಸಗಳನ್ನೆಲ್ಲ ತಾನೇ ಮಾಡುತ್ತಾ, ತಾನೇ ಮಾಡಿಕೊಂಡರೆ ಚೆನ್ನಾಗಿರುತ್ತದೆಂದು ಸಮಾಧಾನ ಮಾಡಿಕೊಳ್ಳುತ್ತಿದ್ದಳು. ಇಂಥ ಕೆಲಸಗಳಿಂದ ಸಂಜೆಗೆಲ್ಲ ವಿಪರೀತವಾದ ಆಯಾಸ. ಬ್ಯಾಂಕಿನಲ್ಲಿ ಹಣ ಬದಲಾಯಿಸುವಾಗ ಎಷ್ಟು ಜಾಗ್ರತೆಯಿಂದ ಕೆಲಸ ಮಾಡಬೇಕು ನಿನಗೂ ಗೊತ್ತಲ್ಲ? ಅಲ್ಲಿ ಹಾಗೆ ಕೆಲಸ ಮಾಡುತ್ತಾ ಬಂದು, ದಾರಿಯಲ್ಲಿ ತರಕಾರಿ, ಕಿರಾಣಿ ಸಾಮಾನುಗಳನ್ನು ಹೊತ್ತು ತರುತ್ತಿದ್ದಳು. ಮನೆಗೆ ಬರುತ್ತಲೆ, ಮನೆ ಸ್ವಚ್ಛತೆ, ಅಡಿಗೆ ಮುಂತಾದ ಈ ಆಯಾಸಗಳನ್ನು ತಡೆದುಕೊಳ್ಳಲಾಗದೆ ದಿನಾಲೂ ಸಂಜೆ ತಲೆನೋವು ಮಾತ್ರೆ ನುಂಗುತ್ತಿದ್ದಳು. ಹೀಗೆ ಹದಿನೈದು ವರ್ಷಗಳಿಂದ ಎಷ್ಟು ತಲೆನೋವಿನ ಮಾತ್ರೆಗಳನ್ನು ನುಂಗಿದ್ದಾಳೆ ಲೆಕ್ಕ ಹಾಕು. ಸಂಗತಿ ಹೀಗಿರುವುದರಿಂದ ಈಕೆಗೆ ತಾನು ಹಾಕಿಕೊಂಡ ಪ್ಲಾನ್ ಪ್ರಕಾರ ಕೆಲಸಗಳು ಮುಗಿಯಬೇಕು. ಹಾಗೆ ನಡೆಯಬೇಕೆಂದರೆ ಶರೀರದಲ್ಲಿ ಯಾವುದೇ ರೀತಿಯ ತೊಂದರೆ ಇರಬಾರದು. ಜ್ವರ ಬಂದರೆ, ಒಂದು ಕ್ರೋಸಿನ್ ಟ್ಯಾಬ್ಲೇಟ್ ನುಂಗುವುದು, ನಡುವು ನೋವಿಗೆ ಮತ್ತಾವುದೋ ನುಂಗುವುದು – ಹೀಗೆ ತನ್ನ ಸ್ವಂತ ವೈದ್ಯ ಬಹಳಷ್ಟು ಇರುತ್ತಿತ್ತು. ಇದಲ್ಲದೆ ಹಬ್ಬ ಹರಿದಿನಗಳಿಗೆ ಮದುವೆ ಮುಂಜಿ ವ್ರತಗಳಿಗೆ ಹಾಜರಾಗಬೇಕೆಂದರೆ, ಆ ಸಮಯದಲ್ಲಿ ಮೈಲಾಗಬಾರದೆಂದು, ಅದನ್ನು ಎರಡು-ಮೂರು ದಿನ ನಿಲ್ಲಿಸಲು ಮಾತ್ರೆಗಳನ್ನು ಬಳಸುತ್ತಿದ್ದಳು – ಹಾಗೇ ಎಷ್ಟು ಬಳಸಿದ್ದಾಳೋ ಲೆಕ್ಕಕ್ಕಿಲ್ಲ. ಇನ್ನು ನಿಮ್ಮ ಓದಿನ ಸಮಯದಲ್ಲಿ, ಪರೀಕ್ಷಾ ಸಮಯದಲ್ಲಿ ನಿಮಗೆ ಕಾವಲಾಗಿ ಕುಳಿತುಕೊಳ್ಳುತ್ತಿದ್ದಳು. ನಿದ್ರೆ ಬರದಂತೆ ಮಾತ್ರೆ ಬಳಸುತ್ತಿದ್ದಳು. ಒಂದೊಂದು ಸಾರಿ ಎಷ್ಟೊತ್ತು ಆದರೂ ನಿದ್ದೆಬಾರದಕ್ಕೆ ನಿದ್ರೆ ಮಾತ್ರೆಗಳು ಬಳಸುತ್ತಿದ್ದಳು. ಇಂಥ ನಿರರ್ಥ ವೈದ್ಯದಿಂದ ಮಿತಿಮೀರಿದ ಕೆಲಸದಲ್ಲಿ ಆಕೆ ಷೇರುಕೊಳ್ಳುವುದು, ಮಾರುವುದು, ಜಾಗ ಖರೀದಿ ಮಾಡುವುದು, ಮಾರುವುದು, ಬಂಗಾರ ಅಡವಿಟ್ಟು ಸಾಲ ತಂದು, ಬಂಗಾರ ಕೊಂಡು, ಆ ಕಂತುಗಳನ್ನು ಕಟ್ಟುವುದು. ಸಂಬಳದಲ್ಲಿ ಸಾಧ್ಯವಾದಷ್ಟು ಹಣ ಉಳಿಸಲು, ಉಳಿದ ಅನ್ನದಿಂದ ಪುಳಿ ಓಗರೆ ಮಾಡಿ ತಿನ್ನುವುದು – ಒಂದೇನು ಇಗೋ ಇಂದು ನೀವೆಲ್ಲ ಹೀಗೆ ಇರಲು, ಆಕೆ ಬಹಳಷ್ಟು ಮಾತ್ರೆಗಳನ್ನು ನುಂಗಿದ್ದಾಳೆ – ಸರಿನಾ. ಆ ಪರಿಸ್ಥಿತಿಯಲ್ಲಿಯೇ ಏಳೆಂಟು ವರ್ಷಗಳಿಂದ ಓವರ್ ಬ್ಲೀಡಿಂಗ್ ಶುರುವಾಗಿತ್ತು. ಅದೊಂದು ದುಃಖದ ಕಥೆ. ಒಬ್ಬ ಡಾಕ್ಟರ್ 'ಚೀಲಕೊಯ್ದು

ಹಾಕಿಸು ಹಾಯಾಗಿರುತ್ತಿ' ಎಂದು ಸಲಹೆ ಕೊಟ್ಟನು. ಗರ್ಭಚೀಲ ತೆಗೆಸಿಹಾಕಿದಳು. ಓವರೀಸ್‌ನಲ್ಲಿ ಏನೋ ಇದೆಯೆಂದು ಅದನ್ನು ತೆಗೆದುಹಾಕಿದರು.

''ಅಮ್ಮಾ! ಇನ್ನು ನಾನು ನಿಮ್ಮ ಗಂಡಸರಂತೆ ತಿಂಗಳಿಗೆ ಮೂವತ್ತು ದಿನ ಕೆಲಸ ಮಾಡ್ತಿನಿ'' ಎಂದು ಇಲ್ಲದ ಮೀಸೆ ತಿರಿವಿದ್ದಳು. ನಾಲ್ಕು ವರ್ಷ ಯಾವುದೇ ತೊಂದರೆ ಯಿಲ್ಲದೆ ಗತಿಸಿದವು. ತರುವಾಯ ಏನೋ ಕಾಂಪ್ಲಿಕೇಷನ್‌ಗಳು ಬಂದವು. ಹಾರ್ಮೋನ್ ಸಪ್ಲಿಮೆಂಟ್ಸ್ ಕೊಡಬೇಕೆಂದರು, ಅವೂ ಮಾತ್ರೆಗಳೆ ಮತ್ತು ನಿಶ್ಶಕ್ತಿಗೆ ಸ್ವತಃ ತಾನೇ ಬಿ-ಕಾಂಪ್ಲೆಕ್ಸ್ ಮಾತ್ರೆ ದಿನಾಲೂ ನುಂಗುತ್ತಿದ್ದಳು. ನಲವತ್ತೈದು ವರ್ಷ ದಾಟುತ್ತಲೆ ಕಣ್ಣು ನೋವಿನೊಂದಿಗೆ, ಬ್ಲೆಡ್‌ಪ್ರೆಷರ್ ಕೂಡ ಸೇರಿತು ಅದಕ್ಕೂ ದಿನಾ ಎರಡು ಮಾತ್ರೆಗಳು – ಮಕ್ಕಳು ಸೆಟ್ಲ್ ಆದರು. ಮಗನನ್ನು ಇಂಜನೀಯರ್‌ನ ಮಾಡಿ ಸ್ಟೇಟ್ಸ್‌ನಲ್ಲಿ ಇಟ್ಟದ್ದಾಳೆ. ನಿನಗೆ ಅಮೆರಿಕಾ ವರನನ್ನು ತಂದು, ಆ ಸಾಲಗಳನ್ನೆಲ್ಲ ತೀರಿಸಿದಳು. ಇತ್ತಿತ್ತಲಾಗಿ ಒಂದು ವರ್ಷದಿಂದ ಒಂದು ಹಿಂದಿ ಚಾನೆಲ್‌ನಲ್ಲಿ ಸೀರಿಯಲೊಂದು, ಪ್ರತಿದಿನ ರಾತ್ರಿ ಹನ್ನೊಂದು ಗಂಟೆಗೆ ಬರುತ್ತಿದೆ. ಅದು ಅಮಿತ ಪತ್ತೆದಾರಿ ಸೀರಿಯಲ್. ಅದನ್ನು ನೋಡುವವರೆಗೆ ಈಕೆ ಮಲಗುತ್ತಿದ್ದಿಲ್ಲ. ಆ ಸೀರಿಯಲ್ ಹನ್ನೆರಡು ಗಂಟೆಯವರೆಗೆ ನಡೆಯುತ್ತದೆ. ಹನ್ನೆರಡು ದಾಟಿದ ತರುವಾಯ ಅಷ್ಟು ಸಸ್ಪೆನ್ಸ್‌ನಿಂದ, ಆ ಸೀರಿಯಲ್ ನಿಂತ ಮೇಲೆ, ಈಕೆಗೆ ನಿದ್ದೆ ಬರುವುದಿಲ್ಲ. ತಪ್ಪದೆ ನಿದ್ದೆ ಮಾತ್ರೆ ತೆಗೆದುಕೊಳ್ಳಬೇಕು. ಬೆಳಿಗ್ಗೆ ಐದು ಗಂಟೆಗೆ ಏಳಬೇಕು. ಇದೇ ಪುಟ್ಟಿ ಆ ಕಾಯಿಲೆ ಲಕ್ಷಣ.'' ಪ್ರಕಾಶ ತಾನು ಬರೆದುಕೊಂಡಿದ್ದ ನೋಟ್ಸ್ ಚೀಲದಲ್ಲಿ ಹಾಕಿಕೊಂಡು ಕನ್ನಡಕ ತೆಗೆದು ಒರೆಸಿ ಮತ್ತೆ ಕಣ್ಣಿಗಿಟ್ಟುಕೊಂಡನು.

''ಇದೆಲ್ಲ ನನಗೆ ಸ್ವಲ್ಪನೂ ಗೊತ್ತಿಲ್ಲ, ಇಟೀಜ್ ಕ್ವೈಟ್ ಎಮೇಜಿಂಗ್ ಅಂಕಲ್-ಐ ಡಿಡನ್ಸ್‌ನೋ-ಹೌ, ಶಾಡ್'' ಎಂದಳು ರಜನಿ.

''ಹೌದು, ಪುಟ್ಟಿ ಯು ಡಿಡನ್ಸ್ ನೋ. ಯಾಕೆಂದರೆ, ನೀನು ಯಾವಾಗ ಅಮೆರಿಕಾ ಗಂಡನನ್ನು ಕಟ್ಟಿಕೊಂಡು ಡಾಲರ್‌ಗಳ ರುಚಿ ನೋಡೋದು ಎಂಬ ಆತುರದಲ್ಲಿ ಇದ್ದಿ. ಅಮ್ಮನ ಬಗ್ಗೆ ಚಿಂತಿಸುವ ಟೈಂ ನಿನಗೆಲ್ಲಿದೆ. ಮೇಲಾಗಿ ನಿಮ್ಮಮ್ಮನಿಗೆ ಇರುವ ಭಿನ್ನವಾದ ಆಲೋಚನೆ ನಿನಗೆಲ್ಲಿ!'' ಎಂದನು ಪ್ರಕಾಶರಾವು ಗೇಟು ದಾಟುತ್ತ.

## ನಮನ



ಮುಂಬಯಿಯ 'ತಾಯಿನುಡಿ' ಪತ್ರಿಕೆಯನ್ನು ೧೯೫೬ರಲ್ಲಿ ಆರಂಭಿಸಿ ೯೦ರ ದಶಕದವರೆಗೆ ಅದರ ಸಂಪಾದಕರಾಗಿ ಖ್ಯಾತಿ ಗಳಿಸಿದ್ದ ಶ್ರೀ ಡಿ. ಕೆ. ಮೆಂಡನ್ ಅವರು ತಮ್ಮ ೭೮ನೇ ವಯಸ್ಸಿನಲ್ಲಿ ಇತ್ತೀಚೆಗೆ ನಿಧನರಾದರು. (ಕಳೆದ ವರ್ಷ ಅವರನ್ನು ಸಂದರ್ಶಿಸಿ 'ಹೊಸತು' ಒಂದು ಲೇಖನವನ್ನು ಪ್ರಕಟಿಸಿದ್ದಿತು). ಸಿದ್ಧಾರ್ಥ ಕಾಲೇಜಿನಲ್ಲಿ ೨೩ ವರ್ಷ ಉಪನ್ಯಾಸಕರಾಗಿಯೂ ಅವರು ಕೆಲಸ ಮಾಡಿದ್ದರು. ಕನ್ನಡದ ಎಲ್ಲ ಕೆಲಸಗಳಿಗೂ ಶ್ರೀ ಮೆಂಡನ್ ಅವರು ಮುಂಬೈಯಲ್ಲಿ ಸದಾ ಊರುಗೋಲಾಗಿದ್ದರು ಮತ್ತು ಅನೇಕ ಪ್ರಶಸ್ತಿಗಳಿಗೆ ಪಾತ್ರರಾಗಿದ್ದರು. 'ಹೊಸತು' ಪತ್ರಿಕೆಗೆ ಹಾಗೂ ನವಕರ್ನಾಟಕ ಪ್ರಕಾಶನ ಸಂಸ್ಥೆಗೆ ಮುಂಬೈಯಲ್ಲಿ ಅವರ ಸಹಾಯಹಸ್ತ ಅವಿರತವಾಗಿ ದೊರೆಯುತ್ತಾ ಬಂದಿತ್ತು. ಅವರ ನಿಧನಕ್ಕೆ 'ಹೊಸತು' ಸಂತಾಪ ಮತ್ತು ಗೌರವ ಸೂಚಿಸುತ್ತದೆ.

ಕಣ್ಣು ಅರಳಿಸಿಕೊಂಡು ನೋಡುತ್ತಾ ನಿಂತಿದ್ದರಿಂದ ಸುಶೀಲ ಅವಸರದಿಂದ ಮನೆಯತ್ತ ಓಡಿದಳು. ಆ ಹುಡುಗಿಗೆ ಅವರಮ್ಮನನ್ನು ಅಪ್ಪಿಕೊಂಡು ಭೋರೆಂದು ಅಳಬೇಕೆಂದೆನಿಸಿತು. ಆಕೆಯನ್ನು ರಕ್ಷಿಸಿಕೊಳ್ಳಬೇಕೆಂದೆನಿಸಿತು.

ತೆಲುಗು ಮೂಲ : ಪಿ. ಸತ್ಯವತಿ

ಅನುವಾದ : ಜಿ. ವೀರಭದ್ರಗೌಡ

ಕನ್ನಡ ಸ್ನಾತಕೋತ್ತರ ವಿಭಾಗ, ಬಸವೇಶ್ವರ ಕಲಾ ಮಹಾವಿದ್ಯಾಲಯ, ಬಾಗಲಕೋಟೆ - ೫೮೭ ೧೦೧

---

*೧೭ನೇ ಪುಟದಿಂದ (ಠಾಕುರನ ಬಾವಿ)*

ಮನೇಲೇ ಹನ್ನೆರಡು ತಿಂಗಳೂ ಇಸ್ಪೀಟಾಟ ನಡ್ಯತ್ತೆ. ಈ ಸಾಹೂಜಿ ತುಪ್ಪಕ್ಕೆ ಎಣ್ಣೆ ಬೆರ್‍ಸಿ ಮಾರಾಟ ಮಾಡ್ತಾನೆ. ಕೆಲ್ಸ ಮಾಡಿಸ್ಕೊಂಡು ಕೂಲಿ ಕೊಡೋಕೆ ಅಜ್ಜಿ ಪ್ರಾಣ ಬಿಡತ್ತೆ. ನಮ್ಗಿಂತ ಯಾವ ವಿಷಯದಲ್ಲಿ ಇವ್ರು ಉತ್ತಮರು? ಬಾಯಿ ಜೋರು ಮಾಡೋದ್ರಲ್ಲಿ ನಮ್ಗಿಂತ ಉತ್ತಮರೇ ಹೌದು. ಹಳ್ಳಿ ಒಳ್ಗೆ ಕಾಲಿಟ್ಟೇಂದ್ರೆ ಎಲ್ರ ಎದೇಮೇಲೂ ಹಾವು ಹರೀತಿರೋ ಹಾಗೆ ಮಾದಕ ಕಣ್ಣುಗಳಿಂದ ನೋಡೋಕೆ ಶುರು ಮಾಡ್ತಾರಲ್ಲ. ಆದ್ರೂ ನಾವು ಉತ್ತಮರು ಅನ್ನೋ ಅಹಂಕಾರ!

ಬಾವಿಯ ಬಳಿ ಯಾರೋ ಬರುತ್ತಿರುವ ಸಪ್ಪಳ. ಗಂಗಿಯ ಎದೆ ಢವಗುಡತೊಡಗಿತು. ಯಾರಾದ್ರೂ ನೋಡ್ಬಿಟ್ರೆ ಫಜೀತಿಗಿಟ್ಕೊಳತ್ತೆ. ಹೆಜ್ಜೆ ಊರುವಂತಿಲ್ಲ. ಹಗ್ಗ ಹಾಗೂ ಕೊಡವನ್ನೆತ್ತಿಕೊಂಡು ಬಗ್ಗಿ ನಡೆಯುತ್ತಾ, ಒಂದು ಕತ್ತಲ ಮರದ ಮರೆಯಲ್ಲಿ ಬಂದು ನಿಂತಳು. ಯಾರ ಮೇಲಾದ್ರೂ ಈ ಜನಗಳಿಗೆ ಯಾವಾಗ ದಯೆ ಬರತ್ತೋ ಪಾಪ. ಬಡಪಾಯಿ ಮಹಂಗೂನ ಎಷ್ಟು ಹೊಡೆದಿದ್ರು. ತಿಂಗಳವರ್‍ಗೂ ರಕ್ತ ಕಾರ್‍ತಿದ್ದ. ಯಾಕಂದ್ರೆ ಅವ್ನು ಬಿಟ್ಟಿ ಕೆಲ್ಸ ಮಾಡೋಕೆ ಒಪ್ಲಿಲ್ಲಾಂತ. ಇಷ್ಟರ ಮೇಲೂ ಈ ಜನ ಉತ್ತಮರೆನಿಸಿಕೊಳ್ತಾರೆ.

ಬಾವಿಯ ಬಳಿ ನೀರು ಸೇದಲು ಬಂದ ಇಬ್ಬರು ಹೆಂಗಸರ ನಡುವೆ ಮಾತುಕತೆ ನಡೆಯುತ್ತಿತ್ತು.

''ಊಟ ಮಾಡೋಕೆ ಹೊರಟಾಗ ಹೊಸ ನೀರು ತರುವಂತೆ ಆಜ್ಞೆ ಮಾಡಿದ್ರು. ಕೊಡ ತರೋಕೂ ಕಾಸಿಲ್ಲ.''

''ನಾವು ಆರಾಮವಾಗಿ ಕೂತಿರೋದು ಕಂಡ್ರೆ ಈ ಗಂಡಸ್ರಿಗೆ ಹೊಟ್ಟೆ ಉರ್‍ಯತ್ತೆ.''

''ಕೊಡ ತಗೊಂಡ್ಹೋಗಿ ನೀರು ತರೋಕಂತೂ ಆಗಲ್ಲ, ಚಾಕರಿಯ ಆಳುಗಳಂತೆ ನಮ್ಗೆ ಆಜ್ಞೆಯಂತೂ ಮಾಡ್ತಾರೆ.''

''ಕೆಲ್ಸದಾಳಲ್ದೆ ಮತ್ತಿನ್ನೇನು ನೀನು? ಹಿಟ್ಟು ಬಟ್ಟೆ ಸಿಗಲ್ವೆ? ಐವತ್ತು ರೂಪಾಯಿ ಹೇಗೋ ಉಳಿಸ್ಕೋತಿ. ಕೆಲ್ಸದವ್ರು ಇನ್ನೆಂಗಿರ್‍ತಾರೆ?''

''ಒಂದು ಕ್ಷಣದ ವಿಶ್ರಾಂತಿಗಾಗಿ ಜೀವ ಹಾತೊರೆಯುತ್ತೆ. ಇಷ್ಟು ಕೆಲ್ಸ ಬೇರೆ ಯಾರ ಮನೇಲಾದ್ರು ಮಾಡಿದ್ರೆ ಇದಕ್ಕಿಂತ ಆರಾಮವಾಗಿ ರ್‍ತೋದಿತ್ತು. ಇದನ್ನೇ ತಮ್ಮ ದೊಡ್ಡಸ್ತಿಕೇಂತ ತಿಳೀತಾರೆ. ಕೆಲ್ಸ ಮಾಡಿ ಮಾಡಿ ಸತ್ರೂ ಯಾರ ಬಾಯೂ ನೆಟ್ಟಗಿರಲ್ಲ.''

ಇಬ್ಬರೂ ನೀರು ತುಂಬಿಕೊಂಡು ನಡೆದಾಗ ಗಂಗಿ ಮರದ ಮರೆಯಿಂದ ಹೊರಟು ಬಾವಿಯ ಜಗುಲಿಯ ಬಳಿ ಬಂದಳು. ಠಾಕುರ್ ಕೂಡ ಬಾಗಿಲು ಮುಚ್ಚಿ ಮಲಗಲು ಒಳಗೆ ಹೋಗುತ್ತಿದ್ದರು. ಗಂಗಿ ಕ್ಷಣಕಾಲ ನೆಮ್ಮದಿಯ ಉಸಿರಾಡಿದಳು. ಎಲ್ಲಾ ನಿರಾಳವಾಯ್ತು. ಅಮೃತ ಕದ್ದು ತರಲು ಒಬ್ಬ ರಾಜಕುಮಾರ ಯಾವ್ದೋ ಕಾಲ್ದಲ್ಲಿ ಹೋಗಿದ್ದಂತಲ್ಲಾ ಅವ್ನು ಕೂಡ ಬಹುಶಃ ಇಷ್ಟು ಎಚ್ಚರಿಕೆಯಿಂದ ಯೋಚಿಸಿ ಹೋಗಿರಲಾರ. ಗಂಗಿ ಮೆಲ್ಲಗೆ ಬಾವಿಯ ಜಗಲಿ ಹತ್ತಿದಳು. ಮೊದಲಿಗೆಂದೂ ಅವಳಿಗೆ ಇಂಥ ವಿಜಯದ ಅನುಭವವಾಗಿರಲಿಲ್ಲ.

ಹಗ್ಗದ ಕುಣಿಕೆಯನ್ನು ಕೊಡಕ್ಕೆ ಬಿಗಿದಳು. ರಾತ್ರಿಯ ವೇಳೆ ಶತ್ರುಗಳ ಕೋಟೆಗೆ ಕನ್ನ ಹಾಕುತ್ತಿರುವ ಸಿಪಾಯಿಯಂತೆ ಎಚ್ಚರಿಕೆಯಿಂದ ಎಡ, ಬಲ, ನೋಡಿದಳು. ಒಂದು ವೇಳೆ ಈಗೇನಾದ್ರು ಅವ್ಳು ಸಿಕ್ಕಿಹಾಕಿಕೊಂಡರೆ ಅವಳಿಗೆ ಕ್ಷಮೆಯ ಭರವಸೆ ಎಳ್ಳಷ್ಟೂ ಇಲ್ಲ. ಕೊನೆಗೆ ದೇವರನ್ನು ನೆನೆದು ಹೃದಯ ಗಟ್ಟಿಮಾಡಿ ಬಾವಿಗೆ ಕೊಡ ಬಿಟ್ಟಳು.

ಕೊಡ ಬಹಳ ನಿಧಾನವಾಗಿ ನೀರಿನಲ್ಲಿ ಬಿದ್ದದ್ದಿತು. ಸ್ವಲ್ಪವೂ ಸದ್ದಿಲ್ಲ. ಗಂಗಿ ನಾಲ್ಕಾರು ಬಾರಿ ಹಗ್ಗ ಎಳೆದಳು. ಕೊಡ ಬಾವಿಯ ಮೇಲ್ಭಾಗದವರೆಗೂ ಬಂತು. ಯಾವ ದೊಡ್ಡ ಪೈಲ್ವಾನನಿಗೂ ಇಷ್ಟು ವೇಗವಾಗಿ ಎಳೆಯಲು ಸಾಧ್ಯವಾಗ್ತಿರ್‍ಲಿಲ್ಲ.

ಗಂಗಿ ಬಗ್ಗಿ ಕೊಡವನ್ನೆಳೆದು ಜಗಲಿಯ ಮೇಲಿಟ್ಟಾಗ ಇದ್ದಕ್ಕಿದ್ದಂತೆ ಠಾಕುರ ಸಾಹೇಬನ ಮನೆಯ ಬಾಗಿಲು ತೆರೆಯಿತು. ಸಿಂಹದ ಬಾಯಿ ಕೂಡ ಇದಕ್ಕಿಂತ ಭಯಾನಕವಲ್ಲ. ಗಂಗಿಯ ಕೈಯ್ಯ ಹಗ್ಗ ಜಾರಿ ಕೊಡದ ಸಮೇತ ಧಡಮ್ಮೆಂದು ನೀರಲ್ಲಿ ಬಿತ್ತು. ಅನೇಕ ಕ್ಷಣಗಳವರೆಗೂ ನೀರಿನಲ್ಲೆದ್ದ ಅಲೆಗಳ ಸದ್ದು ಕೇಳುತ್ತಿತ್ತು.

''ಯಾರು? ಯಾರು?'' ಎಂದು ಕೂಗುತ್ತಾ ಠಾಕುರ ಬಾವಿಯ ಬಳಿ ಬರುತ್ತಿರುವಾಗಲೇ ಗಂಗಿ ಜಗಲಿ ಹಾರಿ ಓಡುತ್ತಿದ್ದಳು. ಮನೆ ತಲುಪಿದಾಗ ಜೋಕು ಅದೇ ಕೊಳಕು ದುರ್ಗಂಧದ ನೀರನ್ನೇ ಕುಡಿಯುತ್ತಿದ್ದ!

ಮೂಲ : ಮುನ್ಶಿ ಪ್ರೇಮಚಂದರ ಹಿಂದಿ ಕಥೆ

ಭಾವಾನುವಾದ : ಟಿ. ಎಸ್. ಲಲಿತ

೭೦೨, ಮೊದಲನೆಯ ಮಹಡಿ, ೧೭ನೇ ಮುಖ್ಯರಸ್ತೆ
ಸರಸ್ವತಿಪುರ, ಮೈಸೂರು - ೫೭೦ ೦೦೯

# ಮೀಸಲಾತಿ ಮತ್ತು ಜಾತಿ ಪದ್ಧತಿ

**ರಾಜಕೀಯ ಶಕ್ತಿ ವ್ಯಕ್ತಿಗಳು ಸಾರ್ವಜನಿಕ ಮತದಾನದಲ್ಲಿ ಓಟು ಗಳಿಸಲು ಹೂಡಿದ ತಂತ್ರಗಳಲ್ಲಿ ಈ 'ಮೀಸಲಾತಿ'ಯನ್ನು ಪ್ರಮುಖ ಪ್ರಣಾಳಿಕೆ ಮಾಡಿಕೊಂಡಿದ್ದು ನಮ್ಮ ದೇಶದ ದುರಂತ ಘಟನೆ ಎಂದೇ ಅರ್ಥೈಸಬೇಕಾಗುತ್ತದೆ. ಏಕೆಂದರೆ ಈ ಮೀಸಲಾತಿಯ ಅನುಷ್ಠಾನದಿಂದ ಜಾತಿ, ಮತ ಪಂಗಡಗಳ ಮಧ್ಯೆ ಪರಸ್ಪರ ಮೇಲು-ಕೀಳು ಭಾವನೆಯ ವಿಷಬೀಜ ಬಿತ್ತಲು ಸಹಾಯವಾಯಿತು! ಮುಸ್ಲಿಂ-ಕ್ರಿಶ್ಚಿಯನ್-ಹಿಂದೂ-ಜೈನ-ಬೌದ್ಧ-ಸಿಖ್-ಪಾರಸಿ, ಆಂಗ್ಲೋ-ಇಂಡಿಯನ್ ಇತ್ಯಾದಿ ಮತಧರ್ಮಗಳ ಜನರು ವಾಸಿಸುವ ದೇಶದಲ್ಲಿ ಈ ಮೀಸಲಾತಿಯ ಸೌಲಭ್ಯ ಪಡೆಯಲು ಎಲ್ಲರೂ ತಿಕ್ಕಾಟ ನಡೆಸಿದರು. ಬಹುಸಂಖ್ಯಾತ ಜನರ ಪ್ರಮಾಣ ಎಷ್ಟು? ಅಲ್ಪಸಂಖ್ಯಾತ ಜನರ ಪ್ರಮಾಣ ಎಷ್ಟು? ಈ ಪ್ರಮಾಣ ಮೀರಿದಾಗ ಅನುಸರಿಸಬೇಕಾದ ವಿಧಿ-ವಿಧಾನಗಳ ಬಗ್ಗೆ ಇದುವರೆಗೂ ಖಚಿತವಾದ ಅಂಕಿ-ಅಂಶಗಳಾಗಲಿ, ಕಾನೂನಾಗಲಿ ರಚಿತಗೊಂಡಿಲ್ಲ ಎಂಬುದೇ ಮತ್ತೊಂದು ವಿಪರ್ಯಾಸದ ಸಂಗತಿಯಾಗಿದೆ.**

ಬಿ. ಪಿ. ಶಿವಾನಂದ ರಾವ್

ಮೀಸಲಾತಿ ಎಂಬುದು ಸದುದ್ದೇಶದಿಂದ ಕೂಡಿದ್ದಾದ ಒಂದು ಸಾಮಾಜಿಕ ಪರಿವರ್ತನೆಯ ಒಂದು ಸರ್ಕಾರಿ ಕೃಪಾ ಪೋಷಿತ ವ್ಯವಸ್ಥೆ. ಈ ವ್ಯವಸ್ಥೆಯು ಹುಟ್ಟಿನಿಂದಲೇ ರೋಗಿಷ್ಠ ಶಿಶುವಾಗಿ ಅಡ್ಡಾದಿಡ್ಡಿ ಬೆಳೆಯುತ್ತಿದೆ. ಮೀಸಲಾತಿಯ ಸೌಲಭ್ಯವು ಅನುಷ್ಠಾನಗೊಂಡಾಗ ಭೌಗೋಳಿಕವಾಗಿ ಭಾರತದಂಥ ವಿಶಾಲ ಪ್ರದೇಶದಲ್ಲಿ ವಾಸಿಸುವ ವರ್ಗ-ವರ್ಣ ಭೇದ ಆಧಾರಿತ ಜನರ ಶೇಕಡಾವಾರು ಪ್ರಮಾಣದಲ್ಲಿ ಸಮಾನತೆ ಸರಿದೂಗಿಸಲು ಸಾಧ್ಯ. ಜೊತೆಗೆ ಪ್ರಜಾಪ್ರಭುತ್ವದ ಉದ್ದೇಶಿತ ಮೌಲ್ಯಗಳನ್ನು ಸಫಲಗೊಳಿಸವುದೇ ಆಗಿದೆ. ಸಾಮಾಜಿಕ ನ್ಯಾಯ, ಸ್ವಾತಂತ್ರ್ಯ, ಶಿಕ್ಷಣ, ಉದ್ಯೋಗ ಮುಂತಾದ ಪ್ರಜಾಸತ್ತೆಯ ಸೌಲಭ್ಯಗಳಿಂದ ವಂಚಿತರಾದ ಜನರ ದೈನ್ಯದ ಬದುಕಿನ ಸರ್ವತೋಮುಖ ಉತ್ಕರ್ಷಕ್ಕಾಗಿ ರೂಪಿಸಿದ್ದೀ ಶಾಸನವು ಪರಮೋದ್ದೇಶದಿಂದ ಕೂಡಿದ್ದಾಗಿದೆ. ಸಾವಿರಾರು ವರ್ಷಗಳಿಂದ ಇಡೀ ದೇಶದಲ್ಲಿ ಸಾಂಕ್ರಾಮಿಕ ರೋಗದಂತೆ ಹರಡಿದ ಈ ವರ್ಗ-ವರ್ಣಭೇದವು ವಿಶೇಷತಃ ಆಯಾ ವರ್ಗ-ಜಾತಿಯ ಆಧಾರದ ಮೇಲೆಯೇ ರೂಪಿಸಿದ್ದಾಗಿತ್ತು. ವಿಶೇಷತಃ ವ್ಯಕ್ತಿಯ ಬುದ್ಧಿಮತ್ತೆ, ಗ್ರಹಿಕಾ ಶಕ್ತಿ, ಶಾಸ್ತ್ರಾಧ್ಯಯನ, ಉದ್ಯೋಗ ಕೌಶಲ್ಯ, ಸಾಹಸಪ್ರಿಯತೆ, ಸೇವಾ ಮನೋಭಾವ, ದಾಸ್ಯಪ್ರವೃತ್ತಿ, ಆಡಳಿತ ನೈಪುಣ್ಯ, ವ್ಯಾವಹಾರಿಕ ಕುಶಲತೆ ಇವೇ ಭವಿಷ್ಯದಲ್ಲಿ ಉದ್ಯೋಗದ ಆಯ್ಕೆಗೆ ಮೂಲ ಅರ್ಹತೆಯಾಗಿ ಪರಿವರ್ತಿತಗೊಂಡಿದ್ದು ಐತಿಹಾಸಿಕ ಸತ್ಯಾಂಶವೇ. ಸಂಚಾರ-ಸಂಪರ್ಕದ ಮೂಲ ಸೌಲಭ್ಯಗಳ ಕೊರತೆಯೂ ಅಧಿಕವಾಗಿದ್ದಕ್ಕೇ, ಆ ಕಾಲದ ಶಿಕ್ಷಣ ಪದ್ಧತಿಯಲ್ಲಿನ ದೋಷಗಳು ಅಸಮಾನತೆ ಹಾಗೂ ಆರ್ಥಿಕ ದುರ್ಬಲತೆಗೂ ಕಾರಣವಾಗಿತ್ತು. ಮೇಲು ಕೀಳೆಂಬ ಜಾತಿಯ ದುಷ್ಟ ಪದ್ಧತಿಯು ಆ ಕಾಲದ ವ್ಯಕ್ತಿಗೆ ಪ್ರತಿಷ್ಠೆಗೂ-ಪ್ರಲೋಭನೆ-ಅನ್ಯಾಯ-ಅತೀರೇಕಗಳಿಗೂ ಪ್ರಬಲ ಅಸ್ತ್ರವಾಗಿತ್ತು.

ತತ್ಫಲವೆಂದರೆ, ಆಯಾತನ ಉದ್ಯೋಗದ ಅವಲಂಬನೆಯೇ. ಉದಾಹರಣೆಗೆ ಪೌರೋಹಿತ್ಯ, ಯಜ್ಞ, ಯಾಗ, ಧರ್ಮಾನುಷ್ಠಾನ, ಶಿಕ್ಷಣದಾನವು ಬ್ರಾಹ್ಮಣರ ಉದ್ಯೋಗವೆಂತಲೂ, ಅರಮನೆ, ಕೋಟೆ ಕಟ್ಟಿ ಶತ್ರುಗಳಿಂದ ಪ್ರಜೆಗಳನ್ನು ರಕ್ಷಿಸಿ (ಯುದ್ಧ-ತಂತ್ರ-ಶಸ್ತ್ರಾಸ್ತ್ರಗಳ ಮೂಲಕ) ಆಳುವ ಅಧಿಕಾರ ನಡೆಸುವ ಬುದ್ಧಿಮತ್ತೆಯುಳ್ಳ ಸಾಹಸ ಬುದ್ಧಿಯವರು 'ಕ್ಷತ್ರಿ'ಯರೆಂತಲೂ, ವ್ಯಾಪಾರ, ವ್ಯವಹಾರ, ಸಂಚಾರ, ಸಂಪರ್ಕ ಆಮದು-ರಫ್ತುಗಳ ವೃತ್ತಿಯವರು ತಮ್ಮನ್ನು 'ವೈಶ್ಯ'ರೆಂತಲೂ ಪ್ರಾಣಿ ಸಾಕಣಿಕೆ, ವ್ಯವಸಾಯ, ಮೇಲುವರ್ಗದವರ ಸೇವೆ ಮಾಡುವ ಹಾಗೂ ಕೃಷಿ ಅವಲಂಬಿತ ನಿರಕ್ಷರಕುಕ್ಷಿಗಳೆಲ್ಲ 'ಶೂದ್ರ'-ಹೀಗೆ ಪ್ರಮುಖ ಜಾತಿಗಳೆಂದು ಗುರುತಿಸಲ್ಪಟ್ಟಿತು. ಸಾಮಾಜಿಕ ವ್ಯವಸ್ಥೆಗಳನ್ನು ಆಳುತ್ತಿದ್ದ ಆಳರಸರೇ ನೋಡಿಕೊಳ್ಳುತ್ತಿದ್ದುದರಿಂದ ಅವರ ಅವಕೃಪೆಗೆ ತುತ್ತಾದವರೆಂದರೆ ಶೂದ್ರವರ್ಗ.

ಈ ದಿಸೆಯಲ್ಲಿ ವಿಶೇಷತಃ ಕರ್ನಾಟಕದಲ್ಲಿ ೧೨ನೇ ಶತಮಾನದಲ್ಲಿ ಬಸವಣ್ಣನವರು ಜಾತಿ, ವರ್ಗ ಸಂಘರ್ಷ, ಮೇಲ್ಜಾತಿಯವರ ದೌರ್ಜನ್ಯ ಅಥವಾ ತುಳಿತದಿಂದಾಗಿ ನೊಂದ, ದುಃಖಿತ, ಶೋಷಿತ ಜನರನ್ನು ಉಳಿದ ಸಾಮಾಜಿಕರಂತೆ ಮಾಡುವ ಹಾಗೂ ಅವರು ಮಾಡುವ ಯಾವುದೇ ಕೆಲಸಕ್ಕೆ ಗೌರವ, ನ್ಯಾಯವನ್ನು ತಂದು ಕೊಡುವಲ್ಲಿ ಸಾಮಾಜಿಕ ಕ್ರಾಂತಿಯ ಬೀಜ ಬಿತ್ತಿ ಜನಜಾಗೃತಿಯ ಹೊಸ ಅಲೆ ಎಬ್ಬಿಸಿ ಮಹಾನ್ ಕ್ರಾಂತಿ ಪುರುಷರಾದರು.

ಬ್ರಿಟಿಷರ ಆಡಳಿತ ಕಾಲದಲ್ಲಿ ಸತಿ ಸಹಗಮನ ಪದ್ಧತಿ, ಬಾಲ್ಯವಿವಾಹ, ಮೂಢನಂಬಿಕೆಗಳ ವಿರುದ್ಧ ಭಾರತೀಯ ಕ್ರಾಂತಿಪುರುಷರು ನಡೆಸುತ್ತಿದ್ದ ಚಳುವಳಿಗೆ ಪ್ರೋತ್ಸಾಹಿಸಿದವರಲ್ಲಿ ರಾಜಾ ರಾಮಮೋಹನ ರಾಯ್, ಮಹಾತ್ಮ ಫುಲೆ, ದಯಾನಂದ ಸರಸ್ವತಿ ಇವರು ಮುಖ್ಯರಾದರು.

ಭಾರತದ ಸ್ವಾತಂತ್ರ್ಯಕ್ಕೆ ಪೂರ್ವದಲ್ಲೇ ಅಸ್ಪೃಶ್ಯತೆಯ ವಿರುದ್ಧ ಹೋರಾಡಿ ಸಾಮಾಜಿಕ ಕ್ರಾಂತಿಯನ್ನು ರಾಜಕೀಯ ಚಳುವಳಿಗಳ ಮೂಲಕ ತ್ಯಾಗ, ಅಹಿಂಸೆ, ಧರ್ಮದ ಮೂಲಕ ನಡೆಸಿದ ಮಹಾತ್ಮಾ ಗಾಂಧೀಜಿಯವರು ಯಶಸ್ಸಿನ ಗುರಿ ಮುಟ್ಟಿ ಭಾರತವು ಸ್ವಾತಂತ್ರ್ಯದ 'ಹೊಸ ಯುಗ'ಕ್ಕೆ ಪದಾರ್ಪಣೆ ಮಾಡಿಸುವಲ್ಲಿ ಸಫಲರಾದರು.

ಇದೇ ಸಾಮಾಜಿಕ ಆವಿಷ್ಕಾರ ಪಥದಲ್ಲಿ ತಮ್ಮದೇ ಆದ ಪ್ರಬುದ್ಧ ವಿಚಾರಕ್ರಾಂತಿಯ ಮೂಲಕ ಕೆಳವರ್ಗದ ಜನರಲ್ಲಿ ಸಮಾನತೆ ಹಕ್ಕು, ಸ್ವಾತಂತ್ರ್ಯ, ನ್ಯಾಯದ ಬಗೆಗಾಗಿ ದುಡಿದವರಲ್ಲಿ, ಕ್ರಾಂತಿಯ ಕಿಡಿ ಸಿಡಿಸಿದವರಲ್ಲಿ ಡಾ|| ಬಿ.ಆರ್.ಅಂಬೇಡ್ಕರರು ಸುಪ್ರಸಿದ್ಧರು. ಅಸ್ಪೃಶ್ಯರ, ದೀನ ದಲಿತರ ಬಗೆಗೆ ಅವರ ವಿಚಾರಧಾರೆ ಹೀಗೆ :

"ನಿಮ್ಮ ನಿಸ್ತೇಜ ಮುಖದಲ್ಲಿನ ನೋವನ್ನು, ದುಃಖಿತ ಧ್ವನಿಯನ್ನು ಕಂಡಾಗ ನನ್ನೆದೆ ಬಿರಿಯುತ್ತದೆ. ಅನಾದಿಕಾಲದಿಂದಲೂ ನೀವು ನಿಮ್ಮ ದುಃಸ್ಥಿತಿಯ ಬಗ್ಗೆ ನಾಚಿಕೆ ಪಟ್ಟುಕೊಳ್ಳದಿದ್ದ ಬಗೆಗೆ ಖೇದವೆನಿಸುತ್ತದೆ. ಏಕೆ ನೀವು ನಿಮ್ಮ ಹಕ್ಕುಗಳ ಬಗೆಗೆ ಪ್ರತಿಭಟಿಸುವುದಿಲ್ಲ? ದುಃಖ, ಬಡತನ, ಜೀತ ಮತ್ತು ಭಾರವನ್ನು ಎಷ್ಟು ಕಾಲ ಹೀಗೆ ಹೊತ್ತು ನಿಷ್ಕ್ರಿಯರಾಗಿ ಬದುಕುತ್ತೀರಿ ? ಇಂಥ ದಾರಿದ್ರ್ಯದ ಬದುಕನ್ನು ಏಕೆ ಅಪೇಕ್ಷಿಸುತ್ತೀರಿ ? ಒಂದು ವಿನೂತನ ಜೀವನಶೈಲಿಗಾಗಿ ನೀವು ಎಚ್ಚೆತ್ತು ವಿಮುಕ್ತಗೊಳ್ಳಲು ಹೋರಾಟ ನಡೆಸದೆ ಹೋಗುವುದಾದಲ್ಲಿ, ನೀವು ನಿಮ್ಮಲ್ಲಿ ಸ್ವಸಹಾಯವೇ ಉತ್ಕೃಷ್ಟ ಸಹಾಯ (ಏಳಿಗೆ)ವೆಂದು ಅರ್ಥೈಸಿಕೊಳ್ಳಲಾರದೆ ಹೋದಲ್ಲಿ ನೀವು ಸಾಯುವುದೇ ಒಳ್ಳೆಯದು."

ಅಮೋಘವಾದ ಈ ಮೀಸಲಾತಿಯ ಬೀಜ ಮೊಳೆತಿದ್ದು ಅಂಬೇಡ್ಕರರ ಹೋರಾಟದ್ದೇ ಪ್ರತಿಫಲ. ಸಂಘಟನೆ, ಶಿಕ್ಷಣ, ಹೋರಾಟದ ಮಂತ್ರಗಳನ್ನು ಅಸ್ಪೃಶ್ಯ ಜನಾಂಗಕ್ಕೆ ನೀಡಿದ ಡಾ|| ಅಂಬೇಡ್ಕರರು ಭಾರತದ ಸಂವಿಧಾನದ ಶಿಲ್ಪಿಗಳೆಂಬ ಹೆಗ್ಗಳಿಕೆಗೂ ಪಾತ್ರರಾದರು. ಆ ಸಂವಿಧಾನದಲ್ಲೇ ಅಸ್ಪೃಶ್ಯರ, ದೀನದಲಿತರ ಉದ್ಧಾರಕ್ಕಾಗಿ ಸರ್ಕಾರಿ ಹುದ್ದೆಗಳಲ್ಲಿ, ಅರೆ ಸರ್ಕಾರಿ, ಅನುದಾನಿತ ಶಿಕ್ಷಣ ಸಂಸ್ಥೆಗಳಲ್ಲಿ, ಸರ್ಕಾರಿ ಕಾರ್ಖಾನೆಗಳಲ್ಲಿ ಹುದ್ದೆಗಳನ್ನು ಮೀಸಲಾತಿ ಯೋಜನೆಯ ಶಾಶ್ವತ ಅನುಷ್ಠಾನಕ್ಕಾಗಿ ಶಾಸನದನ್ವಯ ನೇಮಕವನ್ನು ಕಡ್ಡಾಯಗೊಳಿಸಿದ್ದಾರೆ.

ಅಂಬೇಡ್ಕರ್, ಗಾಂಧೀಜಿಯವರ ತತ್ವ ಸಿದ್ಧಾಂತಗಳು ಭಾರತದಂತಹ ವಿಶಾಲ ಭೂಪ್ರದೇಶದ ವಿವಿಧ ಜಾತಿ-ಪಂಗಡಗಳ ಜನರನ್ನು ಸಮಾನತೆಯ ಉದ್ದಿಶ್ಯದಿಂದ ಕಾಣಲಿಚ್ಛಿಸಿದ್ದನ್ನು ಯಾವ ಪ್ರಜ್ಞಾವಂತ ಭಾರತೀಯನೂ ಅಲ್ಲಗಳೆಯಲಾರ. ಆದರೆ ಈಗ ಮೀಸಲಾತಿ ಎಂಬ ಅಸ್ತ್ರದ ಪರಿಣಾಮ ಇಡೀ ಭಾರತೀಯ ಸಮಾಜವನ್ನು ಘಾತಿಸಿದೆ. ಒಂದಾಗಬೇಕಿದ್ದ ಸಮಾಜ ಹರಿದು ಚಿಂದ್ರಾವಳಿ

ಆಗುತ್ತಿದೆಯೆಂಬ ಘೋರ ಪರಿಣಾಮಕ್ಕೆ ತುತ್ತಾಗಿಸಿದೆ.

ಮೀಸಲಾತಿಯನ್ನು ಮೂಲಭೂತವಾಗಿ ಒಬ್ಬ ಭಾರತೀಯ ಸಂಜಾತ ವ್ಯಕ್ತಿ ಹುಟ್ಟಿನಿಂದ ಪಡೆದ ಜಾತಿಯ ಹೆಸರಿನ ಆಧಾರದ ಮೇಲೆ ಮಾತ್ರ ಭಾರತೀಯ ರಾಜ್ಯಾಂಗವು ಶಾಸನಬದ್ಧವಾಗಿ ಅನುಮೋದಿಸಲ್ಪಟ್ಟ ಕ್ರಮದಲ್ಲಿ ನಿರ್ಧರಿಸಲ್ಪಡುತ್ತದೆ. ಹೀಗಾಗಿ ಮೀಸಲಾತಿಯ ಅರ್ಹತೆಯು ಜಾತಿ ಆಧಾರದಲ್ಲಿ ಕ್ರಮಬದ್ಧತೆಯ ಹಕ್ಕು ಪಡೆದಿದೆ.

ಯಾವುದೇ ಹುದ್ದೆಯನ್ನು ಅದು ಸರ್ಕಾರಿ, ಅರೆ ಸರ್ಕಾರಿ, ಖಾಸಗಿ ಅನುದಾನಿತ ಸಂಘ-ಸಂಸ್ಥೆಗಳಲ್ಲಿ ವ್ಯಕ್ತಿಯು ಆತ/ಕೆಯು ಪಡೆದ ಅರ್ಹತೆಯ ಆಧಾರದ ಮೇಲೆ ನಿರ್ಣಯಿಸಲ್ಪಡುತ್ತದೆ. ಅವು ಯಾವುವೆಂದರೆ ೧. ಶಿಕ್ಷಣ, ೨. ಅಭ್ಯಸಿಸಿದ ವಿಷಯಜ್ಞಾನ, ೩. ವಯಸ್ಸು, ೪. ಹಿಂದಿನ ಉದ್ಯೋಗದ ಅನುಭವ, ೫. ಸಾಮಾನ್ಯ ಜ್ಞಾನ, ೬. ಆರ್ಥಿಕ ಸಾಮರ್ಥ್ಯ, ೭. ಜಾತಿ, ೮. ಮತ, ೯. ಧರ್ಮ, ೧೦. ಭಾಷೆ. ಇವು ಪ್ರಮುಖ ಅರ್ಹತೆಗಳಾಗಿದ್ದು, ನೌಕರಿಗೆ ಆಯ್ಕೆಯ ಪರೀಕ್ಷಾ ಉಪಕ್ರಮದಲ್ಲಿ ಎರಡು ಬಗೆ ನಿರೂಪಿತಗೊಂಡಿದೆ. ಅರ್ಥಾತ್ ಮೌಖಿಕ ಸಂದರ್ಶನದಲ್ಲಿ ಪರೀಕ್ಷಾರ್ಥಿ ಗಳಿಸುವ ಅಂಕಗಳು. ಎರಡನೆಯದು ಲಿಖಿತ ಪರೀಕ್ಷೆ. ಪರೀಕ್ಷಾರ್ಥಿ ಉತ್ತರಿಸಿದ ಉತ್ತರಗಳ ಮೌಲ್ಯಮಾಪನದಲ್ಲಿ ಶೇಕಡಾ ಇಂತಿಷ್ಟು ಎಂದು. ಈ ಎರಡರಲ್ಲೂ ಗಳಿಸಿದ ಅಂಕಗಳಲ್ಲಿ ಶೇಕಡಾವಾರು ಅಂಕಗಳೇ ಅಭ್ಯರ್ಥಿಯ ನೌಕರಿಯ ಗಳಿಕೆಗೆ ಅರ್ಹತೆ ಆಗುತ್ತದೆ.

ಹಿಂದುಳಿದ, ಅಲ್ಪಸಂಖ್ಯಾತರ, ಪರಿಶಿಷ್ಟ ಜಾತಿ-ವರ್ಗ, ಅನುಸೂಚಿತ ವರ್ಗದ ಅಭ್ಯರ್ಥಿಗಳಿಗೆ ಅಂಕ ರಿಯಾಯ್ತಿ ಅಥವಾ ವಿನಾಯಿತಿ ನೀಡಿ ಆಯ್ಕೆ ಮಾಡುವ ವಿಧಾನ ಅನುಷ್ಠಾನಕ್ರಮ ಈಗ ರೂಢಿಯಲ್ಲಿದೆ. ಉಳಿದವರ್‍ಯಾರಿಗೂ ಈ ಮೀಸಲಾತಿಯ ಸೌಲಭ್ಯ ಅನ್ವಯವಾಗುವುದಿಲ್ಲ. ಒಬ್ಬ ವ್ಯಕ್ತಿ ಆತ/ಕೆ ಕೆಳಸ್ತರದ ನೌಕರಿಯಿಂದ ಹಿಡಿದು ಗೆಜೆಟೆಡ್ ಹುದ್ದೆ ಗಳಿಸುವ ಕ್ರಮದಲ್ಲಿ ಅರ್ಹತೆಯೊಂದೇ ಆಯ್ಕೆಗೆ ಮೂಲಾಧಾರವಾದಾಗ ಮಾತ್ರ ಆತ ನೀಡುವ - ಮಾಡುವ ಯಾವುದೇ ಬಗೆಯ ಶಾರೀರಿಕ-ಮಾನಸಿಕ ಸೇವೆಗೆ ಒಂದು ಜವಾಬ್ದಾರಿ, ಬುದ್ಧಿ ಕೌಶಲ್ಯ, ವಸ್ತುವಿನ ಬೆಲೆ, ಸಹಕಾರ ಬಾಳ್ವೆಯ ರೀತಿ ನೀತಿಗಳು ನಿರ್ಣಾಯಕ ಹಂತದಲ್ಲಿ ಪ್ರಮುಖವಾಗಿ ನಿಲ್ಲುತ್ತವೆ.

# ಸಮಾನತೆಯ ಮೂಲ ಸರಳಪ್ರಜ್ಞೆ



**ಎ**ನಗಿಂತ ಕಿರಿಯರಿಲ್ಲ ಎಂದು ಸಾರಿಯೆ ಬಸವಣ್ಣನವರು ಮೇರು ಪುರುಷರೆನ್ನಿಸಿದರು. ಕಾಯಕದಲ್ಲಿ ಸಣ್ಣದು ದೊಡ್ಡದೆನ್ನುವುದಿಲ್ಲ. ಅಂತೆಯೆ ಎಲ್ಲ ವ್ಯಕ್ತಿಗಳಲ್ಲೂ ಒಂದಲ್ಲೊಂದು ಪ್ರತಿಭೆ, ಸಾಮರ್ಥ್ಯ, ಉನ್ನತ ಗುಣ, ಶಿಸ್ತು ಇದ್ದೇ ಇರುತ್ತದೆ. ಎಂದೇ ಬಸವಣ್ಣನವರು 'ಇವನ್ಯಾರವ ಇವನ್ಯಾರವ ಎಂದೆನಬೇಡ, ಇವ ನಮ್ಮವ ಎಂದೆನಿಸು' ಅನ್ನುವ ದಿವ್ಯ ಸಂದೇಶವಿತ್ತರು. ನಿನ್ನೆ ಘಟಿಸಿದ ಸಂಗತಿಯನ್ನು ನಿಮ್ಮ ಮುಂದಿಡಬಯಸುತ್ತೇನೆ. ಪ್ರಸಿದ್ಧವೆನ್ನಬಹುದಾದ ಹೋಟೆಲಿನಲ್ಲಿ ಹೋಗಿ ಕುಳಿತೆ. ಒಂದು ಕಡು ಕಾಫಿ ಎಂದು ಆರ್ಡರಿಸಿದೆ. ಟೈ ಧಾರಿ ಠೀಕಾಗಿ ಬರೆದುಕೊಂಡು ಹೋಗಿದ್ದ ಬಂತು. ಹದಿನೈದು ನಿಮಿಷಗಳಾದರೂ ಯಾರೂ ನನ್ನತ್ತ ಸುಳಿಯಲಿಲ್ಲ. ದಯವಿಟ್ಟು ಕಾಫಿ ಹೇಳಿದ್ದೇನೆ ಬೇಗ ತನ್ನಿ ಎಂದು ಗೋಗರೆಯುವಂತಾಗಿತ್ತು. ಆದರೆ ನನ್ನ ನಂತರ ಆರ್ಡರಿಸಿದವರಿಗೆಲ್ಲ ಅವರ ಅಪೇಕ್ಷೆಯಂತೆ ತಿಂಡಿ ತಿನಿಸು, ಪಾನೀಯಗಳು ಸರಬರಾಜಾಗಿಬಿಟ್ಟಿದ್ದವು. ಏನು ನಿಜವಾಗಿ ನಡೆದಿದೆ ನನಗರ್ಥವಾಗಿತ್ತು. ನನ್ನ ವಹಿವಾಟು ಕೇವಲ ಕಾಫಿ, ಉಳಿದವರದೋ ಬಗೆಬಗೆಯ ತಿನಿಸು, ಕೋಲ, ಐಸ್‌ಕ್ರೀಂ, ಫ್ರೂಟ್ ಸಲಾಡ್ ಏನೆಲ್ಲ ! ಸರಬರಾಜು ಮಾಡುವವರಿಗೆ ನನ್ನ ಮೇಲೆ ಉಪೇಕ್ಷೆ, ತಾತ್ಸಾರ, ಅವರತ್ತ ವಿಶೇಷ ಗಮನ. ಎಷ್ಟಾದರೂ ಅವರು ದೊಡ್ಡ ಗಿರಾಕಿ !

ನಿಮಗೂ ಇಂಥ ಅನುಭವವಾಗಿರಬಹುದು. ಬಸ್ಸುಗಳಲ್ಲಿ ತಾನೆ ಇನ್ನೇನು ? ಪಾಸಿದ್ದವರಿಗೆ ನಿರ್ವಾಹಕನಿಂದ ಒಂದು ಬಗೆಯ ಧೋರಣೆ. ಅದೇ ಕಾಸಿತ್ತು ಟಿಕೆಟ್ಟು ಕೊಂಡವರಿಗೆ ಒಂದು ಬಗೆಯ ಮಮಕಾರ. ಪಾಸು ಹೊಂದಿರುವವರು ಮುಂಚಿತವಾಗಿಯೆ ಹಣ ತೆತ್ತಿರುತ್ತಾರೆಂಬ ತಥ್ಯ ಆತನಿಗೆ ಏಕೆ ಅರ್ಥವಾಗದೊ ಕಾಣೆ. ವಿಪರ್ಯಾಸ ಅಷ್ಟೆ. ನೋವಿನ ವಿಷಯವೊಂದಿದೆ. ಬಸ್ಸು ನಿಲ್ದಾಣಕ್ಕೆ ಪ್ರಯಾಣಿಕರನ್ನು ತುಂಬಿಸಿಕೊಳ್ಳಲು ಬರುತ್ತದೆಯೆನ್ನಿ. ಪಾಸುಳ್ಳವರು ಮೊದಲು ಬಸ್ಸೇರಿದರೆ 'ಸ್ವಲ್ಪ ಇರಿ ಬೇರೆಯವ್ರು ಹತ್ತಲಿ, ಬೋಣಿಯಾಗುವುದು ಬೇಡವೆ ಹೇಳಿ' ಎಂಬ ಸೂಚನೆ ಬರುವುದು ಅಪರೂಪವೇನಲ್ಲ. ಮದುವೆ, ಮುಂಜಿ, ಗೃಹಪ್ರವೇಶ, ಹುಟ್ಟಿದ ಹಬ್ಬ ಯಾವುದೇ ಸಂದರ್ಭಗಳನ್ನೇ ತೆಗೆದುಕೊಳ್ಳಿ. ಅಲ್ಲೂ ತಾರತಮ್ಯದ ತಾಂಡವವೆ. ಕಾರುಗಳಲ್ಲಿ ಬಂದವರಿಗೆ ಒಂದು ರೀತಿಯ ಗೌರವಾದರ. ತಾವು ಇಂತಿಂಥ ದರ್ಜೆಯ ಕಾರುಳ್ಳವರೆಂದು ತೋರ್ಪಡಿಸಿಕೊಳ್ಳಲೆಂದೇ ಸಮಾರಂಭಕ್ಕೆ ಬರುವವರುಂಟಲ್ಲವೆ ? ಉಡುಗೊರೆ ಕೈಲಿದ್ದರೆ ಆತಿಥೇಯರ ಕಣ್ಣರಳುತ್ತದೆ. ಆಹ್ವಾನಿತರಿಗೆ ರಾಜೋಪಚಾರ ಸಂದಿರುತ್ತದೆ. ಉಡುಗೊರೆ ಒಯ್ಯದೆ ಹೋಗುವವರು ತಮೋಯೋಗ್ಯರೆಂದೇ ಗಣನೆ !

ಆಳಾಗಬಲ್ಲವರು ಅರಸರಾಗಬಲ್ಲರೆಂಬ ದಿಟ ನಮಗೇಕೆ ಅರ್ಥವಾಗುವುದಿಲ್ಲ ? ಅಸಲಿಗೆ ಬದುಕಿನ ವಿವಿಧ ರಂಗಗಳಲ್ಲಿ ಯಶಸ್ವಿಯಾದವರು ಸೋಲುಗಳ ಸರಣಿಯನ್ನೇ ಕಂಡುಂಡಿರುತ್ತಾರೆ. ಸೋಲೆಂಬ ಬೀಜ ಬಿತ್ತಿಯೆ ಜಯವೆಂಬ ಫಲ ಪಡೆಯಬೇಕಾದುದು. ಹಾಗಾಗಿ ಪ್ರಯತ್ನಶೀಲರಾದವರಿಗೆ ವಿಜಯಿಗಳಿಗಿಂತ ಹೆಚ್ಚಿನ ಮಾನ್ಯತೆ, ಆದರಗಳು ಸಲ್ಲಬೇಕು. ಈ ದಿಸೆಯಲ್ಲಿ ಅಮೆರಿಕಾದ ಮೊತ್ತಮೊದಲ ಅಧ್ಯಕ್ಷರಾದ ಜಾರ್ಜ್ ವಾಷಿಂಗ್‌ಟನ್ ಕುರಿತ ಸಂಗತಿಯೊಂದು ನೆನಪಾಗುತ್ತದೆ. ವಾಷಿಂಗ್‌ಟನ್ ಕುದುರೆಯೇರಿ ಹೊರಟಿದ್ದನಂತೆ. ಎದುರಾದ ಒಬ್ಬ ಆತನಿಗೆ ನಮಸ್ಕರಿಸಿದ. ವಾಷಿಂಗ್‌ಟನ್ ಪ್ರತಿಯಾಗಿ ಆತನಿಗೆ ವಂದಿಸಿದ. ಆತನ ಸಹಾಯಕ ''ಅಧ್ಯಕ್ಷ ಮಹೋದಯರೆ, ಇದೇನಿದು ? ಅವನು ಕೇವಲ ಒಬ್ಬ ಶ್ರೀಸಾಮಾನ್ಯ ಮಾತ್ರ. ನೀವು ಅವನಿಗೆ ನಮಿಸುವುದೆಂದರೆ ಏನು ?'' ಅಂದ. ಅದಕ್ಕೆ ವಾಷಿಂಗ್‌ಟನ್ ''ಮಿತ್ರ, ಒಂದು ವೇಳೆ ನಾನವನಿಗೆ ವಂದಿಸಲಿಲ್ಲವೆಂದೆ ತಿಳಿ, ಆಗ ಆತ ಇದೇನು ವಿಪರ್ಯಾಸ ? ಅಧ್ಯಕ್ಷರಿಗೆ ವಂದಿಸಿದವರಿಗೆ ಕೃತಜ್ಞತೆ ಅರ್ಪಿಸುವ ಸಂಸ್ಕಾರವೂ ಬೇಡವೆ ? ಎಂದುಕೊಳ್ಳುತ್ತಿದ್ದನಲ್ಲ !'' ಅಂದನಂತೆ. ಸಂಸ್ಕಾರವೆಂದರೆ ಇದೆ ಅಲ್ಲವೆ ? ಸಮಾನತೆಯ ಮೂಲ ಸರಳ ಪ್ರಜ್ಞೆ.

ಬಿಂಡಿಗನವಿಲೆ ಭಗವಾನ್
ಗಣಿತಶಾಸ್ತ್ರ ಪ್ರಾಧ್ಯಾಪಕರು, ಶ್ರೀ ಕೊಂಗಾಡಿಯಪ್ಪ ಪಿ.ಯು. ಕಾಲೇಜ್, ದೊಡ್ಡಬಳ್ಳಾಪುರ - ೫೬೧ ೨೦೩

ಪ್ರಮುಖವಾಗಿ ಸಂವಿಧಾನದ ೩ ಅಂಗಗಳು ಶಾಸಕಾಂಗ, ಕಾರ್ಯಾಂಗ ಹಾಗೂ ನ್ಯಾಯಾಂಗಗಳೆಂದು ವಿಭಜಿಸಲ್ಪಟ್ಟಿದ್ದರೂ ಇವು ಆಂತರಿಕವಾಗಿ ತಮ್ಮ ಕ್ಷೇತ್ರಗಳಲ್ಲಿ ಸ್ವತಂತ್ರವಾಗಿ ಕಾರ್ಯನಿರ್ವಹಿಸುವ ಹಕ್ಕನ್ನು ಪಡೆದಿವೆ. ರಾಜಕೀಯ ಶಕ್ತಿಗಳು ಸ್ವಾತಂತ್ರ್ಯ ದೊರೆತ ಸಂದರ್ಭದಲ್ಲಿ ಮೀಸಲಾತಿಯ ಉಪಕ್ರಮವನ್ನು ಜಾರಿಗೊಳಿಸಲಿಚ್ಛಿಸಿ ಪ್ರಜಾಪ್ರಭುತ್ವದ ಉನ್ನತ ಮೌಲ್ಯಗಳ ಸಂರಕ್ಷಣೆಯ ನಿಟ್ಟಿನಲ್ಲಿ ಲೋಕಸಭೆಯು ಅನುಮೋದನೆ ನೀಡಿ ಶಾಸನ ರಚಿಸಿದ್ದು ಔಚಿತ್ಯಪೂರ್ಣ ಕಾರ್ಯಕ್ರಮವೇ ಆಯ್ತು. ಇದು ನಿಸ್ಸಂದೇಹದ ಮಾತೇ.

ಆದರೆ ರಾಜಕೀಯ ಶಕ್ತಿ ವ್ಯಕ್ತಿಗಳು ಸಾರ್ವಜನಿಕ ಮತದಾನದಲ್ಲಿ ಓಟುಗಳಿಸಲು ಹೂಡಿದ ತಂತ್ರಗಳಲ್ಲಿ ಈ 'ಮೀಸಲಾತಿ'ಯನ್ನು ಪ್ರಮುಖ ಪ್ರಣಾಳಿಕೆ ಮಾಡಿಕೊಂಡಿದ್ದು ನಮ್ಮ ದೇಶದ ದುರಂತ ಘಟನೆ ಎಂದೇ ಅರ್ಥೈಸಬೇಕಾಗುತ್ತದೆ. ಏಕೆಂದರೆ ಈ ಮೀಸಲಾತಿಯ ಅನುಷ್ಠಾನದಿಂದ ಜಾತಿ, ಮತ ಪಂಗಡಗಳ ಮಧ್ಯೆ ಪರಸ್ಪರ ಮೇಲು-ಕೀಳು ಭಾವನೆಯ ವಿಷಬೀಜ ಬಿತ್ತಲು ಸಹಾಯವಾಯಿತು! ಮುಸ್ಲಿಂ-ಕ್ರಿಶ್ಚಿಯನ್-ಹಿಂದೂ-ಜೈನ-ಬೌದ್ಧ-ಸಿಖ್-ಪಾರಸಿ, ಆಂಗ್ಲೋ-ಇಂಡಿಯನ್ ಇತ್ಯಾದಿ ಮತಧರ್ಮಗಳ ಜನರು ವಾಸಿಸುವ ದೇಶದಲ್ಲಿ ಈ ಮೀಸಲಾತಿಯ ಸೌಲಭ್ಯ ಪಡೆಯಲು ಎಲ್ಲರೂ ತಿಕ್ಕಾಟ ನಡೆಸಿದರು. ಬಹುಸಂಖ್ಯಾತ ಜನರ ಪ್ರಮಾಣ ಎಷ್ಟು? ಅಲ್ಪಸಂಖ್ಯಾತ ಜನರ ಪ್ರಮಾಣ ಎಷ್ಟು? ಈ ಪ್ರಮಾಣ ಮೀರಿದಾಗ ಅನುಸರಿಸಬೇಕಾದ ವಿಧಿ-ವಿಧಾನಗಳ ಬಗ್ಗೆ ಇದುವರೆಗೂ ಖಚಿತವಾದ ಅಂಕಿ-ಅಂಶಗಳಾಗಲಿ, ಕಾನೂನಾಗಲಿ ರಚಿತಗೊಂಡಿಲ್ಲ ಎಂಬುದೇ ಮತ್ತೊಂದು ವಿಪರ್ಯಾಸದ ಸಂಗತಿಯಾಗಿದೆ.

ಈ ಮೀಸಲಾತಿಯು ಪ್ರಥಮವಾಗಿ ಅಷ್ಟೇಕೆ ಅಂತಿಮವಾಗಿ ಸಹ 'ಜಾತಿ'ಯ ಆಧಾರದ ಮೇಲೆಯೇ ನಿರ್ಣಯಿಸುವುದಾದ್ದರಿಂದ ಭಾರತೀಯರಲ್ಲಿ ಕೋಮುದ್ವೇಷ ಬೆಳೆಯಲಿಕ್ಕೂ ಸಹಕಾರಿ ಆಯ್ತು. ಯಾವುದೇ ಒಂದು ಪ್ರಜಾಪ್ರಭುತ್ವ ರಾಷ್ಟ್ರದಲ್ಲಿ ಸಮಾನತೆ, ಸ್ವಾತಂತ್ರ್ಯ, ನ್ಯಾಯ, ಸಾರ್ವಭೌಮತ್ವದಂತಹ ಉನ್ನತ ಮೌಲ್ಯಗಳ ಸಂರಕ್ಷಣೆ ಮತ್ತು ಪ್ರತಿಪಾದನೆಯ ಪ್ರಶ್ನೆ ಬಂದಾಗ 'ಮೀಸಲಾತಿ'ಯ ಉಪಕ್ರಮ ಮೊದಲು ಹೆಡೆ ಎತ್ತಿ ನಿಲ್ಲುತ್ತದೆ.

ಮೀಸಲಾತಿ ಎಂಬ ಸಾಂವಿಧಾನಿಕ ಸೌಲಭ್ಯವನ್ನು ಅಲ್ಪಸಂಖ್ಯಾತರಿಗೆ, ಪರಿಶಿಷ್ಟ ವರ್ಗ-ಪಂಗಡ, ದೀನ ದಲಿತರಿಗೆ ಅಂಬೇಡ್ಕರ ಸಮಿತಿಯು ನೀಡಿದ್ದು ತಪ್ಪಲ್ಲ. ಆದರೆ ಅದೇ ಸೌಲಭ್ಯವನ್ನು ರಾಜಕಾರಣಿಗಳು ಜಾತಿ ಭೇದ ಸೃಷ್ಟಿಸಿ ತಮ್ಮ ಅಧಿಕಾರದ ಸ್ವಾರ್ಥಕ್ಕಾಗಿ ದುರುಪಯೋಗಪಡಿಸಿಕೊಂಡರು. ತತ್ಪರಿಣಾಮವೆಂದರೆ ಜಾತಿ-ಜಾತಿ ಮಧ್ಯೆ ವೈಮನಸ್ಯದ ಸೃಷ್ಟಿ. ಆದರಿಂದಾಗಿ ಪದೇ ಪದೇ ದೇಶದ ನಾನಾ ಭಾಗಗಳಲ್ಲಿ ಸಂಭವಿಸಿದ/ಸುತ್ತಿರುವ ಕೋಮುಗಲಭೆ, ಹಿಂಸಾಚಾರ, ದೊಂಬಿ, ಅಗ್ನಿದುರಂತ, ಕೊಲೆ, ಹಿಂಸೆ, ಆಸ್ತಿಪಾಸ್ತಿ ಹಾನಿ, ಮುಷ್ಕರ, ಪ್ರತಿಭಟನೆ ಇತ್ಯಾದಿ ಇತ್ಯಾದಿಗಳ ದುರಂತ ಸರಮಾಲೆ! ಅದರ ನಂತರ ಕೋಮು ಸಾಮರಸ್ಯಕ್ಕಾಗಿ ಊರ ಹಿರಿಯರು, ಮಠಾಧೀಶರು, ಶಾಂತಿಪ್ರಿಯರೆಲ್ಲ ಸೇರಿ ಭರ್ಜರಿ ಸಭೆ ನಡೆಸಿ ಜನರಲ್ಲಿ 'ಶಾಂತಿ' ಸ್ಥಾಪಿಸುವಂತೆ ಕೋರಿ ಮೃದು ಮಾತಿನ ಮನವಿಗಳ ಮಹಾಪೂರ!

ಮೀಸಲಾತಿ ಎಂಬ ರಾಜಕೀಯ ಸೌಲಭ್ಯ, ಸಾಮಾಜಿಕ ಕ್ರಾಂತಿಯ ಹೆಸರಲ್ಲಿ ಸಮಾನತೆಯ ಸ್ಲೋಗನ್ನುಗಳಿಂದ ಕೆಳವರ್ಗದ ಜನರಿಗೆ ನೀಡಿದ್ದ ಈ ಸೌಲಭ್ಯವನ್ನು ಎಷ್ಟು ಕಾಲದವರೆಗೆ ನೀಡಬೇಕು ?– ಎಂಬುದು ಪ್ರಶ್ನೆ. ೧೯೪೭ರಲ್ಲಿ ಸಿಕ್ಕ ಸ್ವಾತಂತ್ರ್ಯದ ಹೊತ್ತಲ್ಲೇ ಜನಜಾಗೃತಿಯ ದುಂದುಭಿ; ೧೯೫೦ರಲ್ಲಿ ಪ್ರಜಾಪ್ರಭುತ್ವ ಸಾರ್ವಭೌಮದ ಪ್ರಜಾತಂತ್ರ ವ್ಯವಸ್ಥೆಯ ಸ್ವತಂತ್ರ ಸರ್ಕಾರ ಅಸ್ತಿತ್ವಕ್ಕೆ ಬಂದಾಗಲೇ ಈ ಸೌಲಭ್ಯ ಜಾರಿಗೊಳಿಸಿದ ನಂತರ ೧೦ ವರ್ಷ ಮಾತ್ರ ನೀಡಬೇಕಿತ್ತು. ಆ ಹತ್ತು ವರ್ಷಗಳಲ್ಲೇ ಅಶಿಕ್ಷಿತರು, ಹಿಂದುಳಿದ ಜನ, ಪರಿಶಿಷ್ಟ ಪಂಗಡ, ಬುಡಕಟ್ಟು, ಜನರಿಗೆ ದೇಶದ ಯಾವುದೇ ಶಿಕ್ಷಣ ಸಂಸ್ಥೆಯಲ್ಲಿ 'ಉಚಿತ ಶಿಕ್ಷಣ'ದ ವ್ಯವಸ್ಥೆಯನ್ನೂ ಮೀಸಲಾತಿ ಸೌಲಭ್ಯದ ಜೊತೆಗೇ ಜಾರಿಗೊಳಿಸಬೇಕಿತ್ತು. ಹಾಗಾಗಲಿಲ್ಲ. ಪ್ರತೀ ಬಾರಿ ಸಾರ್ವತ್ರಿಕ ಚುನಾವಣೆಗಳಲ್ಲೂ ಮೀಸಲಾತಿ ಸೌಲಭ್ಯ ಪುನಃ ಪುನಃ ಮುಂದುವರೆಸಿದ್ದೂ ಆಯ್ತು. ಆಗೆಲ್ಲ ತತ್ವ ಪ್ರಣಾಳಿಕೆಗಳಲ್ಲಿ ರಾಜಕಾರಣಿಗಳಿಗೆ ಈ 'ಮೀಸಲಾತಿ'ಯೊಂದೇ ಬ್ರಹ್ಮಾಸ್ತ್ರ ಆಯ್ತು. ಓಟಿನ ಗಳಿಕೆಗೆ ಸುಲಭ ತಂತ್ರ ಸಿಕ್ಕಿತ್ತು.

ವಾಸ್ತವದಲ್ಲಿ ಒಂದು ನೌಕರಿ ಒಬ್ಬನಿಗೆ/ಳಿಗೆ ನೀಡಬೇಕಾದರೆ ಆ ನೌಕರಿಯನ್ನು ಜವಾಬ್ದಾರಿಯಿಂದ, ನಿಷ್ಠೆ, ಪ್ರಾಮಾಣಿಕ ಬುದ್ಧಿಯಿಂದ, ನಿಸ್ಪೃಹತೆಯಲ್ಲಿ ನಿಭಾಯಿಸಲು ಯಾವುದೇ ಕ್ಷೇತ್ರದಲ್ಲಿ ಅದು ಸರ್ಕಾರಿ-ಅರೆ ಸರ್ಕಾರಿ-ಖಾಸಗಿ ರಂಗಗಳಲ್ಲಿರಲಿ, ಆ ನೌಕರನಿಗೆ ಮೂಲಭೂತವಾಗಿ ಬೇಕಾದದ್ದು 'ಅರ್ಹತೆ' – ಇದು ನೌಕರಿಯ ಗುಣ ಮಟ್ಟಕ್ಕೆ ಅನುಗುಣವಾಗಿ ವ್ಯತ್ಯಾಸವಾಗುತ್ತ ಹೋಗುವುದಾದರೂ ಈ ಉದ್ಯೋಗಕ್ಕಾಗಿನ 'ಅರ್ಹತೆ'ಯ ಮಾನದಂಡವನ್ನು ಹೀಗೆ ಸ್ಥೂಲವಾಗಿ ವಿಶ್ಲೇಷಿಸಬಹುದು:

೧. ವಿದ್ಯಾರ್ಹತೆ (ಅಂಕಪಟ್ಟಿ, ಶಿಫಾರಸು ಪತ್ರ - ಆಧಾರ)
೨. ನೌಕರಿಯ ಬಗೆಗಿನ ಪೂರ್ವಾನುಭವ
೩. ಭಾಷಾ ಜ್ಞಾನ
೪. ಆರ್ಥಿಕ ಸಂಬಂಧಿತ ಪೂರ್ಣ ಅರಿವು
೫. ಉದ್ಯೋಗಕ್ಕೆ ಅಗತ್ಯವಾದ ಜವಾಬ್ದಾರಿ
೬. ಪರೀಕ್ಷೆ-ಮೌಖಿಕ ಹಾಗೂ ಲಿಖಿತ
೭. ನೌಕರಿಯ ಬಗೆಗಿನ ಬುದ್ಧಿ ಕೌಶಲ್ಯ
೮. ತಂತ್ರಜ್ಞಾನ ಮತ್ತು ಆಡಳಿತ ಸಾಮರ್ಥ್ಯ
೯. ಮೇಲ್ವಿಚಾರಣೆ
೧೦. ಉತ್ಪಾದನೆ-ಶೇಖರಣೆ-ರಫ್ತು-ಆಮದಿನ ಪೂರ್ಣಜ್ಞಾನ
೧೧. ಸ್ವಭಾವ, ನಡತೆ ಮತ್ತು ಚಟಗಳು
೧೨. ಪರಿಸರ ಜ್ಞಾನ.

ಹೀಗೆ ಸಾಕಷ್ಟು ಅರ್ಹತೆ ಇದ್ದಾಗಲೇ ವ್ಯಕ್ತಿ ತನ್ನ ಕೆಲಸದಲ್ಲಿ ಚಾಣಾಕ್ಷತನ, ಸಮಯಪ್ರಜ್ಞೆ, ಜವಾಬ್ದಾರಿಯ ಹೊಣೆಗಾರಿಕೆಯಿಂದ ಕಾನೂನಿನ ಚೌಕಟ್ಟಿನಲ್ಲಿ ಕರ್ತವ್ಯ ನಿಭಾಯಿಸುತ್ತಾನೆ. ಅರ್ಹತೆ ಇಲ್ಲದ ವ್ಯಕ್ತಿಗೆ ಜವಾಬ್ದಾರಿ ಕೆಲಸ ಕೊಟ್ಟಾಗ ಅದು ರಾಡಿ ನೀರಲ್ಲಿ ತಿಳಿನೀರು ಹುಡುಕಿದಷ್ಟೇ ವ್ಯರ್ಥ ಪರಿಶ್ರಮ. ಪರಿಣಾಮ ದೊಡ್ಡ ಸೊನ್ನೆ! ನಷ್ಟ ಕಟ್ಟಿಟ್ಟಬುತ್ತಿ! 'ಅರ್ಹತೆ' ಎಂಬುದು ವ್ಯಕ್ತಿ ತಾನಾಗಿ ಪಡೆದುಕೊಳ್ಳಬೇಕಾದ ಅಗತ್ಯ ಗುಣಮಟ್ಟದ ಶಿಕ್ಷಣ. ಅದಕ್ಕೆ ಪರಿಸರವೂ – ಕುಟುಂಬ – ಸರ್ಕಾರ ಮತ್ತು ಸಮಾಜವು ಸಮಭಾಗಿತ್ವ ಹೊಂದಿರುತ್ತದೆ.

ಈ ದೇಶದಲ್ಲಿ ಮೀಸಲಾತಿ ಸೌಲಭ್ಯ ಪಡೆಯಲು ಲಕ್ಷಗಟ್ಟಲೆ ಜನರಿರುವ ಅನೇಕ ಜಾತಿ ಪಂಗಡಗಳು ತಾವೂ ಅಲ್ಪಸಂಖ್ಯಾತರೆಂಬ ಹಣೆಪಟ್ಟಿ ಅಂಟಿಸಿಕೊಂಡು ಸರ್ಕಾರ ನೀಡುವ ಸೌಲಭ್ಯಕ್ಕಾಗಿ ಹೋರಾಟ ನಡೆಸಿ ಸಫಲರಾಗಿರುವ ದೃಶ್ಯಗಳೂ ನಮ್ಮ ಕಣ್ಣೆದುರಿಗಿವೆ. ವಿಶೇಷತಃ ಶಿಕ್ಷಣ ಸಂಸ್ಥೆಗಳಲ್ಲಿ ಇಂದು ಶಿಕ್ಷಣ ಸೌಲಭ್ಯವೂ ಒಂದು ಹಣದ ಉತ್ಪಾದನಾ ಕ್ಷೇತ್ರವಾಗಿ ಮಾರ್ಪಟ್ಟಿರುವುದು ಖೇದಕರ ಹಾಗೂ ಕ್ಲೇಷೆಯ ವಿಚಾರವೇ ಆಗಿದೆ. ಪರಿಹಾರೋಪಾಯವೆಂದರೆ ಸರ್ಕಾರ ನಡೆಸುವ ನೌಕರಿ ಆಯ್ಕೆಯ ಪರೀಕ್ಷಾ ಪದ್ಧತಿ, ನೇಮಕ ವಿಧಾನ, ಅರ್ಹತಾ ಪಟ್ಟಿ ಇವುಗಳಲ್ಲಿರುವ ಲೋಪದೋಷ ಸರಿಪಡಿಸಿ ಆಯ್ಕೆ ಕ್ರಮವನ್ನೇ ಬದಲಿಸುವುದು ! ಜ್ಞಾನಾನುಭವ, ವಿದ್ಯಾಭ್ಯಾಸ, ಆದಾಯ, ವಯುಸ್ಸು – ಈ ನಾಲ್ಕು ವಿಷಯ ಮೊತ್ತವನ್ನೇ ನೌಕರಿಯ ಅರ್ಹತೆಗೆ ಆಧಾರವಾಗಿಟ್ಟುಕೊಂಡು ಹುದ್ದೆಗೆ ನೇಮಕ ಮಾಡುವ ವಿಧಾನ ಜಾರಿಗೆ ತರಲಿ. ಸರ್ಕಾರವು ಎಲ್ಲ ಕ್ಷೇತ್ರಗಳಲ್ಲೂ ಜಾತಿ ಆಧಾರದಲ್ಲಿನ ಮೀಸಲಾತಿ ಕ್ರಮವನ್ನೇ ರದ್ದು ಮಾಡಬೇಕು.

ಬದಲಿಗೆ ಪರಿಶಿಷ್ಟ ವರ್ಗ-ಪಂಗಡ, ಕೆಳಸ್ತರದ ಜನರು, ಅನುಸೂಚಿತ ವರ್ಗದವರಿಗಾಗಿಯೇ ಪ್ರತ್ಯೇಕ ತರಬೇತಿ ನೀಡಿ ಅರ್ಹತೆ ಹಾಗೂ ಬುದ್ಧಿ ಕೌಶಲ್ಯದ ಗುಣಮಟ್ಟ ಹೆಚ್ಚಿಸಿಕೊಳ್ಳಲು ಆಯಾ ಇಲಾಖೆಯಲ್ಲೇ ವ್ಯವಸ್ಥೆ ಏರ್ಪಡಿಸಬೇಕು. ಆ ನಂತರ ಮರು ಪರೀಕ್ಷೆಗೆ ಆ ಅಭ್ಯರ್ಥಿ ಹಾಜರಾಗಬೇಕು, ತೇರ್ಗಡೆ ಹೊಂದಬೇಕು. ಆಗಲೇ ನೌಕರಿಯಲ್ಲಿ ಕಾಯಂ ನೇಮಕಾತಿ, ಭಡ್ತಿ ಇತ್ಯಾದಿ ವಿಶೇಷ ಸವಲತ್ತು ಲಭಿಸುವಂತಾಗಬೇಕು.

ಮತ್ತೊಂದು ದಿಕ್ಕಿನಲ್ಲಿ ಇದೇ ಮೀಸಲಾತಿ ಪ್ರಶ್ನೆ ವಿವೇಚಿಸಿದಲ್ಲಿ, ಮೇಲು ವರ್ಗ ಎಂದು ಹೆಸರಿಸಿದ ಜನರಲ್ಲಿ ಅಲ್ಪಾದಾಯದವರಿಲ್ಲವೆ ? ಎಲ್ಲರೂ ಸುಶಿಕ್ಷಿತರೇ ? ಅವರಿಗೆ ನೌಕರಿಯ ಲಭ್ಯತೆಯಲ್ಲಿ ಮೇಲಧಿಕಾರಿಗಳು, ರಾಜಕಾರಣಿಗಳು ನಡೆಸುವ ಭ್ರಷ್ಟಾಚಾರದ ಪ್ರಮಾಣ ಎಷ್ಟು? ಅವರಲ್ಲೂ ಬಡವರು ಕಷ್ಟ-ನಷ್ಟ ಜೀವಿಗಳು ಇಲ್ಲವೆ ? ತಾವು ಸ್ವಾಭಿಮಾನಿಗಳಾದ್ದರಿಂದ, ನಿಸ್ಪೃಹತೆಗೆ ನಿಷ್ಠಾವಂತಿಕೆಗೆ ಕಟ್ಟುಬಿದ್ದೇ ದುಡಿದು ಮಣಿಯುವ ಈ ಮೇಲ್ದರ್ಜೆ ಜನರ ಬಗೆಗೆ ಸರ್ಕಾರ ಯಾವ ಸವಲತ್ತು ಕೊಟ್ಟಿದೆ ? ಸರ್ಕಾರಿ ಹುದ್ದೆ ಸಾಯಲಿ, ಉನ್ನತ ಶಿಕ್ಷಣದಲ್ಲಿ ರಿಯಾಯ್ತಿ, ಪ್ರತಿಭೆಗೆ ಪುರಸ್ಕಾರ, ಸಾಲ ಸೌಲಭ್ಯ ಏನಾದರೂ ಸಿಗುವುದಿದೆಯೆ ?

ತಾನು ಹಿಡಿಯುವ ವೃತ್ತಿ-ಚಿತ್ತವೃತ್ತಿಗೆ, ಸ್ವಭಾವಜನ್ಯ ನಡವಳಿಕೆಗೆ ಅನುಗುಣವಾಗಿ ವ್ಯಕ್ತಿ ತನ್ನ ಮನೋಧರ್ಮಕ್ಕೆ, ಮಾತು, ಭಾಷೆ, ನಡವಳಿಕೆ, ಆಚರಣೆ, ನಂಬಿಕೆ, ಧರ್ಮಶ್ರದ್ಧೆ, ವರ್ಣಪ್ರಿಯತೆ, ರೂಪ, ಧೀಃಶಕ್ತಿ, ಬುದ್ಧಿ ಕೌಶಲ್ಯಗಳನ್ನು ಮೆಚ್ಚುವವರ ಜೊತೆಯಲ್ಲಿ ಮಾತ್ರ ತನ್ನ ಬದುಕು ನಡೆಸುವ ಇಚ್ಛಾಶಕ್ತಿ ಪ್ರಕಟಿಸುತ್ತಾನೆ. ಇದು ಅನಿವಾರ್ಯ ಕೂಡ. ಇದೇ ರೂಢಿಯಲ್ಲಿ ಬಂದಾಗ 'ಜಾತಿ' – ಎಂಬ ಪ್ರತ್ಯೇಕ ಗುಂಪಿನ ಜನರೇ 'ಕುಟುಂಬ' ಹೆಸರಲ್ಲಿ ವಾಸಿಸಲಾರಂಭಿಸಿದರು. ಉದ್ಯೋಗವೇ ಆದಾಯಕ್ಕೂ, ಆದಾಯವೇ ಜೀವನ ನಿರ್ವಹಣೆಗೂ, ಸುಖಬಾಳ್ವೆಗೂ, ಪ್ರತಿಷ್ಠೆ, ಸಾಮಾಜಿಕ ಗೌರವ ಪ್ರೀತಿಗೂ ಮೂಲಾಧಾರವಾಗಿದ್ದು, ಆಯಾ ಜಾತಿಯಲ್ಲೇ ಅಂತರ ಅನಿವಾರ್ಯವಾಯ್ತು. ಈ ಅಂತರವೇ ವ್ಯಕ್ತಿ-ಕುಟುಂಬ-ಸಂಘಜೀವಿಯಾಗಿ ವಾಸ್ತವದಲ್ಲಿ ಗುರುತಿಸಲ್ಪಟ್ಟಿತು, ಆಧರಿಸಲ್ಪಟ್ಟಿತು; ವ್ಯಾಪಾರ, ಕೃಷಿ ಆಡಳಿತ, ಸೇವೆ ಸಾಮಾಜಿಕರ ಮುಖ್ಯ ಕಸುಬುಗಳಾದವು.

ಸುದ್ದಿಚಿತ್ರ



ಮಂಗಳೂರಿನಲ್ಲಿ ೨೯-೧೦-೦೭ರಂದು ಪ್ರಾರಂಭವಾದ ನವಕರ್ನಾಟಕ ಪುಸ್ತಕ ಮೇಳವನ್ನು ಡಾ|| ಬಿ. ಸುರೇಂದ್ರ ರಾವ್ ಉದ್ಘಾಟಿಸಿದರು. ಹಿರಿಯ ಸಂಗಾತಿ ಬಿ. ವಿ. ಕಕ್ಕಿಲ್ಲಾಯರ ಅಧ್ಯಕ್ಷತೆಯಲ್ಲಿ ನಡೆದ ಸಮಾರಂಭದಲ್ಲಿ ಡಾ|| ಅಮೃತ ಸೋಮೇಶ್ವರ ಇತ್ತೀಚಿನ ನಾಲ್ಕು ಪುಸ್ತಕಗಳನ್ನು ಅನಾವರಣಗೊಳಿಸಿದರು. ಚಿತ್ರದಲ್ಲಿ (ಎಡದಿಂದ) ಶ್ರೀ ಹರೀಶ್‌ಕುಮಾರ್, ಬಿ. ವಿ. ಕಕ್ಕಿಲ್ಲಾಯ, ಬಿ. ಸುರೇಂದ್ರ ರಾವ್, ಡಾ|| ಅಮೃತ ಸೋಮೇಶ್ವರ ಮತ್ತು ಡಾ|| ವಾಮನ ನಂದಾವರ.

'ಜಾತಿ'ಯೆಂಬ ಪ್ರತ್ಯೇಕ ಅಸ್ತಿತ್ವ ವ್ಯವಸ್ಥೆ ಭಾರತದಲ್ಲಿ ಇಂದು ಅವಶ್ಯವೆ ? ಅನಗತ್ಯ ಎಂದು ವಾದಿಸುವವರಿದ್ದಾರೆ. ದೇವರು-ಧರ್ಮ-ಭಾಷೆ-ಸಂಸ್ಕೃತಿ-ಉದ್ಯೋಗ – ಇವು ಜಾತಿಯ ಪ್ರಮುಖ ವಿಷಯವಸ್ತು ಆಗಿದ್ದಾಗ ಏಕತ್ವ ಸಾಧಿಸಲು ಸಾಧ್ಯವೇ ? ಎಷ್ಟೇ ಸಾಮಾಜಿಕ ಪರಿವರ್ತನೆ ನಾಗರಿಕತೆ – ವಿಜ್ಞಾನ- ಧರ್ಮ- ಸಂಸ್ಕೃತಿಯು ಹೊಂದಿದ್ದಾಗಿದ್ದರೂ 'ಜಾತಿ' ಎಂಬ ವ್ಯವಸ್ಥೆ ಭಾರತದಲ್ಲಿ ಶಾಶ್ವತವಾಗಿ ನಿಲ್ಲುತ್ತದೆಂಬುದು ಪರಮಸತ್ಯ !

ಜಾತಿಯ ಪ್ರತ್ಯೇಕತೆ ಸಮರಸ ಜೀವನಕ್ಕೆ ಮಾರಕವಾಗದಂತೆ ಐಕ್ಯತಾ ಭಾವ, ದೂರ ದೃಷ್ಟಿ, ದೇಶ ಪ್ರೇಮ, ಸೇವಾಮನೋಭಾವದಿಂದ ಉತ್ಥಾನ ದೃಷ್ಟಿಯಿಂದ ಕೂಡಿರಬೇಕು. ಎಂದಾಗಲೇ ಆತನ ವ್ಯಕ್ತಿತ್ವದ ವರ್ಧನೆಗೂ ಧಾತುಪಾಠವಾಗುತ್ತದೆ.

ಆಯಾ ಜಾತಿಯ ಜನಸಂಖ್ಯೆ ಆಧಾರದ ಮೇಲೆ ಈ ಮೀಸಲಾತಿಯ ಉಪಕ್ರಮವನ್ನು ಜಾರಿಗೊಳಿಸಿದೆ. ಈಗ ಕರ್ನಾಟಕ ಸರ್ಕಾರವು ಶಿಕ್ಷಣ ಕ್ಷೇತ್ರದಲ್ಲಿ ಶೇಕಡ ೫೦ನ್ನು ಮೀಸಲಾತಿಯಲ್ಲಿ ಕಾಯ್ದಿರಿಸಿದೆ. ಸಾಮಾನ್ಯ ಶಿಕ್ಷಣ ಹೇಗೇ ಇರಲಿ, ಉನ್ನತ ಶಿಕ್ಷಣಕ್ಕೆ ಪ್ರವೇಶದ ಅವಕಾಶವು ಅಂಕಗಳಿಕೆಯ ಗುಣಮಟ್ಟದ ಆಧಾರದ ಮೇಲೆ ಆಯ್ಕೆಗೊಳಿಸದಿದ್ದಲ್ಲಿ (ಮೆಡಿಕಲ್, ಎಂಜಿನಿಯರಿಂಗ್, ಶಿಕ್ಷಣ ಮತ್ತು ತಾಂತ್ರಿಕ) ಕಲಿಕೆಯಲ್ಲಿ ಉನ್ನತ ಸಾಧನೆ ಸಾಧ್ಯವಿಲ್ಲ. ಸಹಜ ಪ್ರತಿಭೆಯಿಂದ ಉತ್ತಮ ಅಂಕ ಗಳಿಸಿದ್ದರೂ ಜಾತಿಪ್ರಶ್ನೆಯಿಂದಾಗಿ ಪ್ರವೇಶ ಸಿಗದಿದ್ದರೆ ವಿದ್ಯಾರ್ಥಿಯ ಪ್ರತಿಭಾ ಸಾಮರ್ಥ್ಯಕ್ಕೆ ಏನು ಬೆಲೆ ಕೊಟ್ಟಂತಾಯ್ತು ? ಉನ್ನತ ವ್ಯಾಸಂಗದಲ್ಲಿ ಬುದ್ಧಿಮತ್ತೆಯು ವಾಸ್ತವದಲ್ಲಿ ಕಲಿಕೆಯ ಮೊತ್ತದಿಂದ ಮಾತ್ರ ನಿರ್ಧಾರಿತಗೊಳ್ಳುತ್ತದೆ. ಮೀಸಲಾತಿಯಿಂದಾಗಿ ಉನ್ನತ ಶಿಕ್ಷಣ ಪಡೆದು ಉನ್ನತ ಹುದ್ದೆ ಅಲಂಕರಿಸಿದವರು ಇದ್ದಾರೆ. ಆದರೂ ವೃತ್ತಿಪರ ಶಿಕ್ಷಣದಲ್ಲಿ (ವೈದ್ಯಕೀಯ-ತಾಂತ್ರಿಕ-ಶಿಕ್ಷಣ) ಮತ್ತು ಉದ್ಯೋಗದಲ್ಲಿ ಖಾಸಗಿ ಸಂಸ್ಥೆಗಳಲ್ಲಿ ಶಿಕ್ಷಣದ ಶ್ರೇಷ್ಠತೆ ಉಳಿದುಕೊಂಡಿದೆ. ಮೀಸಲಾತಿಯ ಆಯ್ಕೆ ಹೊರತಾಗಿ (ಜಾತಿ ಆಧಾರವೇ ಮಾನದಂಡ) ಶೇಕಡ ೫೦ ಅಂಕ ಗಳಿಸಿದ್ದರೂ ಉನ್ನತ ಶಿಕ್ಷಣಕ್ಕೆ ಅವಕಾಶ ಕೊಟ್ಟಾಗ ಇದುವರೆಗೆ ಶ್ರಮಿಸಿದ ಬೇರೆ ವರ್ಗದವರ ಶೈಕ್ಷಣಿಕ ಸಾಧನೆಯ ಶ್ರೇಷ್ಠ ಗುಣಮಟ್ಟ ಕಡೆಗಣಿಸಿದಂತಾಗುತ್ತದೆ ಎಂಬುದೇ ಈಗ ನಡೆಯುತ್ತಿರುವ ಪ್ರತಿಭಟನಾಕಾರರ ಮುಖ್ಯ ಆರೋಪವಾಗಿದೆ. ಉದ್ಯೋಗದಲ್ಲಿ ಬುದ್ಧಿಮತ್ತೆ ಹೆಚ್ಚಿದಷ್ಟೂ ಕ್ರಿಯಾಶೀಲತೆ ಹಾಗೂ ಗುಣಾತ್ಮಕ ಉತ್ಪಾದನೆ ಹೆಚ್ಚಾಗುತ್ತದೆ. ಆದ್ದರಿಂದ ಉನ್ನತ ಶಿಕ್ಷಣಕ್ಕಾಗಿ ಅನುಕಂಪವು (ಮೀಸಲಾತಿ) ಅವರ ಅಭಿವೃದ್ಧಿಗೆ ಎಂದಿಗೂ ಮಾನದಂಡ ಆಗಬಾರದು.

ಉದ್ಯೋಗಕ್ಕಾಗಿ ಅವಶ್ಯವಿರುವ ಅರ್ಹತೆಯ ಮಾನದಂಡ ರಸ್ತೆ ಬದಿ ಮಾರಾಟಕ್ಕಿಡುವ ವಸ್ತುವಲ್ಲ. ಅದರ ಗಳಿಕೆಗಾಗಿ ಪರಿಶ್ರಮಿಸಬೇಕು. ಕಷ್ಟ ಸಹಿಷ್ಣುತೆಯ ಬುದ್ಧಿಯೂ ಇರಬೇಕು. ಅರ್ಹತೆಯೇ ಅಧಿಕಾರ ಸಂಪತ್ತು-ಸುಖ ಸೌಭಾಗ್ಯ ಬಹಳಷ್ಟನ್ನು ಪ್ರಾಪ್ತಿಗೊಳಿಸಿಕೊಡುತ್ತದೆ. ಜಾತಿ ಅಲ್ಲಿ ಕ್ಷುಲ್ಲಕ ವಿಚಾರವಾಗಬೇಕು. ಗುಣ-ದಕ್ಷತೆ-ಮಾನದಂಡವಾಗಬೇಕು. ಜಾತಿಯನ್ನು ಸಾರ್ವತ್ರೀಕರಣ ಮಾಡಲಾದೀತೆ ? ಮೀಸಲಾತಿಯಿಂದ ದೇಶೋದ್ಧಾರ ಎಂದೂ ಸಾಧ್ಯವಿಲ್ಲ– ಸಾಧುವೂ ಅಲ್ಲ !

ಬಿ. ಪಿ. ಶಿವಾನಂದ ರಾವ್
೨೯, ಡಿಫೆನ್ಸ್ ಕಾಲೋನಿ, ಸಹಕಾರನಗರ, ಬೆಂಗಳೂರು - ೫೬೦ ೦೯೨

# ಪಂಪನ ಆದಿಪುರಾಣದಲ್ಲಿ ಶೈಕ್ಷಣಿಕ ಅಂಶಗಳು

ಡಾ|| ಸರಸ್ವತಿ ವಿಜಯಕುಮಾರ್

> ಕಾವ್ಯದುದ್ದಕ್ಕೂ ಬೋಧಪ್ರದವಾದ ಮಾನವೀಯ ಮೌಲ್ಯಗಳು ಪ್ರತಿಪಾದಿತವಾಗಿ ಕಾವ್ಯಧರ್ಮದೊಂದಿಗೆ ಧರ್ಮವನ್ನು ಮೇಳೈಸಿರುವ ಅಂಶ ಆದಿಪುರಾಣದಲ್ಲಿ ಸಹಜವಾಗಿ ಕಂಡು ಬರುತ್ತದೆ. ಶೈಕ್ಷಣಿಕ ಕ್ಷೇತ್ರದಲ್ಲಿ ಇಂದು ವಿಶೇಷವಾಗಿ ಪ್ರತಿಪಾದಿತ ವಾಗುತ್ತಿರುವ ಸಹಬಾಳ್ವೆ, ಅನುಕಂಪ, ಪರೋಪಕಾರ ಮೊದಲಾದ ಆದರ್ಶಯುತ ಜೀವನ ಶೈಲಿಯ ಪ್ರತಿಪಾದನೆಗೆ ಇಲ್ಲಿ ಉದಾಹರಣೆಗಳಿವೆ. ಅಣುವ್ರತಾದಿಗಳ ಪ್ರತಿಪಾದನೆಯು ಕೇವಲ ಪೌರಾಣಿಕ ಅಂಶಗಳಾಗದೆ ಸ್ವ-ಪರ ಹಿತಾಸಕ್ತಿಯ ಕೇಂದ್ರ ಬಿಂದುಗಳಂತೆ ಕಂಡುಬರುತ್ತವೆ. ಆದಿಪುರಾಣ ತನ್ನ ಕಥಾ ನಿರೂಪಣೆಯೊಂದಿಗೆ ಲೌಕಿಕ ಹಾಗೂ ಅಲೌಕಿಕ ವಿದ್ಯೆಗಳನ್ನು ನಿರೂಪಿಸುತ್ತ ಅನೇಕ ಶೈಕ್ಷಣಿಕ ವಿಷಯಗಳನ್ನು ಬಿತ್ತರಿಸುತ್ತದೆ.



**ಪಂ**ಪನ 'ಆದಿಪುರಾಣ' ಕನ್ನಡದ ಆದಿಕಾವ್ಯ. ಕ್ರಿ.ಶ.೯೪೧ರಲ್ಲಿ ರಚಿತವಾದ ಈ ಕಾವ್ಯದ ಆಕರ ಜಿನಸೇನಾಚಾರ್ಯರ (ಕ್ರಿ.ಶ. ೮-೯ನೇ ಶತಮಾನ) ಸಂಸ್ಕೃತ ಪೂರ್ವಪುರಾಣ. ಪರಂಪರೆ ಎಂಬುದು ಪುರಾಣಕಾವ್ಯಗಳ ಜೀವನಾಡಿ; ಮೂಲಸ್ರೋತ. ಜಿನಸೇನಾಚಾರ್ಯರ 'ಪೂರ್ವಪುರಾಣ' ವಾದರೂ ಪರಂಪರೆಯ ಜಾಡನ್ನು ಹಿಡಿದು ಬಂದುದೇ ಆಗಿದೆ. ಅಂತೆಯೇ ಪಂಪನ ಆದಿಪುರಾಣ ಪರಂಪರಾನುಗತವಾಗಿ ಬಂದಿರುವ ಕಥೆಯನ್ನು, ನಂಬಿಕೆ - ಆಶಯ ಗಳನ್ನು ಅನುಸರಿಸಿದೆ. ಪುರುದೇವನೇ ಆದಿಯಾದ ಜಿನಶ್ರೇಷ್ಠರ ಹಾಗೂ ಗಣಧರ ಪರಂಪರೆಯಿಂದ ಅನುಕ್ರಮ ವಾಗಿ ಪ್ರಸಿದ್ಧರಾದ ವೀರಸೇನಾಚಾರ್ಯ ಜಿನಸೇನಾಚಾರ್ಯರವರೆಗೂ ಹರಿದುಬಂದಿರುವ ಕಥೆ ಇದು ಎಂದು ಪಂಪ ನಿರೂಪಿಸಿದ್ದಾನೆ. ಹಾಗೆಯೇ ಪುರಾಣ ಕವಿ ತನ್ನ ಕಾಲಮಾನದ ಆಗುಹೋಗುಗಳಿಗೆ ಸ್ಪಂದಿಸುವುದಿಲ್ಲವೆಂದಲ್ಲ. ಕವಿ ತನ್ನ ಕಾಲಮಾನದ ಪರಿಸರದಲ್ಲಿ ಅನುಭವ ಪಡೆದು ಪ್ರತ್ಯಕ್ಷವಾಗಿಯೋ ಪರೋಕ್ಷವಾಗಿಯೋ ಅದನ್ನೂ ತನ್ನ ಕಾವ್ಯದಲ್ಲಿ ಬಿಂಬಿಸುತ್ತಾನೆ. ಹೀಗಾಗಿ ಪರಂಪರೆ ಮತ್ತು ಸಮಕಾಲೀನತೆಗಳೆರಡೂ ಓರ್ವ 'ಸಮರ್ಥನಾದ ಕವಿಯ ಕಾವ್ಯದಲ್ಲಿ ಮೈಗೂಡಿರುತ್ತವೆ. ಪಂಪನಾದರೂ ಅಂತಹ ಓರ್ವ ಸಮರ್ಥ ಕವಿ ಎಂಬುದರಲ್ಲಿ ಎರಡು ಮಾತಿಲ್ಲ.

ಪಂಪನ ಆದಿಪುರಾಣವನ್ನು ಸಾಮಾನ್ಯವಾಗಿ ವೃಷಭ ತೀರ್ಥಂಕರರ ಭವಾಳಿಯ ಕಥೆ, ಭರತ ಬಾಹುಬಲಿಗಳ ವೃತ್ತಾಂತ, ಪಾತ್ರ, ಸನ್ನಿವೇಶ, ಧಾರ್ಮಿಕತೆ ಈ ಹಿನ್ನೆಲೆಯಲ್ಲಿ ವಿಶೇಷವಾಗಿ ಅಧ್ಯಯನ ಮಾಡಿರುವುದುಂಟು. ಹಾಗೆ ನೋಡಿದರೆ ಆದಿಪುರಾಣ ಒಂದು 'ವಿಶ್ವಕೋಶ'ವಿದ್ದಂತೆ. ಕಥೆ ಹಾಗೂ ವರ್ಣನೆಗಳೊಂದಿಗೆ ಅದು ತನ್ನಲ್ಲಿ ಅಡಗಿಸಿಕೊಳ್ಳುವ ವಿಷಯಗಳು ಹಲವಾರು. ಜೀವನದ ನಾನಾ ಕ್ಷೇತ್ರಗಳಿಗೆ ಸಂಬಂಧಿಸಿದ ವಿಷಯಗಳು ಇಲ್ಲಿ ಅನಾವರಣಗೊಳ್ಳುತ್ತವೆ. ಶೈಕ್ಷಣಿಕ, ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ, ವೈಜ್ಞಾನಿಕಾದಿ ನೆಲೆಗಳ ಚಿತ್ರಗಳು ಇಲ್ಲಿ ಮೂಡುತ್ತಾ ಹೋಗುತ್ತವೆ. ಇದುವರೆಗೆ ಆದಿಪುರಾಣದ ಅಧ್ಯಯನಕಾರರು ಈ ಅಂಶಗಳನ್ನು ಗುರುತಿಸಿಲ್ಲ ಎಂದಲ್ಲ. ಅವುಗಳಿಗೇ ವಿಶೇಷವಾಗಿ ಒತ್ತನ್ನು ಕೊಟ್ಟು ಸೂಕ್ಷ್ಮತರ ಅಧ್ಯಯನ ನಡೆದಿಲ್ಲವೆಂದೇ ಹೇಳಬೇಕು. ಈ ಮೇಲಿನ ಒಂದೊಂದು ವಿಷಯವೂ ಕನ್ನಡದ ಆದಿಕಾವ್ಯವಾದ ಆದಿಪುರಾಣದಲ್ಲಿ ದಾಖಲೆಯನ್ನು ಪಡೆದಿರುವುದು ವಿಶೇಷ ಸಂಗತಿ.

**ಶೈಕ್ಷಣಿಕ ವಿಷಯಗಳನ್ನು ಕುರಿತಂತೆ :** ಆದಿಪುರಾಣದಲ್ಲಿ ಅನೇಕ ಅಂಶಗಳನ್ನು ಗುರುತಿಸಿಕೊಳ್ಳಬಹುದಾಗಿದೆ. ಆ ಅಂಶಗಳು ಪರಂಪರೆಯಿಂದ ಬಂದವುಗಳೂ ಆಗಿರಬಹುದು ಅಥವಾ ಸಮಕಾಲೀನ ಮನೋಧರ್ಮದ ಹಿನ್ನೆಲೆ ಯಲ್ಲಿಯೂ ಪ್ರಭಾವಗೊಂಡಿರಬಹುದು. ಪ್ರಸ್ತುತ ಅವುಗಳನ್ನು ಬೇರ್ಪಡಿಸಿ ನೋಡುವುದು ಇಲ್ಲಿನ ಉದ್ದೇಶವಲ್ಲ. ಒಟ್ಟಾರೆ ಕಾವ್ಯದಲ್ಲಿ ಆ ಅಂಶಗಳು ಹೇಗೆ ಮೈಗೂಡಿಬಂದಿವೆ ಎಂಬುದನ್ನು ಪರಿಶೀಲಿಸುವುದಷ್ಟೇ ಇಲ್ಲಿನ ಉದ್ದೇಶವಾಗಿದೆ.

'ಶಿಕ್ಷಣ' ಎಂಬ ಪರಿಭಾಷೆ ಸಂಕೀರ್ಣವಾದುದು. ಇದು ತಿಳಿಯುವಿಕೆ, ಕಲಿಯುವಿಕೆ, ಜ್ಞಾನಾರ್ಜನೆ ಎಂಬ ಅರ್ಥದಲ್ಲಿಯೂ ಕಲಿಸುವಿಕೆ, ಬೋಧಿಸುವಿಕೆ ತರಬೇತಿ ಎಂಬ ಅರ್ಥದಲ್ಲಿಯೂ ಹಾಗೂ ದಂಡಿಸುವುದು ಎಂಬ ಅರ್ಥದಲ್ಲಿಯೂ ಪ್ರಯೋಗ ದಲ್ಲಿದೆ. ಇಲ್ಲಿ ಮೊದಲ ಎರಡು ಅರ್ಥಗಳಿಗೆ ಸಂಬಂಧಿ ಸಿದಂತೆ, ಅಂದರೆ ಶೈಕ್ಷಣಿಕ ವಲಯಕ್ಕೆ ಸಂಬಂಧಿಸಿದಂತೆ ವಿಷಯವನ್ನು ಪರಿಶೀಲಿಸಲಾಗಿದೆ. ಒಂದರ್ಥದಲ್ಲಿ ವ್ಯಕ್ತಿ ಕಟ್ಟಿಕೊಂಡುಬರುತ್ತಿರುವ ಅನುಭವವೇ ಶಿಕ್ಷಣ. ಈ ಶಿಕ್ಷಣಕ್ಕೆ ಆಧಾರವಾದುದು ಜೀವನ ಎಂಬ ಮಾತುಗಳು ಇಂದಿನ ಶಿಕ್ಷಣ ಕ್ಷೇತ್ರದಲ್ಲಿ ಪ್ರಸಿದ್ಧವಾದವು. ಗುರು-ಶಿಷ್ಯ, ವಿಷಯ, ವಿಧಾನ ಮೊದಲಾದವು ಇಲ್ಲಿ ಸಮಾವೇಶವಾಗುತ್ತವೆ. ಈ ವಿಷಯಗಳನ್ನು ಕುರಿತು ಆದಿಪುರಾಣದಲ್ಲಿ ದೊರೆಯುವ ಕೆಲವು ಸೂಚನೆ ಗಳನ್ನು ಇಲ್ಲಿ ಸಂಗ್ರಹಿಸಲಾಗಿದೆ.

ಗುರುಪರಂಪರೆಗೆ ಭಾರತೀಯ ಸಂಸ್ಕೃತಿ ವಿಶೇಷ ಮಾನ್ಯತೆಯನ್ನು ನೀಡುತ್ತದೆ. ಪುರಾಣಕಾವ್ಯಗಳು ಗುರು ಪರಂಪರೆಯನ್ನು ನೆನೆಯದೆ ಪ್ರಾರಂಭವಾಗುವುದೇ ಇಲ್ಲ. ಗುರು ಕೇವಲ ಪ್ರತ್ಯಕ್ಷವಾಗಿ ಕಲಿಸಿದ ಗುರುವೇ ಆಗಬೇಕೆಂದಿಲ್ಲ. ಆ ಗುರುವಿನ ಕಲ್ಪನೆ ಭೌತಿಕ ನೆಲೆಯನ್ನು ಮೀರಿ ವಿಶಾಲವಾದುದು, ಅಜ್ಞಾನದ ಕತ್ತಲೆಯಿಂದ ಜ್ಞಾನದ ಎಡೆಗೆ, ಮಿಥ್ಯಾತ್ವದಿಂದ

ಸಮ್ಯಕ್ತ್ವದ ಎಡೆಗೆ ಒಯ್ಯುವ ಆ ಮಹಾನ್ ಚೇತನಗಳಿಗೆ 'ಗುರು' ಎಂಬ ಪದವಿ ಸಲ್ಲುತ್ತದೆ. ಈ ಅರ್ಥದಲ್ಲಿ ಮೊದಲಿಗೆ ಪಂಪನ ಆದಿಪುರಾಣದಲ್ಲಿ ಪಂಚಪರಮೇಷ್ಠಿಗಳಿಗೆ ಅಂದರೆ ಪಂಚಗುರುಗಳಿಗೆ ಮೊದಲನೆಯ ಸ್ಥಾನ ದೊರಕುತ್ತದೆ. ಅರಿಹಂತರು, ಸಿದ್ಧರು, ಆಚಾರ್ಯರು, ಉಪಾಧ್ಯಾಯರು ಮತ್ತು ಸರ್ವಸಾಧುಗಳು ಎಂಬುವವರೇ ಆ ಪಂಚಗುರುಗಳು. ಅರಿಹಂತರು ಲೋಕಕ್ಕೆ ಬೋಧನೆಯನ್ನು ಮಾಡಿ 'ತೀರ್ಥಂಕರರು' ಎನಿಸಿದವರು. ತನ್ನ ಅರಿವಿಗೆ ಬಂದ ಸತ್ಯದ ಹಾದಿಯಲ್ಲಿ ನಡೆದು ಅದನ್ನು ಜನತೆಗೆ ತಿಳಿಸಿದವರು ಅರಿಹಂತರು. ಜ್ಯೋತಿಯಿಂದ ಬೆಳಗುವಂತೆ ಜ್ಞಾನದೀಪ್ತಿ ಇತರರಲ್ಲಿಯೂ ಪ್ರಜ್ವಲಿಸುವಂತೆ ಆಗಬೇಕು. ಅಂತಹ ಕಳಕಳಿ ಇದ್ದುದರಿಂದಲೇ ಅರಿಹಂತರು ಮಹಾನ್ ಗುರುಗಳೆನಿಸಿ ಪ್ರಥಮ ಸ್ಥಾನವನ್ನು ಪಡೆದರು. ಅಜ್ಞಾನವೆಂಬ ಕತ್ತಲನ್ನು ಜಯಿಸಿ 'ಅರಿಹಂತ' ಎನಿಸಿದರು. ಪೂಜೆಗೆ ಅರ್ಹರಾಗಿ 'ಅರಹಂತ' ಎನಿಸಿದರು. ಇವರಾದರೂ ಮೊದಲಿಗೆ ಮುನಿಗಳ ಅವಸ್ಥೆಯಲ್ಲಿ ಇದ್ದವರೇ. ಅವರು ಸಾಧುಗಳಾಗಿ, ಉಪಾಧ್ಯಾಯರಾಗಿ ಹಾಗೂ ಆಚಾರ್ಯರಾಗಿ ಮುನಿಪದವಿಯ ಮೂರು ಹಂತಗಳನ್ನು ತುಳಿದವರು. ಅನಂತರ ಅರ್ಹಂತರಾಗಿ ಕೊನೆಗೆ ಮುಕ್ತಿಯ ನೆಲೆಯನ್ನು ಗಳಿಸಿ ಸಿದ್ಧರಾದವರು. ಕೆಲವು ಮುನಿಗಳು ಅರ್ಹಂತ ಸ್ಥಾನವನ್ನು ಪಡೆಯುತ್ತಾರೆ; ಕೆಲವರು ಆ ಸ್ಥಾನವನ್ನು ಪಡೆಯದೆ ಮುಕ್ತರಾಗಿ ಸಿದ್ಧರೆನಿಸುತ್ತಾರೆ. ಒಟ್ಟಾರೆ ಇವರೆಲ್ಲರಿಗೂ ಗುರುವಿನ ಸ್ಥಾನ. ಅಂತಹ ಶ್ರೇಷ್ಠಸ್ಥಾನದಲ್ಲಿ ಅವರು ಪ್ರತಿಷ್ಠಿತರಾದುದರಿಂದ ಅಂದರೆ 'ಗುರು'ವಿನ ಸ್ಥಾನದಲ್ಲಿ ಪ್ರತಿಷ್ಠಿತರಾದುದರಿಂದ ಅವರು ಪರಮೇಷ್ಠಿಗಳು. ಆದಿಪುರಾಣದ ಉಪೋದ್ಘಾತದಲ್ಲಿ ಈ ಪಂಚಪರಮೇಷ್ಠಿಗಳ ಸ್ತುತಿ ಪದ್ಯಗಳೇ ಅಲ್ಲದೆ ಆಚಾರ್ಯಪುರುಷರನ್ನು ಗುರುವಿನ ಸ್ಥಾನದಲ್ಲಿಟ್ಟು ಸ್ತುತಿಸುವ ಪದ್ಯಗಳಿವೆ.

'ಶ್ರೀದೇವೇಂದ್ರ ಮುನೀಂದ್ರ ವಂದಿತ ಗುಣವ್ರಾತಂ...' ಎಂದು ಪ್ರಾರಂಭವಾಗುವ ವೃಷಭ ತೀರ್ಥಂಕರರ ಸ್ತುತಿಪದ್ಯದಲ್ಲಿ ಪಂಪ ತನ್ನ ಪ್ರತ್ಯಕ್ಷ ಗುರುವಾದ ದೇವೇಂದ್ರ ಮುನಿಗಳ ಹೆಸರನ್ನು ಸಮಾವೇಶಗೊಳ್ಳುವಂತೆ ಮಾಡಿದ್ದಾನೆ. ಅನಂತರ ಅವನು ತನ್ನ ಪೂರ್ವಾಚಾರ್ಯಪರಂಪರೆಯನ್ನೂ ಸ್ತುತಿಸಿದ್ದಾನೆ. ಸಮಂತಭದ್ರ, ಕವಿಪರಮೇಷ್ಠಿ, ಪೂಜ್ಯಪಾದ, ಗೃಧ್ಧಪಿಂಛಾಚಾರ್ಯ, ದೇವೇಂದ್ರಮುನಿ, ಜಯನಂದಿಗಳನ್ನು ಸ್ತುತಿಸಿದ್ದಾನೆ (೧/೧೧-೧೩). ಇವರೆಲ್ಲರಲ್ಲಿ ಅವನು ಬೋಧೋದಯಕ್ಕಾಗಿ ಪ್ರಾರ್ಥಿಸಿದ್ದಾನೆ. ಅವರಲ್ಲಿ ದೇವೇಂದ್ರಮುನಿಗಳು ಹಾಗೂ ಜಯನಂದಿಗಳು ಪಂಪನ ನೇರ ಗುರುಗಳು. ಒಟ್ಟಾರೆ 'ಗುರು'ವಿಗೆ ಅದರಲ್ಲಿಯೂ 'ಅಧ್ಯಾತ್ಮ ನೆಲೆಯ ಗುರುಗಳಿಗೆ' ಇಲ್ಲಿ ವಿಶೇಷಸ್ಥಾನ. ಮಿಥ್ಯಾತ್ವದ ಅಂಧಕಾರವನ್ನು ತೊಡೆದು ಸಮ್ಯಕ್ತ್ವದ ಬೆಳಕಿನೆಡೆಗೆ ಒಯ್ಯುವವರೆಂಬ ಹೆಗ್ಗಳಿಕೆಯಿಂದಾಗಿ ಅವರಿಗೆ ಆ ವಿಶೇಷ ಸ್ಥಾನ.

ಆದಿಪುರಾಣ ಕೇವಲ ಅಧ್ಯಾತ್ಮವಿದ್ಯೆಗೆ ಮಹತ್ವ ಕೊಟ್ಟಿದೆ ಎಂದಲ್ಲ. ಲೌಕಿಕ ವಿದ್ಯಾಭ್ಯಾಸದ ಕಡೆಗೂ

ರಾಜ್ಯಾದ್ಯಂತ ಪ್ರದರ್ಶನ

ಹೌಸ್‌ಫುಲ್ ಕನ್ನಡ ಚಿತ್ರ




ಪ್ರೀತಿಯ ಕುಲುಮೆಯಲ್ಲಿ ನಲುಗಿದ ಸಮ್ಮಿಶ್ರ ಸರ್ಕಾರ



ಅದು ಕೆಲವು ಉಲ್ಲೇಖಗಳನ್ನು ನೀಡುತ್ತದೆ. ರಾಜಕುಮಾರರು ಬಾಲ್ಯದಿಂದ ಹಿಡಿದು ಯೌವನದವರೆಗೆ ಅನೇಕ ವಿದ್ಯೆಗಳನ್ನು ಕರಗತ ಮಾಡಿಕೊಳ್ಳುತ್ತಿದ್ದರು ಎಂಬ ಅಂಶವನ್ನು ಮಹಾಬಲ ವೃತ್ತಾಂತದಲ್ಲಿ ಗಮನಿಸಬಹುದಾಗಿದೆ. ಮಗುವಾಗಿದ್ದ ಕಾಲದಿಂದಲೂ ವಿದ್ಯಾಧರ ವಿದ್ಯೆಗಳನ್ನು ಅಭ್ಯಾಸಮಾಡಿ ಅವುಗಳಲ್ಲಿ ಮಹಾಬಲನು ಪಾರಂಗತನಾದನು; ಸಕಲ ಕಲೆ ಮತ್ತು ವಿಜ್ಞಾನ ವಿದ್ಯೆಗಳನ್ನು ಕಲಿತನು; ಶಾಸ್ತ್ರ-ಶಸ್ತ್ರ ವಿದ್ಯೆಗಳಲ್ಲಿ ಪರಿಣತನಾದನು; ಯೌವನವನ್ನು ಹೊಂದಿದನು. (ಆ ಮಹಾಬಳಂ ಬಾಲಕಾಲದಿಂತಗುಬ್ಬಭ್ಯಸ್ತ ಸಮಸ್ತ ವಿದ್ಯಾಧರ ವಿದ್ಯಾಪಾರಂಗನುಂ ಪರಿಸಮಾಪ್ತ ಸಕಳ ಕಳಾ ವಿಜ್ಞಾನನುಂ ಅಧಿಗತಾಶೇಷ ಶಾಸ್ತ್ರನುಂ ಪರಿಣತಸಕಳಶಸ್ತ್ರನುಮಾಗಿ ಯೌವನಂ ನೆಱೆಯೆ-೧/೭೩ವ). ಆದರೆ ಎಲ್ಲಿ ಕಲಿಯುತ್ತಿದ್ದರು? ಗುರುಕುಲ ಪದ್ಧತಿ ಇತ್ತೆ? ಯಾರು ಕಲಿಸುತ್ತಿದ್ದರು? ಎಂಬ ಪ್ರಶ್ನೆಗಳಿಗೆ ಇಲ್ಲಿ ಉತ್ತರ ದೊರೆಯುವುದಿಲ್ಲ. ಆದರೆ ತಂದೆಯೇ ತನ್ನ ಮಕ್ಕಳಿಗೆ ಗುರುವಾಗಿರುತ್ತಿದ್ದನೆಂಬುದು ವೃಷಭನಾಥನ ಪ್ರಸಂಗದಲ್ಲಿ ತಿಳಿದುಬರುತ್ತದೆ. ಆ ವಿಷಯವನ್ನು ಮುಂದೆ ಗಮನಿಸಲಾಗಿದೆ.

ರಾಜಕುಮಾರಿಯರಿಗೂ ವಿದ್ಯೆಯನ್ನು ಕಲಿಸಲಾಗುತ್ತಿತ್ತು. ಅವರನ್ನು ವಿಶೇಷವಾಗಿ ಕಲಾಪಂಡಿತೆಯರನ್ನಾಗಿ ಮಾಡಲಾಗುತ್ತಿತ್ತು ಎಂಬ ಅಂಶವು ಶ್ರೀಮತಿಯ ವೃತ್ತಾಂತದಲ್ಲಿ ಕಂಡುಬರುತ್ತದೆ. 'ಪಂಡಿತೆಯೆಂಬ ಪ್ರಸಿದ್ಧಳಾದ ದಾಸಿಯು ಶ್ರೀಮತಿಗೆ ಓದಿಸುವ ದಾದಿಯಾದಳು. ಶ್ರೀಮತಿ ಕಲೆಯ ಜಾಣ್ಮೆಯಲ್ಲಿ ಪಂಡಿತೆಗಿಂತಲೂ ಮಹಾಪಂಡಿತೆಯಾದಳು'.

*ಪಂಡಿತೆಯೆಂಬ ನೆಗೞ್ತೆಯ*
*ಕೊಂಡಾಟದ ದಾದಿ ತನ್ನ ನೋದಿಸುತಿರೆ ಕ*
*ಯ್ಕೊಂಡ ಕಲಾ ಪರಿಣತಿಯೊಳ್*
*ಪಂಡಿತೆಯಿಂದಾಕೆ ಪರಮಪಂಡಿತೆಯಾದಳ್*
*(೩/೨೧)*

ಎಂಬ ಈ ಭಾಗವನ್ನು ಗಮನಿಸಬಹುದು.

ವಾದ ವಿದ್ಯೆಯ ಬಗೆಗೆ ಒಂದೆರಡು ಕಡೆ ಉಲ್ಲೇಖವಿದೆ. ಮಂತ್ರಿಯ ಮಕ್ಕಳು, ಮಂತ್ರಿಗಳು ವಿಶೇಷವಾಗಿ ಈ ವಿದ್ಯೆಯಲ್ಲಿ ಪರಿಣತಿಯನ್ನು ಹೊಂದುತ್ತಿದ್ದಿರಬೇಕು. ಉದಾಹರಣೆಗೆ, ಮಂತ್ರಿಯ ಮಗನಾದ ಪ್ರಹಸಿತ ಮತ್ತು ಆತನ ಸ್ನೇಹಿತ ವಿಕಸಿತರೆಂಬುವರು ವಿದ್ಯಾಪರಿಣತರೆನಿಸಿದ್ದು ವಾದಿಗಳಾಗಿ.

ವಾದಿ ನಗ ವಾದಿ ಗಜ ಪರ
ವಾದಿ ತಮಸ್ತ ಮಮನೊಡೆವ ಬಿಡೆ ಬೆದಱಿಪ ನಿ
ರ್ಭೇದಿ ಪೆಡೆಗಶನಿ ಹರಿ ದಿನ
ಪೋದಯಮನಿಸಿದುದು ವಿದ್ಯೆಯೊಂದುರ್ಕವರಾ
(೩/೭೪)

ವಾದಿಗಳೆಂಬ ಪರ್ವತವನ್ನು ಎರಡು ಹೋಳಾಗಿ ಮಾಡುವ ಸಿಡಿಲಿನಂತೆಯೂ ವಾದಿಗಳೆಂಬ ಆನೆಯನ್ನು ಬೆದರಿಸುವ ಸಿಂಹದಂತೆಯೂ ಪರವಾದಿಗಳೆಂಬ ಕಗ್ಗತ್ತಲನ್ನು ಸಂಪೂರ್ಣವಾಗಿ ಹೋಗಲಾಡಿಸುವ ಸೂರ್ಯನಂತೆಯೂ ಇತ್ತು ಅವರ ವಿದ್ಯಾಪ್ರೌಢಿಮೆ ಎಂದು ಹೇಳುವಲ್ಲಿ ವಾದ ವಿದ್ಯೆಯ ಉಲ್ಲೇಖವಿದೆ.

ಅಹಂಕಾರ, ಮಿಥ್ಯೆ ಇವು ವಿದ್ಯೆಗೆ ವಿನಾಶವನ್ನು ತರುವಂತಹವು. ಅಹಂಕಾರ, ಮಿಥ್ಯೆ ನೀಗಿದಾಗಲೇ ವಿದ್ಯೆ ಪ್ರಕಾಶಿಸುವುದು. ಅದು ಸದ್ಗುರುವಿನಿಂದ ಸಾಧ್ಯ ಎಂಬ ಅಂಶವನ್ನು ಇಲ್ಲಿ ಒತ್ತಿ ಹೇಳಲಾಗಿದೆ. ಮಿಥ್ಯಾಜ್ಞಾನದಿಂದ ಮದಲಿಪ್ತರಾದ ಇವರು ಎಷ್ಟೇ ವಿದ್ಯಾಪರಿಣತರಾದರೂ ಮತಿಸಾಗರ ಮುನಿಗಳೊಡನೆ ವಾದ ಮಾಡಿ ಸೋತರು (೩/೭೪ವ).

ಉದಾಹರಣೆಗೆ, ವಿದ್ಯಾಗರ್ವಪರ್ವತಮವರ ವಚೋವಜ್ರಾ ಘಾತದಿಂದಂ ನುಚ್ಚು
ನೂಱಾಗೊಡೆದೊಡೆ
ಹತಪ್ರತಿಭರುಂಗಳಿತಗರ್ವರುಮಾಗಿ ತಚ್ಛಿಷ್ಯತ್ವ
ಮಂ ಪೂಣ್ದು.... (೩/೭೪ವ)

ಎಂಬ ಮಾತುಗಳಲ್ಲಿ ಅದನ್ನು ಗಮನಿಸಬಹುದು.

ತಿಳಿದವರು ತಿಳಿಯದವರಿಗೆ ತಿಳಿಸಿಕೊಡುವ ಪರಂಪರೆಯನ್ನು ಮನುಕುಲದ ವಿವರಗಳಲ್ಲಿ ವಿಶೇಷವಾಗಿ ಗಮನಿಸಬಹುದಾಗಿದೆ. ಪ್ರಾಕೃತಿಕ ಹಾಗೂ ಸಾಮಾಜಿಕ ಏರುಪೇರುಗಳಿಂದಾಗಿ ಜನಗಳಲ್ಲಿ ಉಂಟಾದ ಕ್ಷೋಭೆಗೆ ಪರಿಹಾರವನ್ನು ನೀಡಿದ ಜ್ಞಾನಿಗಳು ಮನುಗಳು. ೧೪ ಮನುಗಳು ಈ ಪರಂಪರೆಗೆ ಸಂದಿದವರಾಗಿ ಒಂದು ರೀತಿಯಲ್ಲಿ 'ಗುರು'ವಿನ ಸ್ಥಾನವನ್ನು ಪಡೆಯುತ್ತಾರೆ.

ಆದಿಪುರಾಣದಲ್ಲಿ ಮನುಗಳನ್ನು 'ಬೋಧ'ರೆಂದೂ (೬/೫೪) ಸನ್ಮತಿವಿಕಾಸಕರೆಂದೂ (೬/೫೫ವ) ಮಹಾತ್ಮರೆಂದೂ (೬/೫೬ ಹಾಗೂ ೬೫) ಉಪದೇಶಕರೆಂದೂ (೬/೫೭ವ, ೬/೬೨ವ) ಮಹಾಪುರುಷರೆಂದೂ (೬/೫೮ವ) ಕರೆದು ಗೌರವಿಸಲಾಗಿದೆ.

ಈ ಭರತಭೂಮಿಯು ಭೋಗಭೂಮಿಯ ಸ್ಥಿತಿಯಿಂದ ಕರ್ಮಭೂಮಿಗೆ ಮಾರ್ಪೊಳ್ಳುವ ಹಂತದಲ್ಲಿ ಪ್ರಕೃತಿಯಲ್ಲಿ ಕೆಲವು ಬದಲಾವಣೆಗಳಾದವು.

ಜ್ಯೋತಿರ್ಲಿಂಗ ಕಲ್ಪವೃಕ್ಷಗಳು ಕ್ಷೀಣವಾಗ ತೊಡಗಿದಾಗ ಆಕಾಶದಲ್ಲಿದ್ದ ಸೂರ್ಯ, ಚಂದ್ರ, ನಕ್ಷತ್ರಗಳು ಜನರಿಗೆ ಕಾಣತೊಡಗಿದವು. ಖಗೋಳ ಮಂಡಲದಲ್ಲಿ ತಲೆದೋರಿದ ಸೂರ್ಯ, ಚಂದ್ರಾದಿಗಳ ಬಗೆಗೆ ಅರಿವು ಮೂಡಿಸಿ ಜನಗಳ ಭೀತಿಯನ್ನು ಹೋಗಲಾಡಿಸಿದವರು ಪ್ರತಿಶ್ರುತಿ ಮತ್ತು ಸನ್ಮತಿ ಎಂಬ ಮನುಗಳು.

ವನ್ಯಮೃಗಗಳಿಂದ ತಮ್ಮನ್ನು ರಕ್ಷಿಸಿಕೊಳ್ಳುವುದು ಹೇಗೆಂಬುದನ್ನು ಕ್ಷೇಮಂಕರ ಮತ್ತು ಕ್ಷೇಮಂಧರ ಕುಲಕರರು ತಿಳಿಸಿದರು.

ತಮ್ಮ ತಮ್ಮಲ್ಲಿ ಎಲ್ಲೆಗಳನ್ನು ನಿಗದಿಪಡಿಸಿಕೊಂಡು ಜಗಳವಿಲ್ಲದಂತೆ ಬಾಳುವ ರೀತಿಯನ್ನು ಸೀಮಂಕರ ಮತ್ತು ಸೀಮಂಧರ ಮನುಗಳು ತಿಳಿಸಿದರು. ಒಂದು ರೀತಿಯಲ್ಲಿ ಅವರು 'ಊರು' ಎಂಬ ಪರಿಕಲ್ಪನೆಗೆ ಹುಟ್ಟುಹಾಕಿದರು.

ಪ್ರಾಣಿಗಳನ್ನು ಸಾಕುವ ಕಲೆಯನ್ನು, ಪಶು ಪಾಲನೆಯನ್ನು ಮತ್ತು ಅವುಗಳನ್ನು ಇತರ ಸೌಲಭ್ಯ ಗಳಿಗಾಗಿ, ಸರಕು ಸಾಗಾಣಿಕೆ ಮತ್ತು ಸಂಚಾರ ಕಾರ್ಯಗಳಿಗಾಗಿ ಉಪಯೋಗಿಸಿಕೊಳ್ಳಬಹುದು ಎಂಬುದನ್ನು ತಿಳಿಸಿಕೊಟ್ಟವನು ವಿಮಲವಾಹನ.

ವೈವಾಹಿಕ ಜೀವನ, ಮಕ್ಕಳ ಲಾಲನೆ-ಪಾಲನೆ, ಪೋಷಣೆಗಳನ್ನು ಹೇಳಿಕೊಟ್ಟವರು ಚಕ್ಷುಷ್ಮಾನ್, ಯಶಸ್ವಾನ್ ಮತ್ತು ಅಭಿಚಂದ್ರ ಎಂಬ ಮನುಗಳು. ಒಂದು ರೀತಿಯಲ್ಲಿ ಅವರು ಕೌಟುಂಬಿಕ ಜೀವನವನ್ನು ಭದ್ರಗೊಳಿಸಿದವರು.

ಪೃಥ್ವಿ, ಆಕಾಶಗಳ ಪರಿವರ್ತನೆಯ ಬಗೆಗೆ ಅರಿವು ಮೂಡಿಸಿದವನು ಚಂದ್ರಾಭ.

ಮರುದ್ದೇವನೆಂಬ ಮನು ನದಿ ದಾಟುವುದನ್ನು, ಬೆಟ್ಟಗಳನ್ನು ಹತ್ತುವುದನ್ನು ಹೇಳಿಕೊಟ್ಟನು.

ಪ್ರಸೇನಜಿತ್ ಎಂಬುವನು ಜರಾಯುವಿನಿಂದ ಆವರಿಸಿದ ಗರ್ಭವನ್ನು ಶುದ್ಧಿಮಾಡುವುದನ್ನು ಅಂದರೆ ಆರೋಗ್ಯಕರವಾದ ಪ್ರಸವ ವಿದ್ಯೆಯನ್ನು ತಿಳಿಸಿದನು.

ನಾಭಿರಾಜನು ಸಂತಾನೋತ್ಪತ್ತಿಯ ಸಮಯದಲ್ಲಿ ನಾಭಿಯನ್ನು ತುಂಡರಿಸುವ ವಿಧಾನವನ್ನು ತಿಳಿಸಿದನು. ಅಲ್ಲದೆ ಬದಲಾಗುತ್ತಿದ್ದ ಪರಿಸರಕ್ಕೆ ತಕ್ಕಂತೆ ಜೀವನೋಪಾಯವನ್ನು ನಡೆಸುವ ಮಾರ್ಗವನ್ನು ತಿಳಿಸಿದನು. ತಾವೇ ತಾವಾಗಿ ಬೆಳೆದು ನಿಂತ ಕಬ್ಬು, ಬತ್ತ ಮೊದಲಾದವುಗಳನ್ನು ಹೇಗೆ ಬಳಸಿಕೊಳ್ಳಬೇಕು ಎಂಬುದನ್ನು ತಿಳಿಸಿಕೊಟ್ಟನು. ದೇಹಾರೋಗ್ಯಕ್ಕೆ ಕಾರಣ ವಾಗುವ ಹಣ್ಣುಗಳನ್ನು ಸೇವಿಸುವುದನ್ನು ಹೇಳಿ ಕೊಟ್ಟನು. ಧಾನ್ಯಗಳನ್ನು ಸಂರಕ್ಷಿಸುವ, ಪಾತ್ರೆಗಳಲ್ಲಿ ಅಡುಗೆ ಮಾಡುವ, ತುಪ್ಪ, ಮೊಸರು ಮೊದಲಾದ ಪರಿಕರಗಳನ್ನು ಬಳಸುವ ಈ ಮೊದಲಾದ ಅಂಶಗಳನ್ನು ತಿಳಿಸಿದನು (೬/೫೧-೭೯).

ಆ ದಿನಗಳಲ್ಲಿ ಅವರು ಹೇಳಿಕೊಟ್ಟ ಈ ಅಂಶಗಳು ನಾಗರಿಕ ಬೆಳವಣಿಗೆಯಲ್ಲಿ ಒಂದು ವಿಶಿಷ್ಟ ಸ್ಥಾನವನ್ನು ಪಡೆಯುತ್ತವೆ. ಬದುಕುವ ವಿಧಾನವನ್ನು ಕಲಿಸುವ ವಿದ್ಯೆಗಳಿವು. ಆ ವಿದ್ಯೆಗಳನ್ನು ಕಲಿಸಿದ ಮನುಗಳು ಔಪಚಾರಿಕ ನೆಲೆಯ ಗುರುಗಳಲ್ಲದಿರಬಹುದು. ಆದರೆ ಅವರು ಮಾಡಿದ ಕಾರ್ಯ ಮಹತ್ತರವಾದುದು. ಅತ್ಯಂತ ಅಗತ್ಯವೆನಿಸಿದ ಸಮಯದಲ್ಲಿ ಕಾಲಧರ್ಮಕ್ಕೆ ಅನುಗುಣವಾಗಿ ತುರ್ತು ಶಿಕ್ಷಣವನ್ನು ಅವರು ನೀಡಿದರು. ಖಗೋಳ ವಿಜ್ಞಾನ, ಕೃಷಿ ವಿಜ್ಞಾನ, ಗೃಹ ವಿಜ್ಞಾನ, ಪ್ರಸೂತಿ ವಿಜ್ಞಾನ – ಹೀಗೆ ನಾನಾ ವಿಷಯ ಗಳಿಗೆ ಸಂಬಂಧಿಸಿದ ವಿಷಯಗಳು ಇಲ್ಲಿ ನಿರೂಪಣೆ ಗೊಂಡಿವೆ. ತೀರಾ ವ್ಯಾವಹಾರಿಕ ಎನ್ನುವಂತೆ ಜನಗಳೊಂದಿಗೆ ಬೆರೆತು, ಅವರ ಆಗುಹೋಗುಗಳಿಗೆ ಸ್ಪಂದಿಸಿ, ಅವರಿಗೆ ಸೂಕ್ತ ಮಾರ್ಗದರ್ಶನವನ್ನು ತೋರಿ ಮುನ್ನಡೆಸಿದ ನಾಯಕರಾಗಿ, ಬೋಧಕರಾಗಿ ಮನುಗಳು ಕಂಡುಬರುತ್ತಾರೆ.

ನಾಭಿರಾಜನ ಪುತ್ರ ವೃಷಭನಾಥನ ಕೊಡುಗೆಯೂ ಕೂಡ ಈ ನಿಟ್ಟಿನಲ್ಲಿ ವಿಶೇಷವಾದುದೇ. ವೃಷಭನಾಥನು ತನ್ನ ಮತಿ, ಶ್ರುತ, ಅವಧಿಜ್ಞಾನಗಳ ಬಲದಿಂದ ವ್ಯವಹಾರಜ್ಞಾನ, ಸಕಲಕಲಾ ಕುಶಲತೆ, ಛಂದಸ್ಸು, ವ್ಯಾಕರಣ, ನ್ಯಾಯ, ಅಲಂಕಾರ, ಕಾವ್ಯ, ನೃತ್ಯ, ಸಂಗೀತ, ವಾದ್ಯ, ಪಕ್ಷಿ ಕೂಜನಾದಿ ವಿನೋದ ಮೊದಲಾದ ವಿದ್ಯೆಗಳಲ್ಲಿ ಪರಿಣತನಾದವರಾಗಿದ್ದನು. (೮/೩ವ). ಅಲ್ಲದೆ ವೃಷಭನಾಥನೇ ತನ್ನ ಮಕ್ಕಳಿಗೆ ಗುರುವಾಗಿ ವಿದ್ಯೆಯನ್ನು ಬೋಧಿಸಿದನೆಂಬ ಪ್ರಸಂಗ ಆದಿಪುರಾಣದಲ್ಲಿ ದೊರೆಯುತ್ತದೆ.

ವೃಷಭನ ಮಕ್ಕಳು ಬೆಳೆದು ಸಾಕಷ್ಟು ದೊಡ್ಡವರಾದರು. ಒಮ್ಮೆ ವೃಷಭೇಶ್ವರ ಸಿಂಹಾಸನಾಸೀನನಾಗಿ ಸಕಲಕಲಾ ವಿದ್ಯೋಪದೇಶ ಉತ್ಸುಕ ಹೃದಯನಾಗಿದ್ದನು (೮/೫೫ ವ). ಆಗ ಅವನ ಹೆಣ್ಣುಮಕ್ಕಳಾದ ಬ್ರಾಹ್ಮಿ, ಸೌಂದರಿಯರು ತಂದೆಗೆ ನಮಸ್ಕರಿಸಿ ಬಳಿಗೆ ಬಂದರು. ತಂದೆಯಾದರೂ ಅವರನ್ನು ಪ್ರೀತಿಯಿಂದ ತೊಡೆಯ ಮೇಲೆ ಕೂರಿಸಿಕೊಂಡನು (೮/೫೭). ಮಕ್ಕಳಾದರೂ ವಿನಯ ಸಂಪನ್ನತೆಯಿಂದ ಕೂಡಿದವರು. ಅವರಿಗೆ ವಿದ್ಯೆಯನ್ನು ಕಲಿಸಿಕೊಡಬೇಕೆಂಬ ಮನಸ್ಸು ಆತನಿಗೆ ಉಂಟಾಯಿತು. ಬ್ರಾಹ್ಮೀ ಸೌಂದರಿಯರು ತಂದೆಯ ವಿದ್ಯೋಪದೇಶಕ್ಕೆ ಪ್ರಥಮ ಪಾತ್ರರಾದರು; ಅಗ್ರಶಿಷ್ಯೆಯರಾದರು. ತಂದೆ ಅವರಿಗೆ ಹೇಳಿದ ಮಾತುಗಳಂತೂ ಆ ಹೆಣ್ಣುಮಕ್ಕಳ ಘನತೆಯನ್ನು ಹೆಚ್ಚಿಸುವಂತಹವು; ಅಷ್ಟೇ ಅಲ್ಲ, ಸ್ತ್ರೀ ಶಿಕ್ಷಣ ಕ್ಷೇತ್ರದಲ್ಲಿಯೇ ಸುವರ್ಣಾಕ್ಷರ ಪ್ರಾಯವಾದವು.

ಈ ವಯಸಮನೀ ಶೀಲಮ
ನೀ ವಿನಯಮನೆಯ್ದೆ ವಿದ್ಯೆಯಿಂ ಪುದಿದೊಡೆ ಮ
ತ್ತೇವೇಳ್ವುದೊ ನೀಮೆ ಜಗತ್ಪಾ
ವನೆಯರಿರಕ್ಕ ನಿಮಗಮಗ್ಗಳರೊಳರೇ *(೮/೫೮)*

ಈ ವಯಸ್ಸನ್ನು, ಈ ಸದ್ಗುಣವನ್ನು ಈ ವಿನಯ ಗುಣವನ್ನು ವಿಶೇಷವಾಗಿ ವಿದ್ಯೆಯಿಂದ ತುಂಬಿದರೆ ಆಗ ಇನ್ನೇನು ಹೇಳಬೇಕು, ಅಕ್ಕ, ನೀವೇ ಲೋಕಪಾವನೆಯರಾಗುತ್ತೀರಿ. ಆಗ ನಿಮಗಿಂತಲೂ ಶ್ರೇಷ್ಠರಾದವರು ಇರುತ್ತಾರೆಯೆ? ಎಂದು ಸ್ಪಷ್ಟಪಡಿಸಿದ. 'ನಿಮಗೀ ವಯಸಮೆಂಬುದು ವಿದ್ಯಾಭ್ಯಾಸಯೋಗ್ಯ'ವೆಂದು ವೃಷಭನಾಥನು ಅವರಿಗೆ ವಿದ್ಯಾಭ್ಯಾಸ ಮಾಡಿಸಲು ಮುಂದಾದನು. ತನ್ನ ಹೃದಯ ಕಮಲದಲ್ಲಿ ನೆಲೆಸಿರುವ ಸರಸ್ವತಿಯನ್ನು ಆಹ್ವಾನಿಸಿ

ಪೂಜೆಯೊಡನೆ ನೆಲೆಸುವಂತೆ ಮಾಡಿದನು.

*ಮುನ್ನಂ ತ್ರಿಲೋಕಗುರು ಸಿ*
*ದ್ಧಂ ನಮಯೆಂದಱೆಪಿ ಮುಖ್ಯ ಮಂಗಳ ಪದಮಂ*
*ಕನ್ನೆಗೆ ಪಿರಿಯಾಕೆಗೆ ಬಱೆ*
*ಯಂ ನಯದಿಂ ಬರೆದು ತೋಱಿದ ಲಿಪಿಗಳುಮಂ (೮/೫೯)*

ಮೂರು ಲೋಕದ ಗುರುವಾದ ವೃಷಭನಾಥನು ಹಿರಿಯಳಾದ ಬ್ರಾಹ್ಮಿಗೆ ಪ್ರಮುಖ ಮಂಗಳ ಪದವನ್ನು ಸಿದ್ಧಂ ನಮಃ ಎಂದು ಹೇಳಿಕೊಟ್ಟು ಅನಂತರ ಆ ಮಂತ್ರದ ಅಕ್ಷರಗಳನ್ನು ನಯವಾದ ರೀತಿಯಲ್ಲಿ ಬರೆದು ತೋರಿಸಿದನು.

'ಅ' ಕಾರದಿಂದ ಮೊದಲು ಮಾಡಿ 'ಹ'ಕಾರದವರೆಗೆ ಸ್ವರ, ವ್ಯಂಜನ ಭೇದದಿಂದ ಬೇರೆಯಾದ ಶುದ್ಧಾಕ್ಷರಗಳನ್ನು ನಾಲ್ಕು ಯೋಗವಾಹಗಳನ್ನು (ಅನುಸ್ವಾರ, ವಿಸರ್ಗ, ಜಿಹ್ವಾಮೂಲ, ಉಪಧ್ಮಾನೀಯ) ಸಂಯೋಗಾಕ್ಷರಗಳನ್ನು ಬಲಗೈಯಿಂದ ಬ್ರಾಹ್ಮಿಗೆ ಉಪದೇಶಮಾಡಿದನು.

ಸುಂದರಿಗೆ ಎಡಗೈಯಿಂದ ಸ್ಥಾನಗಳ ಕ್ರಮದಿಂದ ಕ್ರಮವಾಗಿ ಹೆಚ್ಚುತ್ತ ಹೋಗುವ ಗಣಿತಶಾಸ್ತ್ರವನ್ನು ತಿಳಿಸಿದನು (೮/೬೦, ೨೦ವ). ಅಲ್ಲದೆ ಸ್ವಯಂಭು ಎಂಬ ಹೆಸರಿನ ವ್ಯಾಕರಣ, ಛಂದಸ್ಸು, ಅಲಂಕಾರಶಾಸ್ತ್ರಗಳೆಂಬ ಮೂರರಿಂದ ಹೆಸರನ್ನು ಪಡೆದ ವಾಙ್ಮಯವನ್ನೂ (ಸಾಹಿತ್ಯವನ್ನೂ), ಎಲ್ಲ ಕಲೆಗಳನ್ನೂ ಆದಿನಾಥನು ಉಪದೇಶ ಮಾಡಿ ತನ್ನ ಹೆಣ್ಣುಮಕ್ಕಳನ್ನು ವಿದ್ಯಾ ಪರಿಪೂರ್ಣೆಯರನ್ನಾಗಿ ಮಾಡಿದನು.

ವೃಷಭನಾಥನು ತನ್ನ ಇತರ ಗಂಡುಮಕ್ಕಳಿಗೂ ಕೂಡ ಕೆಲವು ವಿದ್ಯೆಗಳನ್ನು ಹೇಳಿಕೊಟ್ಟನು. ಭರತನಿಗೆ ನಾಟ್ಯಶಾಸ್ತ್ರ ಮತ್ತು ಅರ್ಥಶಾಸ್ತ್ರವನ್ನೂ ವೃಷಭಸೇನನಿಗೆ ಸಂಗೀತ ಮತ್ತು ಅರ್ಥಶಾಸ್ತ್ರವನ್ನೂ ವೃಷಭಸೇನನಿಗೆ ಸಂಗೀತ ಮತ್ತು ಗೀತವಾದ್ಯ ಮೊದಲಾದ ಗಂಧರ್ವವಿದ್ಯೆಯನ್ನೂ ಅನಂತವಿಜಯನಿಗೆ ಚಿತ್ರಕಲೆ ಮತ್ತು ವಾಸ್ತುವಿದ್ಯೆಯನ್ನೂ ಬಾಹುಬಲಿಗೆ ಕಾಮತಂತ್ರ ಮತ್ತು ಸಾಮುದ್ರಿಕ, ಆಯುರ್ವೇದ, ಧನುರ್ವೇದ, ಹಸ್ತಿ, ಅಶ್ವ ಪರೀಕ್ಷೆ, ರತ್ನ ಪರೀಕ್ಷೆಗಳನ್ನೂ ಉಳಿದ ತನ್ನ ಇತರ ಮಕ್ಕಳಿಗೆ ಲೋಕೋಪಕಾರಿಯಾದ ಶಾಸ್ತ್ರಗಳನ್ನೂ ಹೇಳಿಕೊಟ್ಟನು (೮/೬೧). ಹೀಗೆ ವೃಷಭನ ಮಕ್ಕಳು 'ಉತ್ತಮ ವಿದ್ಯೆಗಳ್ಗೆಗುಱಿಯಾದರು (೮/೬೧).'

ಮೇಲೆ ವಿವರಗೊಂಡಿರುವ ವಿಷಯಗಳಿಂದ ಕೆಲವು ಶೈಕ್ಷಣಿಕ ಅಂಶಗಳನ್ನು ಹೀಗೆ ಗುರುತಿಸಿಕೊಳ್ಳಬಹುದಾಗಿದೆ.

ತಂದೆಯೇ ಮಕ್ಕಳಿಗೆ ಗುರುವಾಗಿರುವ ಸಂದರ್ಭ ಇಲ್ಲಿದೆ. ಅಲ್ಲದೆ ತಂದೆ ಎಂಬ ಅರ್ಥದಲ್ಲಿ 'ಗುರು' ಎಂಬ ಪದಪ್ರಯೋಗವೂ ದೊರೆಯುತ್ತದೆ (೧/೮೧ವ). ಒಟ್ಟಾರೆ ಗುರು ತಂದೆಯ ಸ್ಥಾನದಲ್ಲಿರುವುದಷ್ಟೇ ಅಲ್ಲ, ಕೆಲವು ವೇಳೆ ತಂದೆಯೇ 'ಗುರು'ವಾಗಿರುತ್ತಿದ್ದ. ಸರಸ್ವತಿ ಆರಾಧನೆಯಿಂದ ವಿದ್ಯೆಯನ್ನು ಪ್ರಾರಂಭಿಸಲಾಗುತ್ತಿತ್ತು. ಎಲ್ಲರಿಗೂ ಎಲ್ಲ ವಿದ್ಯೆಗಳನ್ನು ಹೇಳಿಕೊಡಲಾಗುತ್ತಿರಲಿಲ್ಲ. ಬಹುಶಃ ಅವರವರ ಆಸಕ್ತಿ, ಸಾಮರ್ಥ್ಯಗಳಿಗೆ ಅನುಗುಣವಾಗಿ ಮಕ್ಕಳಿಗೆ ವಿದ್ಯೆಯನ್ನು ಕಲಿಸಲಾಗುತ್ತಿತ್ತು ಎಂದು ತೋರುತ್ತದೆ.

ಹೆಣ್ಣುಮಕ್ಕಳಿಗೂ ವಿದ್ಯಾ ಸ್ವಾತಂತ್ರ್ಯವಿತ್ತು. ಕೇವಲ ಸಂಗೀತ, ಚಿತ್ರಕಲೆಯಂತಹ ವಿದ್ಯೆಗಳನ್ನೇ ಅಲ್ಲದೆ ಗಣಿತಶಾಸ್ತ್ರ, ಲಿಪಿಶಾಸ್ತ್ರದಂತಹ ವಿದ್ಯೆಗಳಿಗೂ ಅವರು ಪಾತ್ರರಾಗಿರುತ್ತಿದ್ದರು.

ವಿದ್ಯಾಕ್ಷೇತ್ರದ ವಿಷಯ ವೈವಿಧ್ಯತೆಯಿಂದ ಕೂಡಿದುದಾಗಿತ್ತು. ಆಯುರ್ವೇದ, ಧನುರ್ವೇದ, ಅಶ್ವಶಾಸ್ತ್ರ, ರತ್ನಪರೀಕ್ಷೆ, ಸಂಗೀತ, ನಾಟ್ಯ, ಸಾಮುದ್ರಿಕ ಮೊದಲಾದ ವಿಷಯ ವೈವಿಧ್ಯಗಳು ಇಲ್ಲಿ ಕಂಡು ಬರುತ್ತವೆ. ವೈದ್ಯಕೀಯವಿದ್ಯೆ, ರಾಜೋಚಿತವಿದ್ಯೆ, ವಣಿಕವಿದ್ಯೆ, ಕಲಾವಿದ್ಯೆ ಮೊದಲಾದವುಗಳಿಗೆ ಸಂಬಂಧಿಸಿದಂತೆ ವಿಷಯಗಳ ವೈವಿಧ್ಯವನ್ನು ಇಲ್ಲಿ ಕಾಣಬಹುದು.

ತನ್ನ ಮಕ್ಕಳಿಗೆ ಗುರುವಾದಂತೆ ಪ್ರಜೆಗಳಿಗೂ ಕೂಡ ವೃಷಭನಾಥ ಗುರುವಾದನು. ಇದುವರೆಗೆ ಆಕೃಷ್ಟ ಪಚ್ಯಗಳಿಂದ (ತನಗೆ ತಾನೇ ಬೆಳೆಯುವ ಬೆಳೆ) ಜೀವಿಸುತ್ತಿದ್ದ ಜನರು ಅವುಗಳು ಕಣ್ಮರೆಯಾಗುತ್ತ ಬರಲು ಹೊಟ್ಟೆ ಪಾಡಿಗಾಗಿ ವಿಹ್ವಲರಾದರು. ಆಗ ಅವರಿಗೆ ಜೀವನೋಪಾಯ ಮಾರ್ಗವನ್ನು ತಿಳಿಸಿದವನು ವೃಷಭ. ಲೋಕ ಜೀವನಾರ್ಥವಾಗಿ ಅವರಿಗೆ ಅಸಿಕರ್ಮ (ಕತ್ತಿ ಪ್ರಯೋಗ), ಮಷಿ (ಅಕ್ಷರ ವಿಧಾನ), ಕೃಷಿ (ವ್ಯವಸಾಯ), ವಿದ್ಯೆ (ಶಾಸ್ತ್ರ), ವಾಣಿಜ್ಯ (ವ್ಯಾಪಾರ), ಶಿಲ್ಪ (ಹಸ್ತಕೌಶಲದಿಂದ ಕೂಡಿದ ಕಲೆ) – ಈ ವಿದ್ಯೆಗಳನ್ನು ತಿಳಿಸಿಕೊಟ್ಟನು (೮/೬೪ವ). ಅಂದು ಪ್ರಜೆಗಳು ಕಲಿತ ಆ ವಿದ್ಯೆಗಳು ವಿದ್ಯಾಪರಂಪರೆಯ ಹಾದಿಯಲ್ಲಿ ಮೈಲಿಗಲ್ಲುಗಳು ಎಂದೇ ಹೇಳಬೇಕು. ಅಲ್ಲದೆ ಅವು ನಾಗರಿಕತೆಯ ಮುನ್ನಡೆಗೆ ಕಾರಣಗಳೂ ಆದವೆಂದು ಹೇಳಬಹುದು.

ವೃಷಭನಾಥ ಲೌಕಿಕ ಗುರುವಷ್ಟೇ ಅಲ್ಲ, ತೀರ್ಥಂಕರನೆನಿಸಿ ಆಧ್ಯಾತ್ಮ ಗುರುವೂ ಆದವನು; ತ್ರಿಲೋಕ ಗುರು ಎನಿಸಿದವನು. ಗಣಧರರಾದರೋ ಅವರ ಬೋಧೆಯನ್ನು ಅರ್ಥೈಸಿ, ಪ್ರಚುರಗೊಳಿಸಿದ ಗುರುಗಳು.

ಕಾವ್ಯದುದ್ದಕ್ಕೂ ಬೋಧಪ್ರದವಾದ ಮಾನವೀಯ ಮೌಲ್ಯಗಳು ಪ್ರತಿಪಾದಿತವಾಗಿ ಕಾವ್ಯಧರ್ಮದೊಂದಿಗೆ ಧರ್ಮವನ್ನು ಮೇಳೈಸಿರುವ ಅಂಶ ಆದಿಪುರಾಣದಲ್ಲಿ ಸಹಜವಾಗಿ ಕಂಡುಬರುತ್ತದೆ. ಶೈಕ್ಷಣಿಕ ಕ್ಷೇತ್ರದಲ್ಲಿ ಇಂದು ವಿಶೇಷವಾಗಿ ಪ್ರತಿಪಾದಿತವಾಗುತ್ತಿರುವ ಸಹಬಾಳ್ವೆ, ಅನುಕಂಪ, ಪರೋಪಕಾರ ಮೊದಲಾದ ಆದರ್ಶಯುತ ಜೀವನಶೈಲಿಯ ಪ್ರತಿಪಾದನೆಗೆ ಇಲ್ಲಿ ಉದಾಹರಣೆಗಳಿವೆ. ಅಣುವ್ರತಾದಿಗಳ ಪ್ರತಿಪಾದನೆಯು ಕೇವಲ ಪೌರಾಣಿಕ ಅಂಶಗಳಾಗದೆ ಸ್ವ-ಪರ ಹಿತಾಸಕ್ತಿಯ ಕೇಂದ್ರಬಿಂದುಗಳಂತೆ ಕಂಡುಬರುತ್ತವೆ.

ಒಟ್ಟಾರೆ, ಆದಿಪುರಾಣ ತನ್ನ ಕಥಾನಿರೂಪಣೆಯೊಂದಿಗೆ ಲೌಕಿಕ ಹಾಗೂ ಅಲೌಕಿಕ ವಿದ್ಯೆಗಳನ್ನು ನಿರೂಪಿಸುತ್ತ ಅನೇಕ ಶೈಕ್ಷಣಿಕ ವಿಷಯಗಳನ್ನು ಬಿತ್ತರಿಸುತ್ತದೆ.

ಡಾ|| ಸರಸ್ವತಿ ವಿಜಯಕುಮಾರ್
ಕನ್ನಡ ಉಪನ್ಯಾಸಕಿ
ರೀಜನಲ್ ಇನ್‌ಸ್ಟಿಟ್ಯೂಟ್ ಆಫ್ ಎಜುಕೇಷನ್
ಎನ್.ಸಿ.ಇ.ಆರ್.ಟಿ., ಮೈಸೂರು - ೫೭೦ ೦೦೬




'ಹೊಸತು' ಸಂಪಾದಕರಾದ ಡಾ|| ಜಿ. ರಾಮಕೃಷ್ಣ ಮತ್ತು ಸಹ ಸಂಪಾದಕರಾದ ಡಾ|| ಎನ್. ಗಾಯತ್ರಿ ಕಳೆದ ತಿಂಗಳು ಮಲೇಶಿಯಾ, ಕಾಂಬೋಡಿಯಾ ಹಾಗೂ ವಿಯೆತ್ನಾಂ ದೇಶಗಳಲ್ಲಿ ಪ್ರವಾಸ ಮಾಡಿ ಬಂದರು. ಮತ್ತೊಬ್ಬ ಸಹ ಸಂಪಾದಕರಾದ ಶ್ರೀ ಸಿ. ಆರ್. ಕೃಷ್ಣರಾವ್ ದಂಪತಿಗಳು ಚೀಣಾ ದೇಶದಲ್ಲಿ ಪ್ರವಾಸ ಮಾಡಿದರು. ಇದೇ ನವೆಂಬರ್ ೩ರಂದು ಇವರು 'ಹೊಸತು' ಓದುಗರೊಂದಿಗೆ ತಮ್ಮ ಪ್ರವಾಸದ ಅನುಭವಗಳನ್ನು ಹಂಚಿಕೊಂಡರು. ಚಿತ್ರದಲ್ಲಿ ಎಡದಿಂದ ಬಲಕ್ಕೆ ಡಾ|| ಜಿ. ರಾಮಕೃಷ್ಣ, ಶ್ರೀ ಸಿ. ಆರ್. ಕೃಷ್ಣರಾವ್ ಮತ್ತು ಡಾ|| ಎನ್. ಗಾಯತ್ರಿ.




ಆಧುನಿಕ ಕನ್ನಡ ಸಾಹಿತ್ಯದಲ್ಲಿ ದಲಿತರ ನೋವನ್ನು ದಾರುಣವಾಗಿ ಚಿತ್ರಿಸುವ ಮುಖೇನ 'ದಲಿತಕವಿ' ಎಂದೇ ಹೆಸರಾದವರು ಡಾ|| ಸಿದ್ಧಲಿಂಗಯ್ಯನವರು. ದಲಿತರ ನೋವನ್ನು ಕಾವ್ಯದ ವಸ್ತುವಾಗಿಸಿಕೊಂಡ ಈ ಕವಿ ಕನ್ನಡ ಕಾವ್ಯ ಜಗತ್ತಿಗೆ ಒಂದು ಹೊಸ ಧ್ವನಿಯನ್ನು ಕೊಟ್ಟಿದ್ದಾರೆ. ಹಾಗೆ ನೋಡಿದರೆ ಡಾ|| ಸಿದ್ಧಲಿಂಗಯ್ಯನವರಿಗಿಂತಲೂ ಹಿಂದೆ ದಲಿತರ ನೋವಿನ ಸಂಗತಿಯನ್ನು ಕುರಿತು ಕುವೆಂಪು, ಬೇಂದ್ರೆಯಂತಹ ಮಹತ್ವದ ಕವಿಗಳು ಬರೆದಿದ್ದಾರೆ. ಆದರೆ ಅವರ ಕಾವ್ಯಗಳಲ್ಲಿ ದಲಿತರ ನೋವಿನ ಸಂಗತಿಯು ಕನಿಕರ ಹುಟ್ಟಿಸುವಂತೆ ಇದೆ. ಕನಿಕರ ಹುಟ್ಟಿಸುವಂತಹ ಕಾವ್ಯಗಳಿಂದ ಏನೂ ಪ್ರಯೋಜನವಿಲ್ಲವೆಂದು ಮನಗಂಡ ಸಿದ್ಧಲಿಂಗಯ್ಯನವರು ಅವರ ಕಾವ್ಯದಲ್ಲಿ ದಲಿತರ ನೋವನ್ನು ಕನಿಕರ ಹುಟ್ಟಿಸುವಂತೆ ಚಿತ್ರಿಸದೆ ಸಿಟ್ಟು, ಆಕ್ರೋಶ ಹುಟ್ಟುವಂತೆ ಬರೆದಿದ್ದಾರೆ. ಪ್ರಸ್ತುತ ಸಂದರ್ಭದಲ್ಲಿ ಕನಿಕರ ಹುಟ್ಟಿಸುವುದರಿಂದ ಏನೂ ಆಗುವುದಿಲ್ಲ. ನೋವು ರಕ್ತ ಸಂಚಲನವಾಗಿ ಕುದಿಯಬೇಕು. ಕೆಂಡದ ಮಳೆಯಾಗಿ ಸುರಿಯಬೇಕು. ಅಂಥ ಸಂಗತಿಗಳು ಅನಿವಾರ್ಯವಾಗಿದೆ ಈಗ. ಈ ಎಲ್ಲಾ ಕಾರಣಗಳಿಂದ ಶೋಷಣೆಯನ್ನು ಸುಡುವ ಜ್ವಾಲೆಯನ್ನು ಕಾವ್ಯದ ಮೂಲಕ ಹುಟ್ಟುಹಾಕಿದ ಈ ಕವಿ, ನಾಟಕಕಾರರಾಗಿ ಇನ್ನೊಂದು ರೀತಿಯ ಪ್ರಗತಿಗೆ ಮುಂದಾಗಿರುವುದು ಕಂಡುಬರುತ್ತದೆ.

ಶೋಷಣೆಯನ್ನು ತೊಲಗಿಸಬೇಕಾದರೆ ಸಮಕಾಲೀನ ಜಗತ್ತಿನ ಶೋಷಣೆಯನ್ನು ಸರಿಪಡಿಸಿದ ಮಾತ್ರಕ್ಕೆ ಸಾಧ್ಯವಾಗುವುದಿಲ್ಲ. ಶೋಷಣೆಯ ಮೂಲವನ್ನು ಸರಿಪಡಿಸಬೇಕು ಎಂದು ಯೋಚಿಸಿ, ಶೋಷಣೆಯ ಮೂಲ ಪುರಾಣದಲ್ಲಿ ಹುಟ್ಟಿಕೊಂಡಿದೆ; ಹಾಗಾಗಿ ಪುರಾಣದಲ್ಲಿ ಕಂಡುಬರುವ ಶೋಷಣೆಯನ್ನು ಸರಿಪಡಿಸಿದರೆ ಶೋಷಣೆಯ ಹುಟ್ಟನ್ನು ಅಡಗಿಸಬಹುದು ಎಂದು ಯೋಚಿಸಿ ಡಾ|| ಸಿದ್ಧಲಿಂಗಯ್ಯ ಅವರು 'ಏಕಲವ್ಯ' ನಾಟಕ ಬರೆದಿರುವಂತೆ ಕಾಣುತ್ತದೆ.

ಪುರಾಣದಲ್ಲಿ ಬರುವ ಏಕಲವ್ಯ ತನ್ನ ಶಕ್ತಿಯ ಕೇಂದ್ರ ಬಿಂದು ಬಲಗೈ ಹೆಬ್ಬೆರಳನ್ನು ಕಳೆದುಕೊಂಡು, ಶಕ್ತಿಗುಂದಿ ಮೂಲೆಗುಂಪಾಗುತ್ತಾನೆ. ಕೊನೆಗೆ ಏನೂ ಮಾಡಲು ಸಾಧ್ಯವಾಗದೆ ಶೋಷಣೆಗೆ ಗುರಿಯಾಗಿ ಹೆಸರೇ ಇಲ್ಲದ ವ್ಯಕ್ತಿಯಾಗಿಹೋಗುತ್ತಾನೆ. ಹಾಗೆ ನೋಡಿದರೆ ಪುರಾಣದಲ್ಲಿ ಬರುವ ಅನೇಕ ಶೋಷಿತರು ಹೀಗೆಯೇ ಕಾಣೆಯಾಗಿರುವುದು. ಪುರಾಣಗಳನ್ನು ಅವಲಂಬಿ

# ಏಕಲವ್ಯ ಒಂದು ನೋಟ



ಸುತ್ತಲೆ ಬಂದ ಈ ಸಮಾಜ ಇಂದು ಕೂಡ ಶೋಷಿತರನ್ನು ಹಾಗೆಯೇ ನಡೆಸಿಕೊಳ್ಳುತ್ತಿದೆ. ಹಾಗಾಗಿ ಪುರಾಣವನ್ನು ಬದಲಾಯಿಸಿದರೆ ಶೋಷಣೆಯನ್ನು ತೊಲಗಿಸಬಹುದು ಎಂದು ಯೋಚಿಸಿದ ಸಿದ್ಧಲಿಂಗಯ್ಯನವರು ಪುರಾಣದ ಏಕಲವ್ಯನಲ್ಲಿ ಕೆಲವೊಂದು ಮಾರ್ಪಾಡುಗಳನ್ನು ತಂದು ಪರಿಸ್ಥಿತಿಯನ್ನು ಅರಿಯುವ ಪ್ರಜ್ಞಾನಶೀಲನನ್ನಾಗಿಸಿದ್ದಾರೆ. ಬಲಗೈ ಹೆಬ್ಬೆರಳು ಹೋದದ್ದಕ್ಕೆ ಚಿಂತೆ ಮಾಡದೆ ಬಲಗೈ ಹೆಬ್ಬೆರಳಿನಿಂದ ಮಾಡುವ ಸಾಧನೆಯನ್ನು ಎಡಗೈ ಹೆಬ್ಬೆರಳಿನಲ್ಲಿ ಮಾಡುತ್ತಾನೆ. ಸಾಧನೆಯ ಶೂರನಾಗಿ ಹೊಸ ಮನುಷ್ಯನಾಗಿ ಕಂಡುಬರುತ್ತಾನೆ. ಮುಖ್ಯವಾಗಿ ಶೋಷಣೆ ತೊಲಗಿಸಬೇಕಾದರೆ ಪುರಾಣದಲ್ಲಿ ಇರುವ ಶೋಷಣೆ ಮೊದಲು ಸರಿಯಾಗಬೇಕು ಎಂಬುದೆ ಡಾ|| ಸಿದ್ಧಲಿಂಗಯ್ಯ ಅವರ ಈ ಒಟ್ಟು ನಿಲುವಿಗೆ ಕಾರಣ ಆಗಿರುವಂತೆ 'ಏಕಲವ್ಯ'ದ ಆಶಯವಾಗಿದೆ.

ನಾಟಕದ ಆರಂಭದಲ್ಲಿಯೇ ಏಕಲವ್ಯನ ಬದುಕು ಸಂಘರ್ಷಕ್ಕೆ ಒಳಗಾಗಿರುವುದನ್ನು ಹಾಡುಗಾರರು ಹೇಳುತ್ತಾರೆ :

*ಹಾಸ್ಯದ ಹೊನಲಲ್ಲ ಶೃಂಗಾರದ ಮಡುವಲ್ಲ*
*ಸಂಘರ್ಷದ ಕಥೆ ಬಂಧುಗಳೆ*
*ಅಡವಿಯ ಬಾಲಸು ಘನ ಏಕಲವ್ಯನು*
*ಹೋರಾಟ ಮಾಡಿದ ಕಥೆಯ ಕೇಳಿ*
*ಕಾಡಿನ ಹೂವೊಂದು ಊರಿನ ಗುಡಿಯಲ್ಲಿ*
*ಪೂಜೆ ಸಲ್ಲದೆ ಹೋಯಿತಲ್ಲ*
*ಮೇಲು ಕೀಳಿನ ಜಾಲ ಜಗವೆಲ್ಲ ಆವರಿಸಿ*
*ತನ್ನಾಟ ಆಡಿದ ಕಥೆಯ ಕೇಳಿ.*

ಲೇಖಕರು
**ಡಾ|| ಸಿದ್ಧಲಿಂಗಯ್ಯ**
**ಪುಟಗಳು : ೬೪** **ಬೆಲೆ : ರೂ. ೪೦**
ಪ್ರಕಾಶಕರು
**ಅಂಕಿತ ಪುಸ್ತಕ,** ೫೩, ಶ್ಯಾಮ್‌ಸಿಂಗ್ ಕಾಂಪ್ಲೆಕ್ಸ್
ಗಾಂಧಿಬಜಾರ್ ಮುಖ್ಯರಸ್ತೆ, ಬಸವನಗುಡಿ, ಬೆಂಗಳೂರು-೪

ಇಡೀ ಈ ಪದ್ಯ 'ಏಕಲವ್ಯ' ನಾಟಕದ ಚಿತ್ರಣವನ್ನು ವ್ಯಕ್ತಪಡಿಸುತ್ತದೆ. ಏಕಲವ್ಯನು ಮೇಲು-ಕೀಳು ಎಂಬ ಜಾತಿಗಳ ಸಂಘರ್ಷದಲ್ಲಿ ಹೋರಾಟ ಮಾಡಿ ನೆಲೆ ಕಂಡುಕೊಳ್ಳಲು ತನ್ನ ಶಕ್ತಿಯನ್ನೇ ನಂಬಿ ಬೆಳೆಯುತ್ತಾನೆ. ಯಾವ ಆಸೆ-ಆಕಾಂಕ್ಷೆಗಳಿಗೆ ಒಳಗಾಗದೆ, ಪ್ರತೀಕಾರ ತೀರಿಸಿಕೊಳ್ಳಲು ಬೇರೆಯವರ ಆಟದ ವಸ್ತುವಾಗದೆ ಸ್ವತಂತ್ರವಾಗಿ ನಿಲ್ಲುತ್ತಾನೆ. ಸಮಾಜದಲ್ಲಿ ತನ್ನದೇ ಆದ ಸ್ಥಾನಮಾನವನ್ನು ಕಂಡುಕೊಳ್ಳಲು ಮುಂದಾಗುತ್ತಾನೆ. ಹಾಗೆ ನೋಡಿದರೆ ಶೋಷಣೆಗೆ ಗುರಿಯಾದವರು ಪ್ರಜ್ಞಾಶೀಲರಾಗಬೇಕು, ಸ್ವತಂತ್ರವಾಗಿ ನಿಲ್ಲಬೇಕು ಎಂಬುದೇ ಇಡೀ ನಾಟಕದ ಆಶಯವಾಗಿದೆ.

ಕಾಡಿನ ಪ್ರಾಣಿಗಳ ರಕ್ಷಣೆಗೆಂದು ಏಕಲವ್ಯ ಬಿಲ್ವಿದ್ಯೆ ಕಲಿಯಲು ದ್ರೋಣಾಚಾರ್ಯರ ಬಳಿ ಹೋಗುತ್ತಾನೆ. ಆದರೆ ವರ್ಣಾಶ್ರಮ ಧರ್ಮದ ಕಟ್ಟುಪಾಡುಗಳಿಗೆ ಒಳಗಾಗಿ ದ್ರೋಣಾಚಾರ್ಯರು ಏಕಲವ್ಯನಿಗೆ ವಿದ್ಯೆ ಕಲಿಸಲು ಒಪ್ಪುವುದಿಲ್ಲ. ಇದರಿಂದ ಧೃತಿಗೆಡದ ಏಕಲವ್ಯ ಕಾಡಿಗೆ ಹಿಂದಿರುಗಿ ಮಣ್ಣಿನಿಂದ ದ್ರೋಣಾಚಾರ್ಯರ ಮೂರ್ತಿಯನ್ನು ನಿರ್ಮಿಸಿಕೊಂಡು ಅದನ್ನೇ ಗುರುವಿನ ಶಕ್ತಿ-ಸಾಮರ್ಥ್ಯ, ಪರಿಣತೆಗಳ ಪ್ರತೀಕ ಎಂದು ಭಾವಿಸಿ, ಅದರ ಸಮ್ಮುಖದಲ್ಲಿ ಬಿಲ್ವಿದ್ಯೆ ಕಲಿಯಲು ತೊಡಗಿ ಯಶಸ್ಸನ್ನು ಗಳಿಸುತ್ತಾನೆ. 'ಶಬ್ದವೇಧಿ'ಯಂಥ ಘನವಾದ ವಿದ್ಯೆಯನ್ನು ಕಲಿಯುತ್ತಾನೆ. ಒಮ್ಮೆ ಕಾಡಿಗೆ ಬಂದ ದ್ರೋಣಾಚಾರ್ಯ ಮತ್ತು ಅರ್ಜುನ ಇಬ್ಬರೂ ಏಕಲವ್ಯನ ಶಬ್ದವೇಧಿ ವಿದ್ಯೆ ಕಂಡು ಈ ವಿದ್ಯೆಯನ್ನು ಬಲ್ಲವನು ಕಾಡಿನಲ್ಲಿರುವುದು ಸೋಜಿಗ ಎಂದು ಆಶ್ಚರ್ಯಪಡುತ್ತಾರೆ. ಅರ್ಜುನನೇ – 'ನಮ್ಮಂಥ ರಾಜಕುಮಾರರಿಗೆ ಗೊತ್ತಿರದ ಈ ವಿದ್ಯೆಯನ್ನು ನೀನು ಕಲಿತದ್ದು ಹೇಗೆ ? ನಿನ್ನ ಗುರುಗಳಾರು ?' ಎಂದು ಕೇಳಿದ್ದಕ್ಕೆ ಏಕಲವ್ಯ 'ದ್ರೋಣಾಚಾರ್ಯರೇ ನನ್ನ ಗುರುಗಳು' ಎಂದು ಹೇಳುತ್ತಾನೆ. ಇದನ್ನು ಕೇಳಿದ ಅರ್ಜುನ ದ್ರೋಣಾಚಾರ್ಯರ ಮೇಲೆ ಕೋಪಿಸಿಕೊಂಡದ್ದಕ್ಕೆ ದ್ರೋಣಾಚಾರ್ಯ ಏಕಲವ್ಯನಿಂದ ಬಲಗೈ ಹೆಬ್ಬೆರಳನ್ನು ಗುರುಕಾಣಿಕೆಯಾಗಿ ಪಡೆಯುತ್ತಾನೆ.

ಇದು ಪುರಾಣದ ಕತೆ. ಈ ಕತೆ ಸಿದ್ಧಲಿಂಗಯ್ಯನವರ ಏಕಲವ್ಯದಲ್ಲಿ ಇನ್ನೊಂದು ಚಿಂತನೆಗೆ ಕಾರಣವಾಗುತ್ತದೆ. ಬಲಗೈ ಹೆಬ್ಬೆರಳನ್ನು ಕಳೆದುಕೊಂಡ ಏಕಲವ್ಯ ಎಡಗೈ ಹೆಬ್ಬೆರಳಿನಿಂದ ಬಾಣ ಬಿಡುವುದನ್ನು ಕಲಿಯುತ್ತಾನೆ. ಮತ್ತೆ ಜಗತ್ತನ್ನೇ ನಡುಗಿಸುವ ಶೂರನಾಗಿ ಬೆಳೆಯುತ್ತಾನೆ. ಅಷ್ಟು ಹೊತ್ತಿಗೆ ಕುರುಕ್ಷೇತ್ರಯುದ್ಧ ಆರಂಭಗೊಳ್ಳುತ್ತದೆ. ಆಗ ಕೌರವರು-ಪಾಂಡವರಿಬ್ಬರೂ ಏಕಲವ್ಯನನ್ನು ತಮ್ಮ ತಮ್ಮ ಪಕ್ಷಕ್ಕೆ ಸೇರಿಸಿಕೊಳ್ಳಲು ಪ್ರಯತ್ನಿಸುತ್ತಾರೆ. ಆ ಸಂದರ್ಭದಲ್ಲಿ ಏಕಲವ್ಯ ಅರ್ಜುನನ ಮೇಲಿದ್ದ ಸಿಟ್ಟನ್ನು ತೀರಿಸಿಕೊಳ್ಳಲು ದುರ್ಯೋಧನನ ಕಡೆ ಹೋಗಬಹುದಿತ್ತು. ಹಾಗೆ ನೋಡಿದರೆ ಮಹಾಭಾರತದಲ್ಲಿ ಬರುವ ಏಕಲವ್ಯ ದುರ್ಯೋಧನನ ಕಡೆ ಸೇರಿಕೊಂಡು ಪಾಂಡವರ ವಿರುದ್ಧ ಹೋರಾಟ ಮಾಡಿ ಸಾಯುತ್ತಾನೆ. ಆದರೆ ಸಿದ್ಧಲಿಂಗಯ್ಯನವರ 'ಏಕಲವ್ಯ' ದುರ್ಯೋಧನನ ಪಕ್ಷ ಸೇರದೆ ಸ್ವತಂತ್ರವಾಗಿ ನಿಲ್ಲುತ್ತಾನೆ, ಶತಶತಮಾನಗಳಿಂದ ತುಳಿತಕ್ಕೊಳಗಾದವರ ಬದುಕಿಗೆ ಹೊಸ ಬೆಳಕಾಗಿ ನಿಲ್ಲುತ್ತಾನೆ, ಹೊಸ ಭರವಸೆಯನ್ನು ಸೃಷ್ಟಿಸಿ ಎಲ್ಲರಂತೆ ಸಮಾನವಾಗಿ ಬದುಕಬೇಕೆಂಬ ಆಶಯ ವ್ಯಕ್ತಪಡಿಸುತ್ತಾನೆ. ಇದು ಸಂಪೂರ್ಣವಾಗಿ ದಲಿತ ಶೋಷಣೆಯನ್ನು ತಪ್ಪಿಸಲು ಪುರಾಣದ ಕತೆಯನ್ನೇ ತಿದ್ದಿ ನೋಡುವ ಕ್ರಮ. ಏಕೆಂದರೆ ಪುರಾಣದ ಕತೆಗಳಿಂದಲೂ ದಲಿತರು ಶೋಷಣೆಗೆ ಗುರಿಯಾಗಿದ್ದಾರೆ. ಹಾಗಾಗಿ ಪುರಾಣದ ಕತೆಯಲ್ಲಿ ಬರುವ ದಲಿತರು ಶೋಷಣೆಯಿಂದ ಮುಕ್ತಿ ಪಡೆದವರಾದರೆ ಸಮಕಾಲೀನ ಜಗತ್ತಿನಲ್ಲಿ ಸಮಾನತೆಯ ಹೂವು ಅರಳಿಸಲು ಸಾಧ್ಯ ಎನ್ನುವಂತಿದೆ 'ಏಕಲವ್ಯ' ನಾಟಕದ ಆಶಯ. ನಾಟಕದ ಕೊನೆಯಲ್ಲಿ ಏಕಲವ್ಯನ ಮಾತೊಂದು ಹೀಗಿದೆ – 'ಎಲ್ಲೆಲ್ಲೂ ಇರುವ ಅನ್ಯಾಯದ ವಿರುದ್ಧ, ಜ್ಞಾನದ ಗುತ್ತಿಗೆಯನ್ನು ಎತ್ತಿ ಹಿಡಿಯುವ ಶಾಸ್ತ್ರಗಳ ವಿರುದ್ಧ ನನ್ನ ಯುದ್ಧ. ಮೇಲು-ಕೀಳೆಂಬ ವಂಚನೆಯನ್ನು ಅಳಿಸಲು ನನ್ನ ಸಮರ. ಉಳ್ಳವರ ನಡುವಿನ ಕಚ್ಚಾಟವಾಗಿರುವ ಕುರುಕ್ಷೇತ್ರದಲ್ಲಿ ನನ್ನದು ಇಲ್ಲದವರ ಪರವಾಗಿ ಹೋರಾಟ'. ಮಾತುಗಳು ಸಿದ್ಧಲಿಂಗಯ್ಯನವರ ಹೊಸಕಾಲದ ದೃಷ್ಟಿ-ಧೋರಣೆಗಳನ್ನು ವ್ಯಕ್ತಪಡಿಸುತ್ತದೆ.

**ಡಾ|| ಎಸ್. ಶಿವಣ್ಣ**
೧೬. ಸುರಾನ ಕಾಲೇಜು, ಸೌತ್ ಎಂಡ್ ರಸ್ತೆ, ಬೆಂಗಳೂರು - ೦೪

# 'ಅನುಭಾವಿ' ಲಲ್ಲ 'ವಿರಾಗಿಣಿ'

ಲಲ್ಲೇಶ್ವರಿ ಸಾವಿನ ಬಗ್ಗೆ ಅವಳ ಜನ್ಮದ ಬಗ್ಗೆ ಇರುವಂತೆ ನಿಖರವಾದ ಅಭಿಪ್ರಾಯವಿಲ್ಲ, ದಂತಕಥೆಗಳಿವೆ. ಅವಳು ಇದ್ದಕ್ಕಿದ್ದಂತೆ ಮಾಯವಾದಳು ಎನ್ನುತ್ತಾರೆ. ಶ್ರೀನಗರದಿಂದ ೨೮ ಮೈಲಿ ದೂರದಲ್ಲಿರುವ ವೆಜಿಬ್ರಾರ್ ಎಂಬಲ್ಲಿ ಜುಮ್ಮಾ ಮಸೀದಿಯ ಗೋಡೆಯ ಹಿಂದೆ ಅವಳ ಶರೀರದಿಂದ ಜ್ಯೋತಿಯೊಂದು ಹೊರಬಂದು ಮಾಯವಾಯಿತು ಎನ್ನುತ್ತಾರೆ. ಕೆಲವರ ಪ್ರಕಾರ ಒಂದು ಅಗಲವಾದ ಮಡಕೆಯಲ್ಲಿ ಕೂತು, ಇನ್ನೊಂದು ಅಗಲವಾದ ಮಡಕೆಯನ್ನು ಮೇಲೆ ಹಾಕಿಕೊಂಡು ಕುಳಿತಳು. ಸ್ವಲ್ಪ ಹೊತ್ತಿನ ನಂತರ ತೆಗೆದು ನೋಡಿದಾಗ ಅದು ಖಾಲಿಯಾಗಿತ್ತು. ಅವಳ ದೇಹವೇ ಕಾಣೆಯಾಗಿತ್ತು. ಆದ್ದರಿಂದ ಅವಳನ್ನು ಸುಡುವುದಾಗಲಿ ಹೂಳುವುದಾಗಲಿ ಆಗಲಿಲ್ಲ. ಹೀಗೆ ಎಷ್ಟೋ ಐತಿಹ್ಯಗಳಿವೆ.

**ಸಂಗನಾಳಮಠ ಯು. ಎನ್.**



ಶೈವಧರ್ಮ ಅತಿ ಪುರಾತನವಾದ ಧರ್ಮ. ಶೈವಾಗಮಗಳ ತಂತ್ರದ, ಅನುಭಾವದ ಆಧಾರಗಳನ್ನು ಹೊಂದಿದ ಈ ಧರ್ಮವನ್ನು ಕ್ರಿಸ್ತಪೂರ್ವ ೩೦೦೦ ವರ್ಷಗಳಷ್ಟು ಪುರಾತನವಾದದ್ದೆಂದು ಸರ್ ಜಾನ್ ಮಾರ್ಶಲ್ ಅಭಿಪ್ರಾಯಪಡುತ್ತಾರೆ. ಶೈವಧರ್ಮದ ತವರುಮನೆ ಕಾಶ್ಮೀರ. ಅಲ್ಲಿ ಇಸ್ಲಾಂ ಧರ್ಮದ ಸೂಫಿಸಂತರು ಇದ್ದರು. ಈ ಸೂಫಿಸಂತರಲ್ಲಿ ಜನಾಬ್ ಮೀರ ಸೈಯದ್ ಅಲಿ ಹೆಸರುವಾಸಿ. ಇವರನ್ನು ಶಾಹ ಹಮ್ದಾನ್ ಎಂದೂ ಕರೆಯುತ್ತಿದ್ದರು. ಸೂಫಿಸಂತರು ಇಸ್ಲಾಂ ಧರ್ಮದ ಪ್ರಚಾರವನ್ನು ತಮ್ಮದೇ ಆದ ರೀತಿಯಲ್ಲಿ ಮಾಡುತ್ತಿದ್ದುದರಿಂದ ಶೈವಧರ್ಮಕ್ಕೆ ಒಂದು ಸವಾಲಾಯಿತು. ಈ ಎರಡು ಧರ್ಮಗಳ ನಡುವೆ ದ್ವೇಷ ಹೆಚ್ಚಬಹುದೆಂಬ ಭೀತಿ ಉಂಟಾಯಿತು. ಈ ಹಿನ್ನೆಲೆಯಲ್ಲಿ ಒಬ್ಬ ಯೋಗಿನಿ ಶೈವಧರ್ಮದ ಗುರಿಯನ್ನು ಅನುಸರಿಸಿ ತಾನು ಯಾರೆಂಬುದನ್ನು ಅರಿತು ತಾನೇ ಪರಾತತ್ತ್ವವಾಗಿ ಪರಿಣಮಿಸಿದಳು. ಈಕೆಯನ್ನು ಲಲ್ಲ, ಲಲ್ಲೇಶ್ವರಿ, ಲಲ್ಲಯೋಗಿನಿ, ಲಲ್ಲ ಅರೀಫ, ಲಾಲ್‌ಡೇಡ್ ಎಂದು ಕರೆಯುತ್ತಾರೆ. ಹೆಚ್ಚು ಜನಪ್ರಿಯ ಎಂದರೆ ಲಲ್ಲ ಅಥವಾ ಲಲ್ಲೇಶ್ವರಿ.

ಲಲ್ಲೇಶ್ವರಿಯ ಪೂರ್ವ ವೃತ್ತಾಂತದ ಬಗ್ಗೆ ಅಧಿಕೃತ ದಾಖಲೆಗಳಿಲ್ಲ. ಆಕೆಯ ಕಾಲದ ಬಗ್ಗೆ ನಿಖರತೆ ಇಲ್ಲ. ಆಕೆ ಕ್ರಿ. ಶ. ೧೩೦೦-೧೩೨೦ರ ಅವಧಿಯಲ್ಲಿ ಜನಿಸಿರಬಹುದು ಎಂಬುದು ಸಂಶೋಧಕರ ಅಭಿಮತ. ಅಂದರೆ ಆಕೆ ಅಕ್ಕಮಹಾದೇವಿಯ ನಂತರದ ಕಾಲದವಳು. ಕಾಶ್ಮೀರದ ಶೈವಬ್ರಾಹ್ಮಣ ಕುಟುಂಬದಲ್ಲಿ, ಶ್ರೀನಗರದಿಂದ ೬ ಮೈಲು ದೂರದ ಪಂಡ್ರೆಸ್ತಾನ್ ಪುರಾಣಾಧಿಷ್ಠಾನ ಅಥವಾ ಸೆಂಪೂರ್ ಎಂಬ ಹಳ್ಳಿಯಲ್ಲಿ ಜನಿಸಿದಳು. ಅವಳು ಹುಟ್ಟಿದ ಮನೆ ಶೈವಪಂಡಿತರದಾಗಿತ್ತು. ಲಲ್ಲೇಶ್ವರಿ ಬಾಲ್ಯದಲ್ಲಿ ಮನೆಯಲ್ಲಿ ಮತ್ತು ಊರಲ್ಲಿಯ ಪಂಡಿತರ ಮನೆಗಳಲ್ಲಿ ಶಿಕ್ಷಣವನ್ನು ಹೊಂದಿರಬಹುದು ಎಂದು ಊಹಿಸಬಹುದು. ಆಗಿನ ಕಾಲದ ಬಾಲ್ಯವಿವಾಹ ಸಂಪ್ರದಾಯದ ಪ್ರಕಾರ ಸಾಂಪೋರದ (ಸಂಸಾಪುರ ಅಥವಾ ಪದ್ಮಪುರ) ಶೈವಪಂಡಿತನ ಮಗನಾದ ನಿತಾಭಟ್ಟನೊಂದಿಗೆ ವಿವಾಹ ಆಯಿತು. ಮಾವ ಅವಳನ್ನು ಪದ್ಮಾವತಿ (ಪದ್ಮನ್ ಡೇಡ್) ಎಂದು ಕರೆದನು. ಮಾವ ಲಲ್ಲಳ ಬುದ್ಧಿ, ಆಚಾರ, ವಿಚಾರ, ಗುಣಗಳಿಗೆ ಮಾರುಹೋಗಿದ್ದರೆ ಅತ್ತೆ (ಗಂಡನ ಮಲತಾಯಿ) ಸೊಸೆಗೆ ಕಿರುಕುಳ ಕೊಡುತ್ತಿದ್ದಳು. ಸಹನಶೀಲೆಯಾದ ಲಲ್ಲ ಆ ಬಗ್ಗೆ ಎಂದೂ ದೂರಲಿಲ್ಲ. ಅತ್ತೆ ಹೊಟ್ಟೆ ತುಂಬ ಊಟ ಕೊಡುತ್ತಿರಲಿಲ್ಲ. ಹಬ್ಬ ಬಂದರೆ ತಟ್ಟೆಯಲ್ಲಿ ಚಪ್ಪಡಿ ಕಲ್ಲನ್ನಿಟ್ಟು ಅದರ ಮೇಲೆ ಸ್ವಲ್ಪ ಅನ್ನ ಹಾಕಿ, ನೋಡುವವರಿಗೆ ತಟ್ಟೆ ತುಂಬಾ ಬಡಿಸಿದಂತೆ ಕಾಣುವ ಹಾಗೆ ಮಾಡುತ್ತಿದ್ದಳಂತೆ !

ಒಮ್ಮೆ ಮನೆಯಲ್ಲಿ ಧಾರ್ಮಿಕ ಸಮಾರಂಭ ನಡೆಯುತ್ತಿತ್ತು. ಲಲ್ಲೇಶ್ವರಿ ಸಾಕಷ್ಟು ಪಾತ್ರೆಗಳನ್ನು ತೆಗೆದುಕೊಂಡು ಹೊಳೆಗೆ ಬಂದಳು. ಆಗ ಓರ್ವ ಮಹಿಳೆ ಕೇಳಿದಳು, ''ಇಂದು ಮನೆಯಲ್ಲಿ ಮೃಷ್ಟಾನ್ನ ಭೋಜನವಾಗಿರಬೇಕು ಅಲ್ಲವೆ ?'' ಎಂದು. ''ಮನೆಯಲ್ಲಿ ಏನೇ ವಿಶೇಷ ಮಾಡಲಿ ನನಗೆ ಮಾತ್ರ ಕಲ್ಲು'' ಎಂದಳು ಲಲ್ಲ. ಈ ಮಾತನ್ನು ಮಾವ ಕೇಳಿಸಿಕೊಂಡು ಕೂಡಲೆ ಮನೆಗೆ ಹೋಗಿ ಹೆಂಡತಿಯನ್ನು ವಿಚಾರಿಸಿ ದಂಡಿಸಿದ. ಸೊಸೆ ಮಾವನ ಎದುರಿಗೆ ಹೇಳಿದ್ದಾಳೆಂದು ತಿಳಿದು ಅತ್ತೆ ಮತ್ತಷ್ಟು ಕಠೋರಳಾದಳು ಮತ್ತು ಮಗನಿಗೂ ಲಲ್ಲಳ ಬಗ್ಗೆ ಅಲ್ಲಸಲ್ಲದ ಮಾತುಗಳನ್ನು ಹೇಳಿದಳು. ಇದರಿಂದ ಲಲ್ಲಳ ಜೀವನ ಮತ್ತೂ ದುರ್ಭರವಾಯಿತು.

ಲಲ್ಲೇಶ್ವರಿ ಕ್ರಮೇಣ ಅಧ್ಯಾತ್ಮದತ್ತ ಹೊರಟಳು. ಆ ಕಾಲದಲ್ಲಿ ಕಾಶ್ಮೀರದಲ್ಲಿ ಶೈವ ಧರ್ಮದ ಯೋಗಿಗಳಾದ ಸಿದ್ಧ ಶ್ರೀಕಂಠರು ಲಲ್ಲಳನ್ನು ಬಾಲ್ಯದಿಂದಲೂ ನೋಡಿ ಅವಳ ಧೀಮಂತಿಕೆಯನ್ನು ಗುರುತಿಸಿದ್ದರು. ಲಲ್ಲಳು ಉನ್ಮತ್ತಳಾಗಿ ಶಿವನನ್ನು ಅರಸುತ್ತಾ, ಸ್ತುತಿಸುತ್ತಾ, ಕುಣಿಯುತ್ತಾ ಮನೆ ಬಿಟ್ಟು ಹೊರಟಳು, ಎಲ್ಲ ಬಂಧನಗಳಿಂದ ಮುಕ್ತಳಾಗಿ, ಶರೀರದ ಮೇಲಿನ ಬಂಧನಕ್ಕೆ ಕಾರಣವಾದ ಉಡುಪುಗಳನ್ನು ಸಹ ಕಿತ್ತೆಸೆದು ಸಂಪೂರ್ಣ ನಗ್ನಳಾಗಿ ವಿರಾಗಿಯಾಗಿ ಹೊರಟಳು. ಅವಳ ತನು-ಮನ ಬೆತ್ತಲೆಯಾಗಿತ್ತು. ಗುರುವನ್ನು ಮೀರಿ ಯೋಗ ಸಾಧನೆ ಮಾಡಿದಳು.

ಅವಳ ಆರಾಧ್ಯ ದೈವ ಪರಶಿವನೇ ಸಂಗಾತಿ. ಈಗ ಆಕೆ ಲಲ್ಲಮಾತೆ, ಲಲ್ಲ ಯೋಗೀಶ್ವರಿ, ಲಲ್ಲವೀವ. ಕಾಶ್ಮೀರದ ಎಲ್ಲ ಪ್ರಕೃತಿ ಗಿಡ-ಮರ, ಪ್ರಾಣಿ-ಪಕ್ಷಿಗಳಿಗೂ ಅವಳು ಸಂಗಾತಿಯಾದಳು. ಅನುಭಾವಿಗಳು, ಯೋಗಿಗಳು, ಸೂಫಿಸಂತರು ಅವಳ ದರ್ಶನಕ್ಕೆ ಕಾತುರರಾಗಿದ್ದರು. ಕಾಶ್ಮೀರದಾದ್ಯಂತ ಸಂಚರಿಸಿದಳು. ಅನುಭವ, ಅನುಭಾವ ಹೆಚ್ಚಿದಂತೆ ಕಾವ್ಯ ಪ್ರತಿಭೆ ಜಾಗೃತವಾಯಿತು. ಅವಳು ಅನುಭಾವಿ ಕವಯಿತ್ರಿಯಾದಳು.

ಕಾಶ್ಮೀರಿಗಳು ಲಲ್ಲಳನ್ನು ಲಲ್ಲದೀದ ಎಂದು ಕರೆಯುತ್ತಾರೆ. ಕಾಶ್ಮೀರಿ ಭಾಷೆಯಲ್ಲಿ ಲಲ್ಲ ಎಂದರೆ ಜೋಲುಬಿದ್ದ ಕಿಬ್ಬೊಟ್ಟೆ. ಈ ಜೋಲುಬಿದ್ದ ಚರ್ಮವೇ ಅವಳ ಮರ್ಮಾಂಗವನ್ನು ಮರೆ ಮಾಡಿತಂತೆ. ದೀದ ಎಂದರೆ ತಾಯಿ. ಹೀಗೆ ಲಲ್ಲ ಎಲ್ಲರಿಗೂ ತಾಯಿಯಾದಳು.

ಅವಳ ಸಾವಿನ ಬಗ್ಗೆ ಅವಳ ಜನ್ಮದ ಬಗ್ಗೆ ಇರುವಂತೆ ನಿಖರವಾದ ಅಭಿಪ್ರಾಯವಿಲ್ಲ. ದಂತಕಥೆಗಳಿವೆ. ಅವಳು ಇದ್ದಕ್ಕಿದ್ದಂತೆ ಮಾಯವಾದಳು ಎನ್ನುತ್ತಾರೆ. ಶ್ರೀನಗರದಿಂದ ೨೮ ಮೈಲಿ ದೂರದಲ್ಲಿರುವ ವೆಜಿಬ್ರಾರ್ ಎಂಬಲ್ಲಿ ಜುಮ್ಮಾ ಮಸೀದಿಯ ಗೋಡೆಯ ಹಿಂದೆ

ಅವಳ ಶರೀರದಿಂದ ಜ್ಯೋತಿಯೊಂದು ಹೊರಬಂದು ಮಾಯವಾಯಿತು ಎನ್ನುತ್ತಾರೆ. ಕೆಲವರ ಪ್ರಕಾರ ಒಂದು ಅಗಲವಾದ ಮಡಕೆಯಲ್ಲಿ ಕೂತು, ಇನ್ನೊಂದು ಅಗಲವಾದ ಮಡಕೆಯನ್ನು ಮೇಲೆ ಹಾಕಿಕೊಂಡು ಕುಳಿತಳು. ಸ್ವಲ್ಪ ಹೊತ್ತಿನ ನಂತರ ತೆಗೆದು ನೋಡಿದಾಗ ಅದು ಖಾಲಿಯಾಗಿತ್ತು. ಅವಳ ದೇಹವೇ ಕಾಣೆಯಾಗಿತ್ತು. ಆದ್ದರಿಂದ ಅವಳನ್ನು ಸುಡುವುದಾಗಲಿ ಹೂಳುವುದಾಗಲಿ ಆಗಲಿಲ್ಲ. ಹೀಗೆ ಎಷ್ಟೋ ಐತಿಹ್ಯಗಳಿವೆ.

ಲಲ್ಲ ಕಾಶ್ಮೀರ ಭಾಷೆಯಲ್ಲಿ ಸಾಹಿತ್ಯ ಕಾವ್ಯವನ್ನು ರಚಿಸಿದವರಲ್ಲಿ ಮೊದಲಿಗಳು. ಅನೇಕ ಕ್ಲಿಷ್ಟ ವಿಚಾರಗಳನ್ನು ಚಿಂತನೆಗಳನ್ನು ಕಾಶ್ಮೀರಿ ಆಡುಭಾಷೆಯಲ್ಲಿ ಸುಲಭವಾದ ರೀತಿಯಲ್ಲಿ ಹೇಳಿ ಜನಪ್ರಿಯವಾದಳು. ಕಾವ್ಯದ ತುಂಬಾ ಸಾಮಾನ್ಯ ಜನರ ಕಲ್ಯಾಣದ ಚಿಂತನೆ ತುಂಬಿರುವುದರಿಂದ ಅವು ಹೆಚ್ಚು ಜನಪ್ರಿಯವಾದವು.

ಲಲ್ಲಳ ವಚನಗಳನ್ನು ಕಾಶ್ಮೀರಿ ಭಾಷೆಯಲ್ಲಿ 'ವಾಕ್' ಎನ್ನುತ್ತಾರೆ. ವಾಕ್ ಅಥವಾ ವಾಖ್ ತಾತ್ವಿಕ ಚಿಂತನೆಗೆ ಮಾಧ್ಯಮವಾದ ಒಂದು ಕಾಶ್ಮೀರಿ ಕಾವ್ಯ ಪರಂಪರೆ. ವಾಖ್ ನಾಲ್ಕು ಸಾಲಿನ ಪ್ರಾಸಬದ್ಧ ರಚನೆ. ವಾಖ್‌ಗಳಲ್ಲಿ ನೀತಿ ಬೋಧನೆ ಇದೆ, ಆತ್ಮಶೋಧನೆಯ ಪ್ರಯತ್ನವೂ ಇದೆ. ಅಕ್ಕನ ವಚನಗಳು ಆಡುಭಾಷೆಯ ಕನ್ನಡದಲ್ಲಿದ್ದರೂ ಅಲ್ಲಿಯ ಉಪಮಾನ ಉಪಮೇಯಗಳಿಂದ ಕಾವ್ಯ ಸೌಂದರ್ಯ ಮತ್ತು ಭಾವ ತೀವ್ರತೆ ಹೇರಳವಾಗಿದೆ. ಲಲ್ಲ ವಾಖ್‌ಗಳಲ್ಲಿ ಈ ಅಂಶಗಳು ಅಷ್ಟಾಗಿ ಇಲ್ಲ. ಆದರೆ ಅಕ್ಕನಂತೆ ಲಲ್ಲಳ ವಾಖ್‌ಗಳಲ್ಲಿ ಆಶೆ-ಆಮಿಷಗಳನ್ನು ಮೀರಿದ ಸಕಲ ಚರಾಚರ ವಸ್ತುವಿನಲ್ಲಿ ಪರಮಾತ್ಮನನ್ನೇ ಕಾಣುವ ದೃಷ್ಟಿ ನಮಗೆ ಕಾಣುತ್ತದೆ. ಹಿಂದೂ ಮುಸಲ್ಮಾನರು ಇಬ್ಬರಿಗೂ ಹತ್ತಿರವಾದ ಲಲ್ಲೇಶ್ವರಿ ತನ್ನ ವಾಖ್‌ಗಳ ಮೂಲಕ ಸೂಫಿಸಂತರನ್ನು ಸಹ ಪ್ರಭಾವಿಸಿದಳು. ಸೂಫಿ ಭಕ್ತರು ಸೂಫಿಯಾನಾ ಕಲಮ್‌ಗಳಲ್ಲಿ ಲಲ್ಲವಾಖ್‌ಗಳನ್ನು ಹಾಡುತ್ತಾರೆ. ಲಲ್ಲ ಹಿಂದೂ ಸಂಪ್ರದಾಯಗಳಲ್ಲಿದ್ದ ಕುಂದುಕೊರತೆಗಳನ್ನು ವಿರೋಧಿಸಿ ಸಾಮಾಜಿಕವಾಗಿ ಬದಲಾವಣೆ ತರಲು ಪ್ರಯತ್ನಮಾಡಿದಳು. ಹಿಂದೂಗಳು ಅವಳನ್ನು ಲಲ್ಲ ಯೋಗೇಶ್ವರಿ ಎಂದೂ, ಮುಸ್ಲಿಮರು ಲಲ್ಲ-ಆರಿಫಾ (ಮಹಾತ್ಮಳು) ಎಂದೂ ಕರೆಯುತ್ತಾರೆ.

ಲಲ್ಲೇಶ್ವರಿಯ ವಾಖ್‌ಗಳು ಅನುಭಾವದ ಮಿಂಚಿನ ಗೊಂಚಲುಗಳಾಗಿವೆ. ಶಿವನನ್ನು ಸಾಕ್ಷಾತ್ಕಾರಗೊಳಿಸಬೇಕೆನ್ನುವ ಉತ್ಕಟ ಭಾವನೆ ಅವಳ ವಾಖ್‌ಗಳಲ್ಲಿ ಕಂಡುಬರುತ್ತದೆ. ಅವುಗಳಲ್ಲಿ ಒಂದು ಹೀಗಿದೆ:

*ನಾನವನ ಹುಡುಕುತ್ತ ದಣಿದು ಹೋದೆ*
*ಅವನನ್ನು ಕಾಣಲು ಶಕ್ತಿ ಮೀರಿ ಪ್ರಯತ್ನಿಸಿದೆ*
*ಪ್ರೀತಿ ತುಂಬಿದ ಭಕ್ತಿಯಿಂದ ಅವನೆಡೆ ನೋಡಿದೆ*
*ಅವನ ನೋಡುವ ಬಯಕೆ ನನಗಿನ್ನೂ ಹೆಚ್ಚಿದೆ.*

ಆತ್ಮ ಅವಿನಾಶಿ, ಚಿರಂತನ ಎನ್ನುವದಕ್ಕೆ ಅವಳ ಮಾತು ಹೀಗಿದೆ :

*ಈ ಹಿಂದೆಯೂ ನಾವೇ ಇದ್ದೆವು*
*ಭವಿಷ್ಯದಲ್ಲಿಯೂ ನಾವೇ ಇರುವೆವು*
*ಶಿವನಿಗೆ ಜೀವನ - ಸಾವಿನ ಚಕ್ರ ಇಲ್ಲ*
*ಸೂರ್ಯನಿಗೆ ಉದಯಾಸ್ತ ಮುಗಿಯಲಾರದು.*

ಹಿಂದೂ-ಮುಸ್ಲಿಂರ ಭಾವೈಕ್ಯತೆ ಬಗ್ಗೆ ಅವಳು ಹಾಡಿದ್ದು ಹೀಗಿದೆ :

*ಶಿವ ಸರ್ವಾಂತರ್ಯಾಮಿಯಾಗಿದ್ದಾನೆ*
*ಹಿಂದೂ - ಮುಸ್ಲಿಮರು ಬೇರೆ ಬೇರೆ ಅಲ್ಲ*
*ನೀನು ಬುದ್ಧಿವಂತನಾದರೆ ನಿನ್ನನ್ನು ನೀನರಿ*
*ಅದುವೆ ಶಿವನನ್ನು ಅರಿವ ಮಂತ್ರವಾಗುವದು.*

ಲಲ್ಲೇಶ್ವರಿಯ ಸಮಕಾಲೀನರೆಂದರೆ ಅವಳ ಗುರು ಶ್ರೀಕಂಠರು, ಜನಾಬ್ ಶಾಹ ಹಚ್ಚಾದ್, ಶೇಖ್ ಬಾಬಾ ನೂರುದ್ದೀನ್, ನಂದಯವೆ. ಒಂದು ಸಲ ನೂರುದ್ದೀನ್ ಮತ್ತು ನಂದಯವೆಯೊಡನೆ ಲಲ್ಲಳ ಸಂವಾದ ನಡೆದಾಗ ಲಲ್ಲಳೇ ಗೆದ್ದಳಂತೆ. ಅವಳ ಕೆಲವು ಸಮಕಾಲೀನರು ಲೌಕಿಕತೆಯ ಕಡೆಗೆ ಲಕ್ಷ್ಯವಹಿಸಿದರೆ ಲಲ್ಲ ಪಾರಮಾರ್ಥಿಕತೆಗೆ ಮುಖಮಾಡಿ –

*'ಭಕ್ತಿರಸವ ಮೀರಿದ ಪ್ರಕಾಶ ಯಾವದೂ ಇಲ್ಲ*
*ಪರಮ ಜ್ಞಾನದಂಥ ತೀರ್ಥ ಇನ್ನಾವದೂ ಇಲ್ಲ*
*ಪರಮಾತ್ಮನಂಥ ಬಂಧು ಯಾರೂ ಇಲ್ಲ*
*ಪರಮಾತ್ಮನ ಭಯಕ್ಕಿಂತ ಹಿರಿದಾದ ಸುಖ*
*ಯಾವದೂ ಇಲ್ಲ'*

ಎಂದಿದ್ದಾಳೆ. ಲಲ್ಲೇಶ್ವರಿ ಬಾಹ್ಯ ಆಚರಣೆಗಳಿಗೆ, ಡಂಭಾಚಾರಕ್ಕೆ ಮಹತ್ವ ಕೊಟ್ಟವಳಲ್ಲ. ಒಂದು ಸಲ ಗುರುಗಳು ನದಿಯಲ್ಲಿ ಸ್ನಾನ ಮಾಡುತ್ತಿದ್ದಾಗ ಲಲ್ಲೇಶ್ವರಿ ಬೇಕು ಎಂತಲೇ ಮಣ್ಣಿನ ಬಿಂದಿಗೆಯನ್ನು ಹೊರಭಾಗದಲ್ಲಿ ತಿಕ್ಕಿ ತಿಕ್ಕಿ ತೊಳೆಯುತ್ತಿದ್ದಳು. ಆದರೆ ಆ ಬಿಂದಿಗೆಯು ಒಳಭಾಗ ಕೊಳೆಯಾಗಿತ್ತು. ಆಗ ಗುರುಗಳು ಎಲ್ಲಿಯವರೆಗೆ ಈ ಬಿಂದಿಗೆ ಒಳಗಿನಿಂದ ಸ್ವಚ್ಛವಾಗುವುದಿಲ್ಲವೋ ಅಲ್ಲಿಯವರೆಗೆ ಹೊರಗಿನ ಬಿಂದಿಗೆ ಸ್ವಚ್ಛವಾಗುವದಿಲ್ಲ, ಎಂದಾಗ ಮೊದಲು ಅಂತರ್ಯದ ಪ್ರಾಣ ಮನೆ ಶುದ್ಧಿಗೊಳ್ಳಬೇಕಲ್ಲದೆ ಬಾಹ್ಯಾಡಂಬರದಿಂದ ಏನೂ ಸಾಧನೆಯಾಗುವುದಿಲ್ಲ ಎಂದಳಂತೆ.

ಓರ್ವ ಸೂಫಿಸಂತ ಲಲ್ಲೇಶ್ವರಿ ಬಗ್ಗೆ ಈ ರೀತಿ ಹೇಳುತ್ತಾನೆ :

*ಲಲ್ಲ ಪ್ರಾಣ ಹಾಗೂ ಆಕಾಶವ ಒಂದು ಗೂಡಿಸಿದ*
*ಮಹಿಮಾಶಾಲಿ.*

ಪಂಡಿತ ಪರಮಾನಂದ ಈ ರೀತಿ ಹೇಳುತ್ತಾರೆ :

*ದೈವೀ ಸೌಂದರ್ಯದಾರಾಧನೆಯಿಂದ 'ಶಬ್ದ'ದ*
*'ಓಂ'ಕಾರದ ನಿಜಸ್ವರೂಪವ ಅರಿತುಕೊಂಡಳು*
*ಆಕೆ ಪರಮನ ಸಕಲ ಕಲೆಗಳ ಅಳವಡಿಸಿಕೊಂಡು*
*ಅವನಿಂದ ತಾನು ಬೇರಿಲ್ಲದಿಪ್ಪಂತೆ ಒಂದಾದಳು.*

ಕೆಲವು ಲಲ್ಲ ವಾಖ್‌ಗಳನ್ನು ಸಂಗ್ರಹಿಸಿ ಇಲ್ಲಿ ಕೊಡಲಾಗಿದೆ :

* * *

*ತನ್ನಂತೆ ಪರರ ಬಗೆಯುವವನು*
*ಹಗಲು-ರಾತ್ರಿಗಳನ್ನು ಒಂದಾಗಿ ತಿಳಿಯುವವನು*
*ದ್ವಂದ್ವವಿಲ್ಲದ ಮನಸ್ಸು ತಾಳಿದವನು*
*ಅವನೊಬ್ಬನೇ ದೇವರ ದೇವನನ್ನು ಕಂಡವನು !*

* * *

*ನನ್ನನ್ನು ಅವರು ಪರಿಹಾಸಗೈಯಲಿ*
*ಹೆಸರಿಟ್ಟು ಕರೆಯಲಿ*
*ಶಿವಭಕ್ತೆ ನಿಜವಾಗಿಯೂ ನಾನಾಗಿದ್ದರೆ*
*ನನ್ನನ್ನದು ನೋಯಿಸದು*
*ಬೂದಿಯ ತುಂತುರು ಕನ್ನಡಿಯ ಕೆಡಿಸುವುದೆ ?*

* * *

*ಒಳ್ಳೆಯದು ಕೆಟ್ಟದ್ದು ಬರುವದೆಲ್ಲ ಬರಲಿ*
*ನನ್ನ ಕಿವಿ ಕೇಳವು ಕಣ್ಣು ನೋಡವು*
*ಅಂತರಾಳದ ಕರೆ ಕೇಳಿದಾಗ ನಂಬುಗೆಯ ದೀಪ*
*ಸ್ಥಿರವಾಗಿ ಉಜ್ವಲವಾಗಿ ಗಾಳಿಯಲ್ಲಿಯೂ*
*ಉರಿಯುತ್ತದೆ*

* * *

*ಅವರು ನನ್ನನ್ನು ನಿಂದಿಸಬಹುದು, ಗೇಲಿ*
*ಮಾಡಬಹುದು, ಹೂ ಹಾಕಿ ಪೂಜಿಸಬಹುದು*
*ಹೀಗೆ ಮಾಡಿದ್ದರಿಂದ ಅವರಿಗೇನು ಲಾಭ ?*
*ಸ್ತುತಿ ನಿಂದೆಗಳು ನನ್ನನ್ನು ಬಾಧಿಸವು !*

* * *

*ಹೆಚ್ಚು ಉಣ್ಣುತ್ತಲಿದ್ದರೆ ಎಲ್ಲಿಗೂ ಮುಟ್ಟಲಾರೆ*
*ಏನೂ ಉಣ್ಣದೇ ಇದ್ದರೆ ಅಹಂಕಾರಿಯಾಗುವೆ*
*ಆದ್ದರಿಂದ ಸಮ ಆಹಾರ ತೆಗೆದುಕೋ ಅದರಿಂದ*
*ಸಮತ್ವಪ್ರಾಪ್ತಿ, ಮುಕ್ತಿಯ ಬಾಗಿಲು ತೆರೆಯುತ್ತದೆ*

* * *

*ಬಲಿ ಕೊಡಲಿರುವ ಈ ಕುರಿ ತನ್ನ ಉಣ್ಣೆಯಿಂದ*
*ನಿನ್ನ ಮರ್ಯಾದೆ ಮುಚ್ಚಿ ಚಳಿಯಿಂದ ರಕ್ಷಿಸುತ್ತದೆ*
*ಓ ! ಮೂರ್ಖ ಪಂಡಿತ ನಿನಗಾರು ಹೇಳಿದರು*
*ನಿರ್ಜೀವ ಕಲ್ಲಿಗೆ ಈ ಜೀವಂತ ಪ್ರಾಣಿಯ*
*ಬಲಿಕೊಡಲು !*

* * *

*ಆಕಾಶವೂ ನೀನೇ; ಭೂಮಿಯೂ ನೀನೇ*
*ದಿನಾ-ರಾತ್ರಿಯೂ ನೀನೇ; ಪವನ-ಜಲವೂ ನೀನೇ*
*ಅರ್ಘ್ಯವೂ ನೀನೇ; ಗಂಧ-ಪುಷ್ಪವೂ ನೀನೇ*
*ಎಲ್ಲವೂ ನೀನೇ ಇರುವಾಗ ಏನನರ್ಪಿಸಲಿ ನಿನಗೆ !*

* * *

*ಪೆದ್ದ ಪೆಕರರು ಶಾಸ್ತ್ರ ಪುಸ್ತಕಗಳನ್ನೋದುವರು*
*ಗಿಳಿ ಹಾಗೆ ಉಲಿಯುವವರು ರಾಮನಾಮ*
*ಮಜ್ಜಿಗೆ ಅಂಬಂತೆ ನೀರನ್ನೇ ಕುಡಿಯುವರು*
*ಫಲವಿಲ್ಲ ಯತ್ನದಲಿ ಆಹ ಕೊಬ್ಬಿ ಮೆರೆಯುವರು*

* * *

*ಗಾಲಿಯನಾಡಿಸಿ ಕೂಡಲೆ ತಿರುಗಿಸಬಲ್ಲೆ ಗಿರಣಿಯ*
*ಮನಸ್ಸೇ ಗೂಟ ಗಿರಣಿಯ ತಾ ತಿರುಗಿಸಬಲ್ಲದು*
*ಒಮ್ಮೆ ತಿರುಗಿದರಾಯ್ತು ನುಣ್ಣಗೆ ನುರಿಸಬಲ್ಲದು*
*ಅಲ್ಲಿಂದಾಚೆ ಗಿರಣಿಗೆ ದವಸ ತಾನೇನೆ ಬರುವದು*

* * *

*ನಾನು ಲಲ್ಲ, ನನ್ನ ಮನಸಿನ ವನದ ಬಾಗಿಲ ಸಾರಿದೆ*
*ಶಿವನು ಶಕ್ತಿಯು ಕೂಡಿಕೊಂಡಿದ್ದ ಸುಖವನು*
*ನೋಡಿದೆ*
*ಅಲ್ಲಿಗೇ ಆಗಲೆ ಆನಂದ ಕೊಳದ ನೀರಲಿ ಮಿಂದೆ*
*ಜೀವವನ್ನು ತಳ ಹಿಡಿದುಕೊಂಡಂದು ಜಗತ್ತು*
*ಕಾಡುವದೇ ?*

ಸಂಗನಾಳಮಠ ಯು. ಎಸ್.
ಉಪನ್ಯಾಸಕರು, ಜ್ಯೋತಿರ್ಲಿಂಗ, ಮೊದಲನೆಯ ತಿರುವು
ಹೈಸ್ಕೂಲ್ ಬಡಾವಣೆ, ಹೊನ್ನಾಳಿ, ದಾವಣಗೆರೆ ಜಿಲ್ಲೆ - ೫೭೭ ೨೧೭

## ಪಾಕಿಸ್ತಾನ - ಮುಂದಿನ ದಾರಿ ಕಾಣದ ಸರ್ವಾಧಿಕಾರಿ

**ಪಾ**ಕಿಸ್ತಾನದಲ್ಲಿ ತುರ್ತುಪರಿಸ್ಥಿತಿಯ ಘೋಷಣೆ ಅನಿರೀಕ್ಷಿತವೇನಲ್ಲ. ಅದಷ್ಟು ದಿನ ಅಧಿಕಾರದಲ್ಲಿ ಉಳಿಯಲು ಸರ್ವಾಧಿಕಾರಿ ಜನರಲ್ ಮುಷರಫ್‌ಗೆ ಇದ್ದ ಮಾರ್ಗ ಅದೊಂದೇ. ಅಮೆರಿಕಾದ ಅಧ್ಯಕ್ಷ ಬುಷ್ ಕೃಪೆ ಇರುವವರೆಗೆ ಮುಷರಫ್‌ಗೆ ಭಯವಿಲ್ಲ. ತುರ್ತುಪರಿಸ್ಥಿತಿ, ಮಾಧ್ಯಮಗಳ ಮೇಲೆ ನಿಷೇಧ, ವಿರೋಧಿ ರಾಜಕಾರಣಿಗಳ ಬಂಧನ, ನಾಗರಿಕ ಹಕ್ಕುಗಳ ಹರಣ ಇವೆಲ್ಲ ಪಾಕಿಸ್ತಾನಕ್ಕೆ ಹೊಸದಲ್ಲ. ಅರವತ್ತು ವರ್ಷಗಳ ಇತಿಹಾಸದಲ್ಲಿ ಜನ ಇದನ್ನೆಲ್ಲ ಅನುಭವಿಸುತ್ತಲೇ ಇದ್ದಾರೆ ನೆಮ್ಮದಿ ಕಾಣದೆ. ಆದರೆ ಪಾಕಿಸ್ತಾನದ ಇಂದಿನ ಪರಿಸ್ಥಿತಿ ಹಿಂದೆಂದಿಗಿಂತಲೂ ಭಿನ್ನ, ಗಂಭೀರ. ಅದು ಛಿದ್ರಗೊಳ್ಳುವ ಅಪಾಯ ಹೆಚ್ಚಾಗಿದೆ. ಪಂಜಾಬ್, ಸಿಂದ್ ಮತ್ತು ವಾಯುವ್ಯ ಗಡಿಭಾಗ ಮೂರೂ ಪ್ರಾಂತಗಳು ಮೊದಲಿನಿಂದ ಸಾಮರಸ್ಯ ಕಂಡಿಲ್ಲ. ಒಂದೊಂದೂ ಒಂದು ದಿಕ್ಕಿನತ್ತ. ಇದು ಒಂದು ಬಗೆಯಾದರೆ ಆಡಳಿತದ ಸವಿ ಕಂಡಿರುವ ಪ್ರಬಲವಾದ ಸೇನೆ, ಅಷ್ಟೊಂದು ಶಕ್ತಿ ಇಲ್ಲದ ಪ್ರಜಾಪ್ರಭುತ್ವಾಕಾಂಕ್ಷಿಗಳು, ಭ್ರಷ್ಟ ರಾಜಕಾರಣಿಗಳು, ಇಡೀ ವ್ಯವಸ್ಥೆಯನ್ನು ಆತಂಕಕ್ಕೀಡು ಮಾಡಿರುವ ಇಸ್ಲಾಮಿಕ್ ಮೂಲಭೂತವಾದಿಗಳು, ಭಯೋತ್ಪಾದಕರು, ಕ್ರಮಬದ್ಧವಾದ ರೀತಿಯಲ್ಲಿ ಪಾಕಿಸ್ತಾನದ ವ್ಯವಸ್ಥೆಯನ್ನು ಬುಡಮೇಲು ಮಾಡುತ್ತಿದ್ದಾರೆ. ಪ್ರಜಾಪ್ರಭುತ್ವದ ಎಲ್ಲ ಜನಪರ ಸಂಸ್ಥೆಗಳೂ ನಿರ್ನಾಮಗೊಂಡಿವೆ. ಇಡೀ ವ್ಯವಸ್ಥೆ ಅರಾಜಕತೆಯ ಆಗರ. ಹಾಗಾಗಿ, ಅಮೆರಿಕಾಗೆ ತನ್ನ ಹಿತಾಸಕ್ತಿ ಕಾಪಾಡಿಕೊಳ್ಳಲು ಸಂದರ್ಭಕ್ಕನುಸಾರವಾಗಿ ಬೇರೆ ಬೇರೆ ಶಕ್ತಿಗಳನ್ನು ಉಪಯೋಗಿಸಿಕೊಳ್ಳುವುದು ಸುಲಭಸಾಧ್ಯವಾಗಿದೆ.

ಎಂಟು ವರ್ಷಗಳ ಹಿಂದೆ ಜನರಲ್ ಮುಷರಫ್ ಅಧಿಕಾರ ಗ್ರಹಣ ಮಾಡಿದಾಗ ಅಮೆರಿಕಾಗೆ ನುಂಗಲಾರದ ತುತ್ತು. ಇಸ್ಲಾಮಿಕ್ ಮೂಲಭೂತವಾದಿಗಳ ಬೆಂಬಲ ಹೊಂದಿದ್ದ ಜನರಲ್‌ಗೆ ಆಫ್ಘಾನಿಸ್ತಾನದ ತಾಲಿಬಾನ್‌ಗಳೊಂದಿಗೆ ಮೈತ್ರಿ ಒಂದು ಆಸರೆ. ಏಕೆಂದರೆ ಬಹಿರಂಗವಾಗಿ ಅಮೆರಿಕಾದ ಬೆಂಬಲದ ಖಾತ್ರಿ ಜನರಲ್‌ಗೆ ಇರಲಿಲ್ಲ. ಸೆಪ್ಟೆಂಬರ್ ೧೧ರಂದು ಸಂಭವಿಸಿದ ಘಟನೆ, ಅಮೆರಿಕಾ 'ಭಯೋತ್ಪಾದನೆಯ ವಿರುದ್ಧ ಪ್ರಾರಂಭಿಸಿದ ಸಮರ' ಜನರಲ್ ಮುಷರಫ್‌ಗೆ ವರದಾನವಾಗಿ ಪರಿಣಮಿಸಿತು. ಸರ್ವಾಧಿಕಾರಿ ಆಡಳಿತಕ್ಕೆ ಮನ್ನಣೆ ಗಿಟ್ಟಿಸಿತು. ಅಮೆರಿಕಾದ ಮೈತ್ರಿಯ ಕಿರೀಟ ಧರಿಸಿದ ಮುಷರಫ್‌ಗೆ ಇಸ್ಲಾಮಿಕ್ ಮೂಲಭೂತ ವಾದಿಗಳು ಭಾರಿ ಕಂಟಕವಾದರು. ಆಫ್ಘಾನಿಸ್ತಾನದ ದುರಾಕ್ರಮಣ, ಅಮೆರಿಕಾದ ಕೈಗೊಂಬೆ ಸರಕಾರದ ಸ್ಥಾಪನೆ, ಮುಷರಫ್ ಸಮಸ್ಯೆಗಳನ್ನು ಇನ್ನಷ್ಟು ಹೆಚ್ಚಿಸಿತು. ಪಾಕ್-ಆಫ್ಘನ್ ಗಡಿಯಲ್ಲಿ ತಾಲಿಬಾನ್‌ಗಳ ಪ್ರಾಬಲ್ಯ ಅಧಿಕಗೊಂಡ ಹಾಗೆ ಮುಷರಫ್ ಮೇಲೆ ಅಮೆರಿಕಾದ ಒತ್ತಡ ಹೆಚ್ಚತೊಡಗಿತು. ಭಯೋತ್ಪಾದಕರ ವಿರುದ್ಧ ಕ್ರಮ ಕೈಗೊಂಡರೆ ಮೂಲಭೂತವಾದಿಗಳ, ಮುಲ್ಲಾಗಳ ಆಕ್ರೋಶಕ್ಕೀಡಾಗಬೇಕು. ಇಲ್ಲದಿದ್ದರೆ ಅಮೆರಿಕಾದ ಅವಕೃಪೆಗೊಳಗಾಗಬೇಕು. ಈ ಸಂದಿಗ್ಧದಲ್ಲಿದ್ದ ಮುಷರಫ್ ಆಂತರಿಕವಾಗಿ ರಾಜಕೀಯ ಒತ್ತಡಗಳನ್ನು, ನ್ಯಾಯಾಂಗದ ಹೆಚ್ಚುತ್ತಿದ್ದ ಸ್ವತಂತ್ರ ನಡವಳಿಕೆಯನ್ನು ಎದುರಿಸ ಬೇಕಾಯಿತು. ಇವೆಲ್ಲದರಿಂದಾಗಿ ಆಡಳಿತದ ಹಿಡಿತ ತಪ್ಪುತ್ತಿದ್ದುದರಿಂದ ಅನಿಶ್ಚಿತತೆ ಎದುರಾದಾಗ ಅಧಿಕಾರ ಉಳಿಸಿಕೊಳ್ಳಲು ರಾಜಕೀಯ ಒಡಂಬಡಿಕೆಗಳಿಗೆ ಪ್ರಯತ್ನ. ಮಾಜಿ ಪ್ರಧಾನಿ ಬೆನಜೀರ್ ಭುಟ್ಟೋ ಜೊತೆ ಅಧಿಕಾರ ಹಂಚಿಕೆಯ ಒಪ್ಪಂದ. ಸಂಪೂರ್ಣವಾಗಿ ನ್ಯಾಯಾಂಗ ವನ್ನು ಎದಿರುಹಾಕಿಕೊಳ್ಳಬೇಕಾಗಿಬಂದಾಗ ಕಂಗಾಲಾಗಿ ತುರ್ತುಪರಿಸ್ಥಿತಿ ಘೋಷಣೆ.

ಈಗ ಮುಂದೇನು ? ಪ್ರಭಾವಿ ರಾಜಕಾರಣಿ ಎನಿಸಿಕೊಂಡಿರುವ ಬೆನಜೀರ್ ಭುಟ್ಟೊ ಏಕಕಾಲದಲ್ಲಿ ಎರಡು ಕುದುರೆ ಮೇಲೆ ಸವಾರಿ ಮಾಡಲು ನೋಡುತ್ತಿದ್ದಾರೆ. ಅಮೆರಿಕಾದ ನೆರವಿನಿಂದ ಮುಷರಫ್ ಜೊತೆ ಅಧಿಕಾರ ಹಂಚಿಕೆಗೆ ವ್ಯಾಪಾರ ಕುದುರಿಸುವ ಈಕೆಯ ದಾರಿ ಇನ್ನೂ ದುರ್ಗಮ. ಅಮೆರಿಕಾದ ಮಟ್ಟಿಗೆ ಆಯಕಟ್ಟಿನ ಪ್ರದೇಶದಲ್ಲಿರುವ ಪಾಕಿಸ್ತಾನದಲ್ಲಿ ತನಗೆ ಅನುಕೂಲವಾಗಿರುವ ಸರಕಾರ ಅಗತ್ಯ. ಅದಕ್ಕಾಗಿಯೇ ಅದು ಈವರೆಗೆ ಮುಷರಫ್ ಘೋಷಿಸಿರುವ ತುರ್ತುಪರಿಸ್ಥಿತಿಯನ್ನು ಬಲವಾಗಿ ಖಂಡಿಸುವ ಗೋಜಿಗೆ ಹೋಗಿಲ್ಲ. ವಿದೇಶಾಂಗ ಕಾರ್ಯದರ್ಶಿ ಕಾಂಡಲೀಸ್ ರೈಸ್ ಆದಷ್ಟೂ ಶೀಘ್ರವಾಗಿ ತುರ್ತು ಪರಿಸ್ಥಿತಿ ಹಿಂತೆಗೆದುಕೊಳ್ಳಬೇಕೆಂಬ ಆಶಯ ವ್ಯಕ್ತಗೊಳಿಸಿ, ಅಮೆರಿಕಾದ ಮೃದು ಧೋರಣೆ ಪ್ರಕಟಗೊಳಿಸಿದ್ದಾರೆ. ಬುಷ್ ಕೂಡ ಜನರಲ್ ಮುಷರಫ್‌ಅನ್ನು ಬಿಟ್ಟುಕೊಡದೆ, ನಾಗರಿಕ ಸರಕಾರದ ಸ್ಥಾಪನೆಯ ಆಶಯ ವ್ಯಕ್ತಗೊಳಿಸಿದ್ದಾರೆ. ಮುಷರಫ್ ಸ್ಥಾನ ಭರ್ತಿ ಮಾಡುವ ಇನ್ನೊಬ್ಬನಿಗಾಗಿ ಹುಡುಕಾಟ ನಡೆದಿದೆ. ಹೇಗಾದರೂ ಮುಷರಫ್-ಬೆನಜೀರ್ ಕೂಟ ಆಡಳಿತ ಸ್ಥಾಪನೆಯಾದರೆ ಅಮೆರಿಕಾಗೆ ಸಮಾಧಾನ. ಅದು ಮುಷರಫ್‌ನ ಮುಂದಿನ ಹೆಜ್ಜೆಯ ಮೇಲೆ ಅವಲಂಬಿತ. ಪಾಕಿಸ್ತಾನದ ಸೇನೆ ದೇಶದ ರಾಜಕೀಯ ಮತ್ತು ಆರ್ಥಿಕ ವಲಯದಲ್ಲಿ ಬೇರೂರಿರುವ ಪ್ರಬಲ ಶಕ್ತಿ. ಸೇನಾಧಿಕಾರಿಗಳೂ ಅಷ್ಟೇ ಭ್ರಷ್ಟರು. ಅಮೆರಿಕಾದ ಕೃಪೆಗೆ ಪಾತ್ರರು. ಹಾಗಾಗಿ, ಏನೇ ವ್ಯವಸ್ಥೆ ಅಸ್ತಿತ್ವಕ್ಕೆ ಬಂದರೂ ಸೇನೆಯ ಮತ್ತು ಅಮೆರಿಕಾದ ಒತ್ತಾಸೆಯಿಲ್ಲದೆ ಉಳಿಗಾಲವಿಲ್ಲ. ಸದ್ಯಕ್ಕಂತೂ ಅನಿಶ್ಚಿತತೆಯ ಗೊಂದಲ. ಈ ಬೆಳವಣಿಗೆಗಳು ನೆರೆಯ ರಾಷ್ಟ್ರ ಪಾಕಿಸ್ತಾನದ ಆಂತರಿಕ ವಿಷಯವಾದರೂ ಭಾರತ-ಪಾಕಿಸ್ತಾನ ಸಂಬಂಧಗಳ ಸುಧಾರಣೆಗೆ ಆತಂಕಕಾರಿ. ಸುಭದ್ರವಾದ ಪ್ರಜಾಪ್ರಭುತ್ವ ಸರಕಾರ ಪಾಕಿಸ್ತಾನದಲ್ಲಿ ಅಸ್ತಿತ್ವಕ್ಕೆ ಬಂದರೆ, ಮಾತುಕತೆಗಳ ಮುಂದುವರಿಕೆ, ಸಾಫಲ್ಯ ಸಾಧ್ಯ. ಅದುವರೆಗೆ ಕಾದು ನೋಡಬೇಕು.

## ಇರಾನಿನ ಮೇಲೆ ದಾಳಿ ನಡೆಸಲು ಸನ್ನಾಹ

**ಇ**ರಾನಿನ ಮೇಲೆ ದಾಳಿ ನಡೆಸಲು ಅಮೆರಿಕಾ ಸಜ್ಜಾಗುತ್ತಿದೆ. ಬುಷ್ ಆಡಳಿತಾವಧಿ ಯಲ್ಲಿಯೇ ಇರಾನಿನಲ್ಲಿ ಅಮೆರಿಕಾಗೆ ಅನುಕೂಲವಾಗಿರುವ ಆಡಳಿತೆಯನ್ನು ತರಬೇಕು ಎಂಬುದು ಅಪೇಕ್ಷೆ. ಇರಾಕಿನ ಮೇಲೆ ದಾಳಿ ನಡೆಸಲು ಮಾಡಿದ ಸಿದ್ಧತೆಯನ್ನೇ ಈಗಲೂ ಕಾಣುತ್ತಿದ್ದೇವೆ. ಇರಾನ್ ನ್ಯೂಕ್ಲಿಯರ್ ಅಸ್ತ್ರ ನಿರ್ಮಿಸುತ್ತಿದೆ, ಹಾಗೇನಾದರೂ ಆದರೆ ಮೂರನೆಯ ಮಹಾಯುದ್ಧ ಖಚಿತ, ಆದ್ದರಿಂದ ಅದನ್ನು ತಡೆಯಬೇಕು, ಇರಾನಿನಲ್ಲಿ ಆಡಳಿತ ಬದಲಾಗಬೇಕು : ಇದು ಅಮೆರಿಕಾದ ಪ್ರಚಾರ. ಇಡೀ ಇರಾನಿಯನ್ ಸೇನೆ ಅಮೆರಿಕಾದ ದೃಷ್ಟಿಯಲ್ಲಿ ಭಯೋತ್ಪಾದಕ ಶಕ್ತಿ. ಆದ್ದರಿಂದ ಅದನ್ನು ಬಗ್ಗು ಬಡಿಯಬೇಕು. ಇರಾನಿನ ಆಡಳಿತವನ್ನು ಮಣಿಸಲು ಮೊದಲ ಹೆಜ್ಜೆಯಾಗಿ ಆರ್ಥಿಕ ದಿಗ್ಬಂಧನ, ವಿಶ್ವಸಂಸ್ಥೆಯ ಭದ್ರತಾ ಮಂಡಳಿಯಲ್ಲಿ ರಷ್ಯಾ, ಚೀಣಾ, ಕೆಲವು ಯೂರೋಪಿಯನ್ ರಾಷ್ಟ್ರಗಳ ವಿರೋಧವಿರುವುದರಿಂದ ಸಾರ್ವತ್ರಿಕವಾಗಿ ಆರ್ಥಿಕ ದಿಗ್ಬಂಧನ ಹೊರಿಸಲು ಸಾಧ್ಯವಿಲ್ಲ. ಹಾಗಾಗಿ ಅಮೆರಿಕಾ ಏಕಾಂಗಿಯಾಗಿ ಅಕ್ಟೋಬರ್ ೨೫ರಿಂದ ಆರ್ಥಿಕ ದಿಗ್ಬಂಧನ ಹೊರಿಸಿದೆ. ಇರಾನಿನ ಆರ್ಥಿಕದ ಮೇಲೆ ಪರಿಣಾಮ ಉಂಟುಮಾಡುವುದೇ ಗುರಿ. ಬ್ಯಾಂಕಿಂಗ್ ವ್ಯವಹಾರಗಳ ಮೇಲೆ ನಿರ್ಬಂಧ ಹೇರಿರುವುದರಿಂದ ವ್ಯಾಪಾರ-ವಹಿವಾಟುಗಳಿಗೆ ಸಾಕಷ್ಟು ಅಡ್ಡಿಯಾಗಲಿದೆ. ಇತರ ಯೂರೋಪಿಯನ್ ರಾಷ್ಟ್ರಗಳು, ಚೀಣ, ರಷ್ಯಾ, ಭಾರತ ಮೊದಲಾದವು ಯಾವತ್ತಿನಂತೆ ವ್ಯವಹರಿಸುವುದರಿಂದ ಅಮೆರಿಕಾದ ಆರ್ಥಿಕ ದಿಗ್ಬಂಧನ ಅಷ್ಟೇನೂ ದುಷ್ಪರಿಣಾಮ ಬೀರದು.

ಇರಾನಿನ ಮೇಲೆ ಆಕ್ರಮಣ ಎಸಗಲು ಅಮೆರಿಕಾದ ಉದ್ದೇಶ ಬೇರೆಯೇ. ಅದು ಈ ಭೂಭಾಗದಲ್ಲಿ ಅಧಿನಾಯಕತ್ವದ ಸ್ಥಾಪನೆ. ತೈಲ ಸಂಪತ್ತಿನ ಮೇಲೆ ನಿಯಂತ್ರಣ ಸ್ಥಾಪನೆ ಇರಾಕಿನ ಮೇಲೆ ದಾಳಿ ನಡೆಸಿದಷ್ಟು ಸುಲಭವಲ್ಲ. ಇರಾನಿನ ಆಕ್ರಮಣ ಪರಿಸ್ಥಿತಿ ಈಗ ಬದಲಾಗಿದೆ. ಒಂದು ಇರಾಕಿನ ದುಸ್ಸಾಹಸದಿಂದ ಹೊರಗೆ ಬರಲು ಅಮೆರಿಕಾಗೆ ಈವರೆಗೆ ಸಾಧ್ಯವಾಗಿಲ್ಲ. ಅಲ್ಲಿ ಪರಿಸ್ಥಿತಿ ದಿನೇ ದಿನೇ ಹದಗೆಡುತ್ತಿದೆ. ಅಮೆರಿಕಾದ ನಾಗರಿಕರು ಇನ್ನೊಂದು ದುಸ್ಸಾಹಸಕ್ಕೆ ಬೆಂಬಲ ನೀಡಲಾರರು. ರಷ್ಯಾ, ಚೀಣಾ ಈ ಬಾರಿ ಇರಾನಿಗೆ ಪೂರ್ಣವಾಗಿ ಒತ್ತಾಸೆಯಾಗಿ ನಿಂತಿವೆ. ಎರಡನೇ ಮಹಾಯುದ್ಧದ ನಂತರ ಮೊದಲ ಬಾರಿಗೆ ರಷ್ಯಾದ ಅಧ್ಯಕ್ಷ ಪುಟಿನ್ ಇರಾನಿಗೆ ಭೇಟಿ ನೀಡಿದ್ದರು. ಇರಾನಿನ ನಾಯಕರುಗಳೊಂದಿಗೆ ಸ್ನೇಹಯುತ ಮಾತುಕತೆ ನಡೆಸಿದ ಪುಟಿನ್ ದುರಾಕ್ರಮಣದ ಬಗ್ಗ ಅಮೆರಿಕಾಗೆ ಎಚ್ಚರಿಕೆ ನೀಡಿದ್ದಾರೆ. ಇದು ಸಂಭವಿಸಿದ್ದು ಈಚೆಗೆ. ಹಲವು ಯೂರೋಪಿಯನ್ ರಾಷ್ಟ್ರಗಳು ಇರಾನಿನ ಜೊತೆ ಸಂಬಂಧ ಹೊಂದಿವೆ. ಅಮೆರಿಕಾ ಇರಾನಿನೊಂದಿಗೆ ಸಂಬಂಧಗಳನ್ನು ಮಾತುಕತೆಗಳ ಮೂಲಕ ಇತ್ಯರ್ಥಗೊಳಿಸಬೇಕೆಂದು ಒತ್ತಾಯಪಡಿಸಿವೆ. ಹಾಗಾಗಿ ಅಮೆರಿಕಾಗೆ ಈ ಬಾರಿ ಅಂತಾರಾಷ್ಟ್ರೀಯ ಅಭಿಪ್ರಾಯವನ್ನು ಕಡೆಗಣಿಸುವುದು ಸುಲಭವಲ್ಲ. ಅಂತಾರಾಷ್ಟ್ರೀಯ ಪರಮಾಣು ಶಕ್ತಿ ಸಂಸ್ಥೆಯ ಅಧ್ಯಕ್ಷ ಅಲ್ ಬರದೈ ಇರಾನ್ ಪರಮಾಣು ಬಾಂಬು ತಯಾರಿಕೆಯಲ್ಲಿ ತೊಡಗಿರುವುದೆಂಬ ಆಪಾದನೆ ಸರಿಯಲ್ಲ, ಅದು ಪರಮಾಣು ಬಾಂಬು ತಯಾರಿಸುವ ಸ್ಥಿತಿಯಲ್ಲಿ ಇಲ್ಲ ಎಂದು ಸ್ಪಷ್ಟವಾಗಿ ಹೇಳಿದ್ದಾರೆ. ಅಧಿಕಾರಾವಧಿಯ ಕೊನೆಯ ವರ್ಷದಲ್ಲಿರುವ ಜಾರ್ಜ್ ಬುಷ್ ಏನಾದರೂ ದುಸ್ಸಾಹಸದಲ್ಲಿ ತೊಡಗಿದರೆ ಪರಿಣಾಮ ಭೀಕರವಾಗಿರುವುದರಲ್ಲಿ ಸಂಶಯವಿಲ್ಲ. ಅಂಥ ಸಂಭವವನ್ನು ತಡೆಯಲು ಸಕಲ ಪ್ರಯತ್ನವನ್ನೂ ಮಾಡಬೇಕಾಗಿದೆ.

ಸೀಯಾರ್ಕೆ
'ಚೌಬೀನ', ೮೪೯, ೬ನೇ ಕ್ರಾಸ್, ೧ನೇ ಮೇನ್, ಬನಶಂಕರಿ ೩ನೇ ಹಂತ, ಕತ್ರಿಗುಪ್ಪೆ, ಬೆಂಗಳೂರು - ೮೫

# ಉಲ್ಲಾಸ ಮೂಡಿಸಿದ ಧೂಮಕೇತು

ಅಕ್ಟೋಬರ್ ೨೫ರಂದು ಧೋ ಎಂದು ಮಳೆ ಸುರಿಯುತ್ತಿದ್ದಾಗ ವಿಶೇಷ ಸುದ್ದಿಗಳನ್ನು ಹೊತ್ತುತಂದ ಇ-ಮೈಲ್ ಖಗೋಳಜ್ಞರನ್ನು ಚಕಿತಗೊಳಿಸಿತು. ಮೊದಲ ಸುದ್ದಿ ಹೋಮ್ಸ್ ಹೆಸರಿನ ಧೂಮಕೇತುವಿನದ್ದು. ಇದ್ದಕ್ಕಿದ್ದಂತೆ ಇದು ಮಿಲಿಯನ್ ಪಟ್ಟು ಪ್ರಕಾಶ ಪಡೆದು ಅಚ್ಚರಿ ಮೂಡಿಸಿತು. ಎರಡನೆಯ ಸುದ್ದಿ 'ದೊಡ್ಡ ಚಂದ್ರ'ನ ಕುರಿತಾದದ್ದು. ಈ ಬಗ್ಗೆ ನಭಾವಲೋಕನದಲ್ಲಿ ಹಿಂದೆ ಚರ್ಚೆಯಾಗಿದೆ. ಭೂಮಿ-ಚಂದ್ರ ದೂರ ಕನಿಷ್ಠವಿದ್ದಾಗ ಹುಣ್ಣಿಮೆಯಾಗುವ ಘಟನೆ ಇದು. ಅಕ್ಟೋಬರ್‌ನಲ್ಲಿ ಅಮೆರಿಕಾದವರಿಗೆ ಅನುಕೂಲಕರವಾಗಿತ್ತು; ನವೆಂಬರ್‌ನಲ್ಲಿ ನಮಗೆ ಅನುಕೂಲಕರವಾಗಿತ್ತು. ಅನುಕೂಲಕರ ಎಂದರೆ ಕನಿಷ್ಠ ದೂರದ ಘಟನೆಗೂ ಹುಣ್ಣಿಮೆ ಎಂಬ ಘಟನೆಗೂ ಕೇವಲ ಗಂಟೆಗಳ ವ್ಯತ್ಯಾಸ ಎಂದರ್ಥ. ಆದರೆ ಬರಿಗಣ್ಣಿಗೆ ಯಾವುದೇ ಹುಣ್ಣಿಮೆಯ ಚಂದ್ರನೂ ಪ್ರಕಾಶಮಾನವಷ್ಟೇ.

ಹೋಮ್ಸ್ ಧೂಮಕೇತು ೧೮೯೨ರಲ್ಲಿ ಪತ್ತೆಯಾದಾಗ ಹೀಗೆ ಅನಿರೀಕ್ಷಿತವಾಗಿ ಪ್ರಕಾಶ ಪಡೆದಿತ್ತು. ಅದಾದ ಮೇಲೆ ಸುಮಾರು ಆರೇಳು ವರ್ಷಗಳಿಗೆ ಒಮ್ಮೆ ಬಂದುಹೋಗುತ್ತಿದೆ. ಆದರೆ ದೊಡ್ಡ ದೊಡ್ಡ ದೂರದರ್ಶಕಗಳಿಗೂ ನಿಲುಕದಷ್ಟು ಕ್ಷೀಣವಾಗಿತ್ತು. ಈ ಬಾರಿ ಮೇ ತಿಂಗಳಲ್ಲಿ ಸೂರ್ಯನನ್ನು ಸಮೀಪಿಸಿ ಹಿಂದಿರುಗಿ ಹೊರಟಿತ್ತು. ಭೂಮಿಯ ಕಕ್ಷೆಯನ್ನು ದಾಟಿ ಹೋಗಿತ್ತು. ಆದ್ದರಿಂದ ಅದರ ಬಗ್ಗೆ ಯಾರಿಗೂ ಆಸಕ್ತಿ ಇರಲಿಲ್ಲ. ಪ್ರತಿವರ್ಷ ಸರಾಸರಿ ೨೦-೨೫ ಧೂಮಕೇತುಗಳು ಬಂದು ಹೋಗುವುವು. ಅವುಗಳಲ್ಲೊಂದಾಗಿ ಇದು ಪಟ್ಟಿಯಲ್ಲಿತ್ತು. ಆದರೆ ಹೀಗೆ ಪ್ರಕಾಶಮಾನವಾದ ಕೆಲವೇ ಗಂಟೆಗಳಲ್ಲಿ ಎಲ್ಲ ವೀಕ್ಷಕರೂ ಅದರತ್ತ ಗಮನಹರಿಸಿದರು. ಸುಮಾರು ಹತ್ತು ದಿನಗಳಾದ ಮೇಲೆ ನಮಗೂ ನೋಡಲು ಸಿಕ್ಕಿತು. ಬರಿಗಣ್ಣಿಗೇ ಕಾಣುವ ಸಾಭ್ಯಸ್ಥ ಧೂಮಕೇತು ಎಂಬ ಖ್ಯಾತಿಗೆ ಪಾತ್ರವಾಯಿತು. ಎಲ್ಲ ಡಿಜಿಟಲ್ ಕ್ಯಾಮರಾಗಳು ಮತ್ತು ದುರ್ಬೀನುಗಳಿಗೆ ಕೈತುಂಬ ಕೆಲಸ ಒದಗಿಸಿತು. ಮತ್ತೊಮ್ಮೆ ಸ್ಫೋಟವಾದರೆ... ಎಂದು ಅನೇಕರು ಆಶಿಸುತ್ತಿದ್ದಾರೆ. ಏಕೆಂದರೆ ಅರ್ಜುನ (ಪರ್ಸಿಯುಸ್) ಪುಂಜದಲ್ಲಿ ರಾತ್ರಿ ಇಡೀ ಕಾಣುವ ಅವಕಾಶ ಡಿಸೆಂಬರ್‌ಗೂ ಮುಂದುವರೆಯಲಿದೆ.

ಈ ತಿಂಗಳ ರಾಜಮರ್ಯಾದೆ ಮಂಗಳ ಗ್ರಹಕ್ಕೆ ಸಲ್ಲಬೇಕಾಗಿದೆ. ಈಗಾಗಲೇ ಅನೇಕರನ್ನು ಆಕರ್ಷಿಸಿರುವ ಅದು ಈ ತಿಂಗಳಲ್ಲಿ ಗರಿಷ್ಠ ಪ್ರಕಾಶ ಪಡೆಯಲಿದೆ. ೨೪ರಂದು ಚಂದ್ರನ ಹಿಂದೆ ಮರೆಯಾಗುವ ಘಟನೆ (ಆಚ್ಛಾದನೆ) ನಡೆಯಲಿದೆ. ಅದರ ನೋಟ ನಮಗಿಲ್ಲ. ಆದರೆ ಚಂದ್ರನಿಗೆ ಅಂಟಿಕೊಂಡಂತೆ ಕಾಣುವ ಅಪೂರ್ವ ದೃಶ್ಯ ೨೪ರ ಬೆಳಗಿನ ಜಾವ ಕಾಣಲಿದೆ. ಪ್ರತಿ ಎರಡು ವರ್ಷಕ್ಕೊಮ್ಮೆ ಹೀಗೆ ಗರಿಷ್ಠ ಪ್ರಕಾಶ ಪಡೆಯುವ ಮಂಗಳವನ್ನು ಗಮನಿಸುವುದೇ ಒಂದು ಅಪೂರ್ವ ಆನಂದ. ಅದರ ಆಜೀಬಿ ಯಾವುದೇ ಪ್ರಕಾಶಮಾನ ನಕ್ಷತ್ರವಿಲ್ಲ. ಆದರೆ ದುರ್ಬೀನು ಅಥವಾ ದೂರದರ್ಶಕ ಬಳಸಿ ಸೂಕ್ಷ್ಮವಾಗಿ ಗಮನಿಸಿದಾಗ ಒಂದೆರಡು ನೆಬ್ಯುಲಗಳೂ ಕಾಣಬಹುದು ಅಥವಾ ಮಂಗಳದ ಪ್ರಕಾಶ ಅದನ್ನು ಮಂಕುಗೊಳಿಸಲೂಬಹುದು.

ಶುಕ್ರಗ್ರಹ ಬೆಳಗಿನ ಜಾವ ಕಾಣುತ್ತಿದೆ. ಶನಿಗ್ರಹವೂ ಮಧ್ಯರಾತ್ರಿಯ ಹೊತ್ತಿಗೆ ಉದಯಿಸಿ ಬೆಳಗಿನ ಜಾವ ಕಾಣುತ್ತಿದೆ. ೨೭ರ ಬೆಳಗಿನ ಜಾವ ಚಂದ್ರನೊಡನೆ ಕಾಣುತ್ತದೆ. ಸಂಜೆ ಕಾಣುತ್ತಿದ್ದ ಗುರುಗ್ರಹ ಮರೆಯಾಗಿ ಸೂರ್ಯನೊಡನೆ ಉದಯಿಸಿ ಕಂತುತ್ತಿದೆ (೨೩ರಂದು ಯುತಿ). ಬುಧಗ್ರಹ ತಿಂಗಳ ಮೊದಲವಾರ ಮಾತ್ರ ಬೆಳಗಿನ ಜಾವ ಕಾಣುತ್ತದೆ. ತಿಂಗಳ ಕೊನೆಗೆ ಸಂಜೆ ದಿಗಂತದ ಅಂಚಿನಲ್ಲಿ ಕಾಣುತ್ತದೆ (೧೭ರಂದು ಯುತಿ).

ಜೆಮಿನಿಡ್ಸ್ ಉಲ್ಕಾವೃಷ್ಟಿ ೧೪ರಂದು ಮತ್ತು ಉರ್ಸಿಡ್ಸ್ ಉಲ್ಕಾವೃಷ್ಟಿ ೨೧ರಂದು ಗರಿಷ್ಠ ಚಟುವಟಿಕೆ ಪಡೆಯಲಿವೆ. ಗಂಟೆಗೆ ೨೦-೨೫ ಉಲ್ಕೆಗಳು ಕಾಣಬಹುದು. ಸಾಧಾರಣವಾಗಿ ಆಕಾಶ ಶುಭ್ರವಾಗಿಯೇ ಇರುವುದರಿಂದ ಬೆಳಗಿನ ಜಾವ ಈ ಉಲ್ಕೆಗಳನ್ನು ವೀಕ್ಷಿಸಬಹುದು.

೨೨ರಂದು ಉತ್ತರಾಯಣ. ಹಗಲಿನ ಅವಧಿ ಕನಿಷ್ಠ, ಅಂದರೆ ಸೂರ್ಯ ತನ್ನ ದಕ್ಷಿಣದ ಮಿತಿಯನ್ನು ತಲುಪಿ ಉತ್ತರಕ್ಕೆ ಮರಳಿ ಹೊರಡುವ ದಿನ. ಸೂರ್ಯನ ಸ್ಥಾನ ಧನುರಾಶಿಯಲ್ಲಿರುತ್ತದೆ.

೨೪ರ ಹುಣ್ಣಿಮೆಯಂದು ಚಂದ್ರನನ್ನು ನೋಡಿ. ಕ್ರಿಸ್‌ಮಸ್ ಸಡಗರದ ವಿದ್ಯುದ್ದೀಪಗಳ ಅಲಂಕಾರವನ್ನೂ ಮೆಟ್ಟಿ ನಿಲ್ಲುವ ಪ್ರಕಾಶ ಅದರದ್ದು. ಅದರ ಪಕ್ಕದ ಮಂಗಳ ಕಣ್ಣು ಕೋರೈಸುತ್ತದೆ. ಆದರೆ ಮೃಗಶಿರಾ ಎಂಬ ನಕ್ಷತ್ರವನ್ನು ಹುಡುಕುವುದು ಮಾತ್ರ ಸವಾಲಾಗುತ್ತದೆ.

### ಖಗೋಳ ದಿನಚರಿ

ಡಿಸೆಂಬರ್ ೧ ಚಾಂದ್ರಮಾಸದ ಕೊನೆಯ ಪಾದ (ಚಂದ್ರೋದಯ ನಡುರಾತ್ರಿಗೆ)
ಚಂದ್ರ-ಶನಿ ಜೋಡಿ*

೬ ಶುಕ್ರ-ಚಂದ್ರ ಜೋಡಿ* ಭೂಮಿ-ಚಂದ್ರರ ಅಂತರ ಗರಿಷ್ಠ
೯ ಬುಧ-ಚಂದ್ರ ಜೋಡಿ ಅಮಾವಾಸ್ಯೆ (ರಾತ್ರಿ ೨೩:೧೧ಕ್ಕೆ)
೧೦ ಗುರು-ಚಂದ್ರ ಜೋಡಿ
೧೪ ನೆಪ್ಚೂನ್-ಚಂದ್ರ ಜೋಡಿ (ಆಚ್ಛಾದನೆ ಕಾಣುವುದಿಲ್ಲ) ಜೆಮಿನಿಡ್ಸ್ ಉಲ್ಕಾವೃಷ್ಟಿ
೧೭ ಚಾಂದ್ರಮಾಸದ ಮೊದಲ ಪಾದ ಬುಧಗ್ರಹದ ಯುತಿ (ಚಂದ್ರಾಸ್ತ ನಡುರಾತ್ರಿಗೆ)
೧೮ ಮಂಗಳ-ಭೂಮಿ ನಡುವೆ ಕನಿಷ್ಠ ಅಂತರ
೨೦ ಶನಿಗ್ರಹದ ಹಿನ್ನಡೆ ಆರಂಭ ಬುಧ-ಗುರು ಜೋಡಿ
೨೨ ಉತ್ತರಾಯಣ ೧೧:೩೮ಕ್ಕೆ ಚಂದ್ರ-ಭೂಮಿ ನಡುವೆ ಕನಿಷ್ಠ ಅಂತರ
೨೩ ಗುರುಗ್ರಹದ ಯುತಿ
೨೪ ಹುಣ್ಣಿಮೆ ೦೬:೪೬ಕ್ಕೆ
ಮಂಗಳ-ಚಂದ್ರ ಜೋಡಿ* (ಬೆಳಗಿನ ಜಾವ) (ಆಚ್ಛಾದನೆ ಕಾಣುವುದಿಲ್ಲ)
೨೮ ಶನಿ-ಚಂದ್ರ ಜೋಡಿ
೩೧ ಚಾಂದ್ರಮಾಸದ ಕೊನೆಯ ಪಾದ
ಜನವರಿ ೫ ಕ್ವಾಡ್ರಾಂಟಿಡ್ಸ್ ಉಲ್ಕಾವೃಷ್ಟಿ ಚಂದ್ರ-ಶುಕ್ರ ಜೋಡಿ

* ಛಾಯಾಗ್ರಹಣಕ್ಕೆ ಉತ್ತಮ ಅವಕಾಶ

೨೪ರ ಹುಣ್ಣಿಮೆಯಂದು ಚಂದ್ರ ಮಂಗಳ ಜೋಡಿ

ಡಾ|| ಬಿ. ಎಸ್. ಶೈಲಜಾ
ಜವಹರಲಾಲ್ ನೆಹರೂ ತಾರಾಲಯ, ಹೈಗ್ರೌಂಡ್ಸ್, ಬೆಂಗಳೂರು - ೫೬೦ ೦೦೧

ಪ್ರಸ್ತುತ ಶೀರ್ಷಿಕೆಯಲ್ಲಿ ಎರಡು ಘಟಕಗಳಿವೆ. ಒಂದು– ಆಧುನಿಕತೆ; ಇನ್ನೊಂದು–ದಲಿತ-ಬಂಡಾಯ ನಾಟಕ. ಈ ಎರಡನೆಯ ಘಟಕದಲ್ಲಿ ಸೂಕ್ಷ್ಮ ದೃಷ್ಟಿಗೆ ಪುನಃ ಎರಡು ಘಟಕಗಳು ಕಾಣುತ್ತವೆ. ಆದರೆ ಅವುಗಳ ಅಂತಿಮ ಧ್ಯೇಯ ಸಮ ಸಮಾಜದ ನಿರ್ಮಾಣವಾಗಿರುವುದರಿಂದ ಹಾಗೂ ದಲಿತ-ದಲಿತೇತರ ಪ್ರಗತಿಪರ ಎರಡೂ ವರ್ಗಗಳು ಈ ಸಮಾನ ಧ್ಯೇಯಕ್ಕೆ ದುಡಿದಿರುವುದರಿಂದ ಎರಡನ್ನೂ ಏಕಾಕೃತಿಯ ಅವಿಭಜಿತ ಏಕಘಟಕವನ್ನಾಗಿ ಬಳಸುತ್ತಾ ಬಂದಿದ್ದೇವೆ. ಇದರ ಬಗೆಗೆ ಸಹ ಕೆಲವು ತಕರಾರುಗಳಿವೆ. 'ದಲಿತ' ಎಂಬ ಘಟಕವನ್ನು ಮೊದಲು ಬಳಸಬೇಕೋ ಬಂಡಾಯ ಎಂಬ ಘಟಕವನ್ನು ಮೊದಲು ಬಳಸಬೇಕೋ, ಅಂತೆಯೇ ಇವುಗಳನ್ನು ಒಂದು ಚಾರಿತ್ರಿಕ ಘಟ್ಟದಲ್ಲಿ ಗುರುತಿಸುವಾಗ ಯಾವುದು ಮೊದಲು ? ಯಾವುದು ಅನಂತರ ? ಎರಡರ ಸ್ವೋಪಜ್ಞ ನೆಲೆಗಳು ಯಾವುವು ? ಹಾಗೆಯೇ ಎರಡಕ್ಕೂ ಸಮಾನವಾದ ನೆಲೆಗಳು ಯಾವುವು ? ಹೀಗೆ ಇದರ ಚರ್ಚೆ ಇಂದಿಗೂ ಮುಂದುವರೆದಿದೆ. ಆದರೆ ಈ ಕಲ್ಪನೆಗಳ ಮೂಲಕ ಕಾಳಜಿ ಮುಖ್ಯವಾಗಿ ನಾನ್-ಅಕಡೆಮಿಕ್ ಆಗಿರುವುದರಿಂದ ನಮ್ಮ ಗಮನ ಅತ್ತ ಕಡೆಗಿರುವುದು ಪ್ರಧಾನ ಎಂದು ನನ್ನ ಭಾವನೆ. ಆದರೂ ಪ್ರಬಂಧದ ಭಾಗವಾಗಿ ಶೀರ್ಷಿಕೆಯ ಪಾರಿಭಾಷಿಕ ಹಾಗೂ ಪರಿಕಲ್ಪನೆಗಳನ್ನು ಮೊದಲಿಗೆ ವಿವರಿಸಿಕೊಂಡರೆ ಮುಂದಿನ ಚರ್ಚೆಗೆ ನಿರ್ದಿಷ್ಟ ದಿಕ್ಕು ದೆಸೆಗಳನ್ನು ಕಲ್ಪಿಸುವಲ್ಲಿ ಗೊಂದಲವೇರ್ಪಡುವುದಿಲ್ಲವೆಂದು ಭಾವಿಸಿದ್ದೇನೆ.

ಡಾ|| ಕಾ. ವೆಂ. ಶ್ರೀನಿವಾಸಮೂರ್ತಿ

ಆಧುನಿಕತೆ – ನಾವು ಇಲ್ಲಿ ಮೊದಲು ವಿವರಿಸಿಕೊಳ್ಳಬೇಕಾದ ಪರಿಕಲ್ಪನೆಯಾಗಿದೆ. ಇದರ ಬಗೆಗೆ ಕಳೆದ ಶತಮಾನದಲ್ಲಿ ಮತ್ತು ಮುಂದುವರೆದ ಈ ಶತಮಾನದಲ್ಲಿ ಚರ್ಚೆ ಮುಂದುವರೆದಿದೆ. ಇದರ ಬಗೆಗೆ ಪರಸ್ಪರ ವೈರುಧ್ಯಾತ್ಮಕವಾದ ಅಭಿಪ್ರಾಯಗಳು ಕೂಡ ಮಂಡಿತವಾಗಿವೆ. ಆದ್ದರಿಂದ ನನ್ನ ಕಲ್ಪನೆಯ ಆಧುನಿಕತೆಯನ್ನು ಇಲ್ಲಿ ಮೊದಲಿಗೆ ನಿರ್ವಚಿಸಿಕೊಳ್ಳಲೆತ್ನಿಸುತ್ತೇನೆ.

ಆಧುನಿಕತೆ ಎಂಬುದು ಸಾಪೇಕ್ಷವಾದುದು. ಇದು ಮೂರ್ತ, ಅಮೂರ್ತ, ಎರಡೂ ಸ್ವರೂಪಗಳಲ್ಲಿ ಕಾಣುವಂಥದ್ದು. ಇದು ಜೀವನದ ಎಲ್ಲ ಕ್ಷೇತ್ರಗಳನ್ನು, ಎಲ್ಲ ಕಾಲಗಳನ್ನು ಒಳಗೊಳ್ಳುವಂಥದ್ದು. ಇದಕ್ಕೆ ಇತ್ಯಾತ್ಮಕವಾದ ಮತ್ತು ನೇತ್ಯಾತ್ಮಕವಾದ ಎರಡೂ ಆಯಾಮಗಳಿವೆ.

ಇಲ್ಲಿ ಇತ್ಯಾತ್ಮಕ ಮತ್ತು ನೇತ್ಯಾತ್ಮಕ ಎಂದಾಗ ಉದಾಹರಣೆಗಾಗಿ ವಿಜ್ಞಾನವನ್ನು ತೆಗೆದುಕೊಳ್ಳಬಹುದು. ಇದನ್ನು ವಿವೇಕದಿಂದ ಬಳಸಿಕೊಂಡರೆ ಅಲ್ಲಿ ಪ್ರಗತಿ ಸಾಧ್ಯವಾಗುತ್ತದೆ. ಅಂತೆಯೇ ಅವಿವೇಕದಿಂದ ಬಳಸಿಕೊಂಡರೆ ಅದು ಪರಮಾಣು ಬಾಂಬಾಗಿ ಹಿರೋಷಿಮಾ, ನಾಗಸಾಕಿಗಳ ಮೇಲೆ ಬೀಳುತ್ತದೆ. ಈ ವಿಜ್ಞಾನವು ವಸ್ತು ರೂಪದಲ್ಲಿ ಪ್ರಕಟವಾದಾಗ ಮೂರ್ತವಾಗಿ, ಜ್ಞಾನದ ರೂಪದಲ್ಲಿ ಪ್ರಕಟವಾದಾಗ ಅಮೂರ್ತದ್ದಾಗಿ ಕಾಣುತ್ತದೆ. ಇದು ಜೀವನದ ಭಾಷೆ, ಶಿಕ್ಷಣ, ಆಡಳಿತ, ಕೈಗಾರಿಕೆ, ಕಟ್ಟಡ, ರಸ್ತೆ, ಅಣೆಕಟ್ಟು, ತಂತ್ರಜ್ಞಾನ ಮುಂತಾದ ಎಲ್ಲ ಕ್ಷೇತ್ರಗಳನ್ನು ಒಳಗೊಳ್ಳುತ್ತದೆ. ಎಲ್ಲ ಕಾಲಗಳನ್ನು ಎಂದಾಗ ಹನ್ನೆರಡನೆಯ ಶತಮಾನಕ್ಕೆ ಶರಣರು, ಇವತ್ತಿನ ಕಾಲಕ್ಕೆ ನಮ್ಮ ನಡುವಿನ ವಿವಿಧ ಸಿದ್ಧಾಂತಗಳು ಆಧುನಿಕ ಎನ್ನಿಸುತ್ತವೆ. ಈ ಹಿನ್ನೆಲೆಯಲ್ಲಿ ಆಧುನಿಕತೆಯನ್ನು ಅಂತಿಮವಾಗಿ ಗುರುತಿಸಿಕೊಳ್ಳುವುದು ಹೇಗೆ ಎಂಬ ಪ್ರಶ್ನೆ ಬಂದಾಗ ಒಟ್ಟು ನಮ್ಮ ಪರಂಪರೆಯ ಅರ್ವಾಚೀನ ಘಟ್ಟವನ್ನು ಆಧುನಿಕ ಎನ್ನುತ್ತೇನೆ. ಈ ಅರ್ವಾಚೀನ ಘಟ್ಟದಲ್ಲಿ ಯಾವುದು ಹೆಚ್ಚು ಪರಿಷ್ಕೃತ ರೂಪವಾಗಿರುತ್ತದೋ ಅದನ್ನು ಮಾತ್ರ ಆಧುನಿಕ ಎನ್ನುತ್ತೇವೆ. ಈ ಅರ್ವಾಚೀನ ಘಟ್ಟವನ್ನು ಇತ್ಯಾತ್ಮಕವಾಗಿ ನೋಡುವಾಗ ಅರ್ವಾಚೀನ ಪೂರ್ವಘಟ್ಟದ ಫಲಿತಗಳನ್ನು ನೇತ್ಯಾತ್ಮಕವಾಗಿ ನೋಡಬೇಕಾದ ಅಗತ್ಯವಿಲ್ಲ. ಉದಾಹರಣೆಗೆ, ಇವತ್ತಿಗೆ ಆರ್‌ಸಿಸಿ ಕಟ್ಟಡ ಆಧುನಿಕದ್ದಾಗಿ ಕಾಣ ಬರುವಾಗ, ಅದರ ಮೂಲ ರೂಪವಾದ ಹೆಂಚಿನ ಮನೆ ಮತ್ತು ಅದಕ್ಕೂ ಮೂಲ ರೂಪ ಗುಡಿಸಲನ್ನು ನೇತ್ಯಾತ್ಮಕವಾಗಿ ಅಥವಾ ಕೀಳಾಗಿ ಗ್ರಹಿಸಬೇಕಾಗಿಲ್ಲ ಎನ್ನಿಸುತ್ತದೆ. ಆದರೆ ಅದೇ ಸಂದರ್ಭದಲ್ಲಿ ನನಗೆ ಆಧುನಿಕವಾಗಿ ಇದ್ದದ್ದು ನಿಮಗೆ ಇನ್ನೂರು ವರ್ಷಗಳ ಹಿಂದೆಯೇ ಅದು ಆಧುನಿಕವೆಂದೆನ್ನಿಸಿ ಅದು ಈಗ ಆಧುನಿಕ ಎನ್ನಿಸದಿರಬಹುದು. ಉದಾಹರಣೆಗೆ, ಪರಂಪರಾಗತ ಶಿಕ್ಷಿತರು ಮತ್ತು ಕಳೆದ ಶತಮಾನದಲ್ಲಿ ಮೊದಲಿಗೆ ಈ ಶಿಕ್ಷಣವನ್ನು ದಕ್ಕಿಸಿಕೊಂಡ ಶೂದ್ರರನ್ನು ಇಲ್ಲಿ ಉದಾಹರಣೆಗಾಗಿ ನೆನೆಯಬಹುದು.

ಹೀಗೆ ಪರಂಪರೆಯ ಅಥವಾ ಅದರ ಸಾವಿರಾರು ಘಟಕಗಳ ಅರ್ವಾಚೀನ ಪರಿಷ್ಕೃತ ರೂಪವನ್ನು ನಾನು ಆಧುನಿಕ ಎಂದು ಭಾವಿಸಿಕೊಂಡಿದ್ದೇನೆ. ಹಾಗಾಗಿಯೇ ಒಟ್ಟು ನಮ್ಮ ಕಾಲದ ಚರಿತ್ರೆಯಲ್ಲಿ ೨೦ನೇ ಶತಮಾನವು ಆಧುನಿಕ ಎಂದೂ ಸಾಹಿತ್ಯ ರೂಪಗಳ ಪ್ರಶ್ನೆ ಬಂದಾಗ, ಭಾರತೀಯ ಸಂದರ್ಭದಲ್ಲಿ ಭಾವಗೀತೆ, ಸಣ್ಣಕತೆ, ಕಾದಂಬರಿ ಮುಂತಾದ ರೂಪಗಳನ್ನು ಆಧುನಿಕ ಕನ್ನಡ-ಭಾರತೀಯ ಸಾಹಿತ್ಯ ರೂಪಗಳೆಂದು ಗುರುತಿಸುವ ಪದ್ಧತಿ ಬೆಳೆದುಬಂದಿದೆ. ಅಂತೆಯೇ ಈ ಕಲ್ಪನೆಯನ್ನು ಸಾಹಿತ್ಯದ ವಸ್ತು, ಸಂವೇದನೆ, ಚಿಂತನಾ ಕ್ರಮ, ಧೋರಣೆ ಮುಂತಾದ ನೆಲೆಗಳಲ್ಲೂ ಗುರುತಿಸಬಹುದು. ಇದಿಷ್ಟು ನನ್ನ ಕಲ್ಪನೆಯ ಆಧುನಿಕತೆಯನ್ನು ನಿರ್ವಚಿಸಿಕೊಳ್ಳಲು ಸಾಕೆನ್ನಿಸುತ್ತದೆ. ಉಳಿದಂತೆ ದಲಿತ-ಬಂಡಾಯ ಸಾಹಿತ್ಯ ಪಂಥವನ್ನು ಕುರಿತು ನಾಲ್ಕು ಮಾತು ಬೇಕೆನ್ನಿಸುತ್ತದೆ.

* * *

೭೦ರ ದಶಕದಲ್ಲಿ ಮೊದಲಿಗೆ ದಲಿತ ಚಳುವಳಿಯೇ ಗಮನಾರ್ಹವಾಗಿ ಆರಂಭವಾದದ್ದು. ಅನಂತರದಲ್ಲಿ ಲೋಹಿಯಾ, ಮಾರ್ಕ್ಸ್‌ವಾದಿ ಪ್ರಭಾವದ ಬಂಡಾಯ ಚಳುವಳಿ ನಡೆದದ್ದು. ಹಾಗಾಗಿ ಬಂಡಾಯದ ಬಹುಮುಖ್ಯ ಭಾಗ ದಲಿತ ಚಳುವಳಿಯೇ ಆಗಿದೆ. ಆದ್ದರಿಂದ ಬಂಡಾಯದ ಒಂದು ಭಾಗ ದಲಿತ ಚಳುವಳಿ ಆದರೂ ಒಟ್ಟಾರೆ ಇದನ್ನು ದಲಿತ-ಬಂಡಾಯ ಎಂದು ಕರೆಯುವುದು ಔಚಿತ್ಯಪೂರ್ಣವೆನ್ನಿಸುತ್ತದೆ.

ದಲಿತ-ಬಂಡಾಯ ವ್ಯಾಖ್ಯಾನಕ್ಕಿಂತ ಅದರ ಮುಖ್ಯ ಕಾಳಜಿಗಳನ್ನು ಹೆಸರಿಸುವುದರ ಮೂಲಕ ಅದರ ಸ್ಥೂಲ ಸ್ವರೂಪವನ್ನು ಗುರುತಿಸುವುದು ಉತ್ತಮ ಎನ್ನಿಸುತ್ತದೆ. ಜಾತಿ, ವರ್ಣ, ವರ್ಗ, ಲಿಂಗ, ಕೋಮುವಾದ, ಸಾಮ್ರಾಜ್ಯಶಾಹಿ ಮುಂತಾದ ಸಾಮಾಜಿಕ-

# ಆಧುನಿಕತೆ ಮತ್ತು ದಲಿತ ಬಂಡಾಯ ನಾಟಕ

ದಲಿತ - ಬಂಡಾಯ ನಾಟಕ ಸಾಹಿತ್ಯ - ರಂಗಭೂಮಿಯ ಭಾಗವಾಗಿ ಔಪಚಾರಿಕ ನಾಟಕ ಕೃತಿಗಳೂ ರಂಗಭೂಮಿಯೂ ಇರುವಂತೆ ಬೀದಿನಾಟಕಗಳು ರಂಗಭೂಮಿಯೂ ಇರುವುದನ್ನು ಮುಖ್ಯವಾಗಿ ಗಮನಿಸಬಹುದು. ಹತ್ತೊಂಬತ್ತನೆಯ ಶತಮಾನದಲ್ಲಿ ಯೂರೋಪಿನ ಸಂದರ್ಭದಲ್ಲಿ ಶ್ರಮಿಕರ ಚಳುವಳಿಯ ಭಾಗವಾಗಿ ಹುಟ್ಟಿದ ಇದು, ಭಾರತದ 'ಪ್ರಜಾನಾಟ್ಯ ಮಂಡಳಿ' ಮತ್ತು 'ಜನನಾಟ್ಯ ಮಂಡಳಿ'ಗಳು ಕ್ರಮವಾಗಿ ಸ್ವಾತಂತ್ರ್ಯಪೂರ್ವ ಮತ್ತು ಸ್ವಾತಂತ್ರ್ಯಾ ನಂತರದಲ್ಲಿ ಕ್ರಮವಾಗಿ ಆಂಧ್ರದಲ್ಲಿ ಹುಟ್ಟಿವೆ. ಇವುಗಳ ಪ್ರಭಾವದಲ್ಲಿ ಕರ್ನಾಟಕದಲ್ಲಿ ೭೦ರ ದಶಕದಲ್ಲಿ 'ಸಮುದಾಯ' ತಂಡದ ಮೂಲಕವಾಗಿ ಈ ರಂಗಭೂಮಿ ಕರ್ನಾಟಕದ ರಂಗಭೂಮಿಯ ಇತಿಹಾಸಕ್ಕೆ ಹೊಸ ವಿಸ್ತರಣೆಯನ್ನು ಒದಗಿಸಿತು. ಇದನ್ನು ಅನುಕರಿಸಿ ರಾಜಕೀಯ ಪ್ರಜ್ಞೆಯನ್ನಿರಿಸಿಕೊಳ್ಳದ ಪ್ರಚಾರ ರಂಗಭೂಮಿ ಸಹ ಬೀದಿಯಲ್ಲಿದೆ. ಇದನ್ನು ಬೀದಿ ರಂಗಭೂಮಿ ಎಂದು ಕರೆಯಬೇಕೋ ಬೇಡವೋ ಎಂಬ ಪ್ರಶ್ನೆಗಳಿವೆ. ಆದರೆ ಇದು ಬಂಡಾಯ ರಂಗಭೂಮಿಯಂತೂ ಅಲ್ಲ ಎಂಬುದರಲ್ಲಿ ಬಹುಶಃ ಯಾರಲ್ಲೂ ಭಿನ್ನಾಭಿಪ್ರಾಯಗಳಿಲ್ಲ ಎನ್ನಿಸುತ್ತದೆ.

ಜಕೀಯ ಪ್ರಶ್ನೆಗಳು ಅದಕ್ಕೆಲ್ಲ ಮುಖ್ಯವಾದವು ಬುದನ್ನು ಗಮನಿಸಬಹುದು. ಈ ಪ್ರಜ್ಞೆ ಅಂಬೇಡ್ಕರ್, ಾರ್ಕ್ಸ್, ಲೋಹಿಯಾ, ಪೆರಿಯಾರ್‌ರವರ ವಿಚಾರ ಣಾಳಿಗಳಲ್ಲಿ ಸೈದ್ಧಾಂತಿಕ ಸ್ವರೂಪವನ್ನು ಪಡೆಯಿತು. ಲ್ಲಿ ಚರಿತ್ರೆ ಪುನಾರಚನೆಗೆ ಒಳಗಾಯಿತು. ಕಾವ್ಯ ರಾಣಗಳ ಓದು ಹೊಸ ಬಗೆಯಲ್ಲಿ ಸಾಗಿತು. ಮಾಜದ ಅಂಚಿನಲ್ಲಿದ್ದ ಸಂಸ್ಕೃತಿಗಳು ಸಾಹಿತ್ಯಕ್ಕೆ ೇರಣೆಯೂ ವಸ್ತುವೂ ಕಾಳಜಿಯೂ ಆಯಿತು. ೂಸ ಸಾಹಿತ್ಯ-ಕಲಾ ಮೀಮಾಂಸೆ ಕುಡಿಯೊಡೆಯಿತು. ರ್ಲಕ್ಷಿತ ಜನ ಸಮುದಾಯಗಳಿಂದ ಸಾವಿರಾರು ೆರೆಗಳು ಹರಿದು ಕನ್ನಡ ಸಾಹಿತ್ಯ ಸಾಗರದಲ್ಲಿ ಹೊಸ ಲೆಗಳನ್ನು ಎಬ್ಬಿಸಿದವು.

ಇಂತಹ ಸಮುದಾಯ ಕೇಂದ್ರಿತ ವ್ಯಾಪಕ ಸಾಹಿತ್ಯವು ಗಾಗಲೇ ಹೇಳಿದಂತೆ ವಿಭಿನ್ನ ಪ್ರಜ್ಞಾ ಪ್ರಣಾಳಿಗಳಲ್ಲಿ ತಾಳಿದೆ. ವರ್ಗಪ್ರಜ್ಞೆಯ ನೆಲೆಯಲ್ಲಿ ಲಿಂಗದೇವರು ಳೆಮನೆ ಅವರ 'ಚಿಕ್ಕದೇವಭೂಪ', ಸಿದ್ದಲಿಂಗಯ್ಯ ವರ 'ಪಂಚಮ', 'ಏಕಲವ್ಯ', ಎಚ್. ಎಸ್. ವಪ್ರಕಾಶ್‌ರವರ 'ಮಾದಾರಿ ಮಾದಯ್ಯ', 'ಮಹಾಚೈತ್ರ', ುಂಟೇಸ್ವಾಮಿ ಕಥಾಪ್ರಸಂಗ', ಪ್ರಸನ್ನ ಅವರ ರಂಗೆಯ ಮುಂಚಿನ ದಿನಗಳು', ಮಹಾಶ್ವೇತಾ ದೇವಿ ವರ ಹಾಗೂ ದೀಪಾ ಗಣೇಶ್ ಅನುವಾದಿತ ುಡಾಲಿ' ಮುಂತಾದ ನಾಟಕಗಳನ್ನು ಹೆಸರಿಸಬಹುದು. ಂತೆಯೇ ಜಾತಿಪ್ರಜ್ಞೆಯ ನೆಲೆಯಲ್ಲಿ ಸಿದ್ಧಲಿಂಗಯ್ಯ ವರ 'ಪಂಚಮ', 'ಏಕಲವ್ಯ', ಸಿಜಿಕೆ ಅವರ ಬೆಲ್ಚಿ, ಜಪ್ಪ ದಳವಾಯಿ ಅವರ 'ಕುಲಂ', ತೊಟ್ಟವಾಡಿ ಂಜುಂಡಸ್ವಾಮಿ ಅವರ 'ಮಾದಾರ ಚೆನ್ನಯ್ಯ' ಮತ್ತು ಲ್. ಹನುಮಂತಯ್ಯ ಅವರ 'ಅಂಬೇಡ್ಕರ್', ವರ್ಣ ್ರಜ್ಞೆಯ ನೆಲೆಯಲ್ಲಿ ಕುವೆಂಪು ಅವರ 'ಶೂದ್ರ ತಪಸ್ವಿ', ೆರಳ್‌ಗೆ ಕೊರಳ್', ರಾಜಪ್ಪ ದಳವಾಯಿ ಅವರ ಕುಲಂ', ಕೋಮು ವಿರೋಧಿ ಪ್ರಜ್ಞೆಯ ನೆಲೆಯಲ್ಲಿ ಆರ್. ಜಿ. ಹಳ್ಳಿ ನಾಗರಾಜ್ ಅವರ 'ಸಲೀಮನ ಕಂದ್ರ', ಅಜಗರವಜಾಹತ್ ಅವರ ತಿಪ್ಪೇಸ್ವಾಮಿ ಅನುವಾದಿತ 'ರಾವಿ ನದಿಯ ದಂಡೆಯ ಮೇಲೆ' ಮುಂತಾದ ನಾಟಕಗಳನ್ನು ಹೆಸರಿಸಬಹುದು.

ಇವುಗಳಂತೆ ನಾಟಕ ರೂಪದಲ್ಲಿ ಪ್ರದರ್ಶನಗೊಂಡ ಜಿಕೆ ನಿರ್ದೇಶನದ 'ಒಡಲಾಳ', ಸಿ. ಬಸವಲಿಂಗಯ್ಯ ರ್ದೇಶನದ 'ಕುಸುಮಬಾಲೆ' ಮುಂತಾದ ನಾಟಕ ಳನ್ನು ಇಲ್ಲಿ ಮರೆಯುವಂತಿಲ್ಲ.

ಇಲ್ಲಿ ದಲಿತ-ಬಂಡಾಯವೆಂದಾಗ ನಾಟಕ ಳೆಲ್ಲವೂ ಲಿಖಿತ ರೂಪದಲ್ಲಿಯೇ ಇರುತ್ತವೆಂದೂ ಅವು ಪಚಾರಿಕ ರಂಗಭೂಮಿಯಲ್ಲಿಯೇ ಪ್ರದರ್ಶನ ೊಂಡಿರುತ್ತವೆಂದೂ ಭಾವಿಸುವಂತಿಲ್ಲ. ಅಂತಹ ಡೆಯಲ್ಲಿ ನೂರಾರು ಬೀದಿ ನಾಟಕಗಳಿವೆ. ಇವುಗಳಲ್ಲಿ ಬೆಲ್ಚಿ'ಯಂಥವು ಸಾವಿರಾರು ಪ್ರದರ್ಶನಗಳನ್ನು ಂಡಿವೆ. (ಬೆಲ್ಚಿ ಇತ್ತೀಚೆಗೆ ಮಾತ್ರ ಪುಸ್ತಕ ರೂಪವನ್ನು ಂಡಿದೆ; ಅದೂ ೨,೫೦೦ ಪ್ರದರ್ಶನಗಳ ನಂತರ.)

ದಲಿತ-ಬಂಡಾಯ ನಾಟಕ ಸಾಹಿತ್ಯ-ರಂಗ ೂಮಿಯ ಭಾಗವಾಗಿ ಔಪಚಾರಿಕ ನಾಟಕ ಕೃತಿಗಳೂ ರಂಗಭೂಮಿಯೂ ಇರುವಂತೆ ಬೀದಿನಾಟಕಗಳು ರಂಗಭೂಮಿಯೂ ಇರುವುದನ್ನು ಮುಖ್ಯವಾಗಿ ಗಮನಿಸಬಹುದು. ಹತ್ತೊಂಬತ್ತನೆಯ ಶತಮಾನದಲ್ಲಿ ಯೂರೋಪಿನ ಸಂದರ್ಭದಲ್ಲಿ ಶ್ರಮಿಕರ ಚಳುವಳಿಯ ಭಾಗವಾಗಿ ಹುಟ್ಟಿದ ಇದು, ಭಾರತದ 'ಪ್ರಜಾನಾಟ್ಯ ಮಂಡಳಿ' ಮತ್ತು 'ಜನನಾಟ್ಯ ಮಂಡಳಿ'ಗಳು ಕ್ರಮವಾಗಿ ಸ್ವಾತಂತ್ರ್ಯಪೂರ್ವ ಮತ್ತು ಸ್ವಾತಂತ್ರ್ಯಾನಂತರದಲ್ಲಿ ಕ್ರಮವಾಗಿ ಆಂಧ್ರದಲ್ಲಿ ಹುಟ್ಟಿವೆ. ಇವುಗಳ ಪ್ರಭಾವದಲ್ಲಿ ಕರ್ನಾಟಕದಲ್ಲಿ ೭೦ರ ದಶಕದಲ್ಲಿ 'ಸಮುದಾಯ' ತಂಡದ ಮೂಲಕವಾಗಿ ಈ ರಂಗಭೂಮಿ ಕರ್ನಾಟಕದ ರಂಗಭೂಮಿಯ ಇತಿಹಾಸಕ್ಕೆ ಹೊಸ ವಿಸ್ತರಣೆಯನ್ನು ಒದಗಿಸಿತು. ಇದನ್ನು ಅನುಕರಿಸಿ ರಾಜಕೀಯ ಪ್ರಜ್ಞೆಯನ್ನಿರಿಸಿಕೊಳ್ಳದ ಪ್ರಚಾರ ರಂಗಭೂಮಿ ಸಹ ಬೀದಿಯಲ್ಲಿದೆ. ಇದನ್ನು ಬೀದಿ ರಂಗಭೂಮಿ ಎಂದು ಕರೆಯಬೇಕೋ ಬೇಡವೋ ಎಂಬ ಪ್ರಶ್ನೆಗಳಿವೆ. ಆದರೆ ಇದು ಬಂಡಾಯ ರಂಗಭೂಮಿಯಂತೂ ಅಲ್ಲ ಎಂಬುದರಲ್ಲಿ ಬಹುಶಃ ಯಾರಲ್ಲೂ ಭಿನ್ನಾಭಿಪ್ರಾಯ ಗಳಿಲ್ಲ ಎನ್ನಿಸುತ್ತದೆ.

ಈ ತಾತ್ವಿಕ ಆಕೃತಿಯ ನಾಟಕಗಳ ಸಾಲಿನಲ್ಲಿಯೇ ನಾವು ಗುರುತಿಸಬೇಕಾದ ಅನೇಕ ಅನುವಾದಿತ ನಾಟಕ ಗಳಿವೆ. 'ದಿ ಕಕೇಷಿಯನ್ ಚಾಕ್ ಸರ್ಕಲ್' ಹಾಗೂ ಈಗಾಗಲೇ ಪ್ರಸ್ತಾಪಿಸಿದಂತಹ 'ರುಡಾಲಿ', 'ರಾವಿ ನದಿಯ ದಂಡೆಯ ಮೇಲೆ' ಮುಂತಾದ ಅನೇಕ ನಾಟಕಗಳಿವೆ. ಇವು ಅನುವಾದಿತಗೊಂಡು ಕನ್ನಡಕ್ಕೆ ಬಂದವೆಂದಮೇಲೆ ಅವುಗಳ ಧೋರಣೆಯನ್ನನುಸರಿಸಿ ಅವು ಕನ್ನಡದ ಬಂಡಾಯ ನಾಟಕಗಳೆಂದೇ ಪರಿಗಣಿತ ವಾಗುವುದು ಸರಿಯೆನ್ನಿಸುತ್ತದೆ. ಕಾರಣ, ದಲಿತ-ಬಂಡಾಯಕ್ಕೆ ಭಾಷೆಯ ಗಡಿಗಳಿಲ್ಲ. ನೊಂದವರ ನಡುವೆ ರಾಜ್ಯ, ರಾಷ್ಟ್ರಗಳೆಂಬ ರಾಜಕೀಯ ಗಡಿಗಳೂ ಇಲ್ಲ. ಹಾಗಾಗಿ ಈ ಜನಕೇಂದ್ರಿತ ಹಾಗೂ ಜನ ವಿಮೋಚನೆಯ ಕನ್ನಡ ಅನುವಾದಿತ ಈ ನಾಟಕಗಳು ಸಹ ಕನ್ನಡದ ದಲಿತ-ಬಂಡಾಯ ನಾಟಕಗಳ ಸ್ವರೂಪ ಧಾರಣೆಯಲ್ಲಿ ಪ್ರಮುಖವೆನ್ನಿಸುತ್ತವೆ.

ಹೀಗೆ ಪ್ರಬಂಧದ ಎರಡು ಘಟಕಗಳಾದ 'ಆಧುನಿಕತೆ' ಮತ್ತು 'ಕನ್ನಡ ದಲಿತ-ಬಂಡಾಯ ನಾಟಕ' ಎಂಬ ಎರಡು ಪರಿಕಲ್ಪನೆಗಳನ್ನು ವಿವರಿಸಿಕೊಂಡ ಮೇಲೆ ಹಾಗೂ ಅದನ್ನು ಒಟ್ಟು ಚರ್ಚೆಗೆ ಬೇಕಾದ ತಾತ್ವಿಕ ಭೂಮಿಕೆಯನ್ನಾಗಿಸಿಕೊಂಡು ಪಠ್ಯ ಕೇಂದ್ರಿತ ಚರ್ಚೆಗೆ ಇಳಿಯುವುದು ಮುಕ್ತವೆನ್ನಿಸುತ್ತದೆ. ಇದರ ಮುಂದುವರೆದ ಭಾಗವಾಗಿ ಕೆಲವು ನಾಟಕಗಳನ್ನು ಮಾತ್ರ ಇಲ್ಲಿ ಕೊಂಚ ವಿವರವಾಗಿ ವಿವರಿಸಿಕೊಳ್ಳಲಾಗಿದೆ.

**ಸಿದ್ಧಲಿಂಗಯ್ಯನವರ 'ಏಕಲವ್ಯ' ಮತ್ತು 'ಪಂಚಮ'**

ಆಧುನಿಕತೆಯ ದೃಷ್ಟಿಯಿಂದ ನೋಡಿದಾಗ ಇವತ್ತಿಗೆ ದಲಿತ-ಬಂಡಾಯವೇ ಆಧುನಿಕ ಕನ್ನಡ ಸಾಹಿತ್ಯವೆನ್ನಿಸುತ್ತದೆ.

ದಲಿತ ಸಂವೇದನೆ ಒಂದಿಲ್ಲೊಂದು ಬಗೆಯಲ್ಲಿ ಈ ಪೂರ್ವ ಸಂದರ್ಭದಲ್ಲಿ ಮೂಡಿದ್ದರೂ ಇದರ ಅಭಿವ್ಯಕ್ತಿಯ ಸ್ವರೂಪವೇ ಭಿನ್ನ. ರಾಜಕೀಯ-ಸಾಮಾಜಿಕ ಬದಲಾವಣೆಗಳನ್ನು ಕೇಂದ್ರೀಕರಿಸಿದ ಮುಖ್ಯ ಆರ್ಥಿಕ ರಾಜಕಾರಣ ಇಲ್ಲಿದೆ. ಇಂತಹ ವಿಶಿಷ್ಟ ಸ್ವರೂಪದಲ್ಲಿ ಸಾಮುದಾಯಿಕ ನೆಲೆಯಲ್ಲಿ ಮೈತಳೆಯುವ ದಲಿತ ಸಂವೇದನೆ ಇಲ್ಲಿ ಆಧುನಿಕವಾದುದಾಗಿ ಕಾಣುತ್ತದೆ. ಇಂತಹ ಐಡಿಯಾಲಜಿಯನ್ನು ಇಟ್ಟುಕೊಂಡ ಕಾರಣಕ್ಕಾಗಿ ಇದರ ಸಾಹಿತ್ಯದ ವಸ್ತು, ಭಾಷೆ ಇವೆಲ್ಲವನ್ನೂ ಒಳಗೊಂಡ ತಂತ್ರವು ವಿಶಿಷ್ಟವಾಗಿ ವ್ಯಾಪಕ ಜನಾಭಿಮುಖಿ ಧೋರಣೆಯನ್ನು ತಳೆಯುವುದು. ಈ ಎಲ್ಲ ಸಾಹಿತ್ಯದ ಉಪಕ್ರಮ ಇಲ್ಲಿ ಸಾವಯವ ಸಂಬಂಧವನ್ನು ಪಡೆದು ಕನ್ನಡ ದಲಿತ ಸಾಹಿತ್ಯವು

## ಮಗು ಇದ್ದಿದ್ದರೆ...

ನನಗೊಂದು ಮಗು ಇದ್ದಿದ್ದರೆ
ಆಡಲು ಆಗಸದ ಚಂದ್ರಮನ
ತಂದುಕೊಡುತ್ತಿದ್ದೆ

ನನಗೊಂದು ಮಗು ಇದ್ದಿದ್ದರೆ
ಸ್ವರ್ಗದ ಕಾಮಧೇನುವಿನ
ಕ್ಷೀರವ ಹಿಂಡಿ ತಂದು
ಕುಡಿಸುತ್ತಿದ್ದೆ

ನನಗೊಂದು ಮಗು ಇದ್ದಿದ್ದರೆ
ಮುಗಿಲಿಗೆ ತೊಟ್ಟಿಲ ಕಟ್ಟಿ
ಜೋಗುಳ ಹಾಡಿ ದಿನಾ
ತೂಗುತ್ತಿದ್ದೆ

ಆದರೇನು ?
ಇಷ್ಟೆಲ್ಲ ಕನಸುಗಳನ್ನು
ಹೊತ್ತ ನಾನು
ಹೂ ಬಿಡದ ಬಳ್ಳಿ



**ಸಹನಾ ಕಾಂತಬೈಲು**
ಬಾಲಂಬಿ ಅಂಚೆ, ಮಡಿಕೇರಿ ತಾಲೂಕು - ೫೭೧೨೩೧

ಹಾಗೆಯೇ ಇದನ್ನು ಮುಖ್ಯ ಭಾಗನ್ನಾಗಿಸಿಕೊಂಡಿರುವ ಬಂಡಾಯ ಸಾಹಿತ್ಯವು ಕನ್ನಡ ಸಾಹಿತ್ಯಕ್ಕೆ ಹೊಸ ವಿಸ್ತರಣೆಯಾಗಿ ಕಂಡುಬಂದಿರುವುದು. ಇಲ್ಲಿಯ ಸಾಹಿತ್ಯವು ತನ್ನ ಸ್ವರೂಪಕ್ಕೆ ಅನುಗುಣವಾಗಿ ತನ್ನ ಬೇರುಗಳನ್ನು ಸಮಾಜದ ಸಾಮಾಜಿಕ, ರಾಜಕೀಯ, ಚಿಂತನೆ, ಚಳುವಳಿ ಮುಂತಾದ ನೆಲೆಗಳಲ್ಲಿ ಇರಿಸಿಕೊಂಡಿದೆ. ಇಲ್ಲಿ ಕಾಣುವ ವರ್ಗ, ವರ್ಣ ಸಂವೇದನೆಗಳು ಕ್ರಮವಾಗಿ ನಿರಂಜನ, ಕುವೆಂಪು ಮುಂತಾದವರ 'ಚಿರಸ್ಮರಣೆ', 'ಶೂದ್ರತಪಸ್ವಿ' ಮುಂತಾದ ಕೃತಿಗಳಲ್ಲಿ ಈ ಮೊದಲೇ ಕಂಡುಬಂದಿತ್ತು. ಆದರೆ ಇದರ ಜೊತೆಗೆ ಭಾರತದ ಇನ್ನೊಂದು ವಾಸ್ತವವಾದ ಜಾತಿ ಮೊಟ್ಟಮೊದಲಿಗೆ ಇಲ್ಲಿಯೇ ವ್ಯಾಪಕವಾಗಿ ಚರ್ಚೆಗೊಳಗಾಗುವುದು.




ದಲಿತರು ಶಿಕ್ಷಣದ ಮೂಲಕ ಆಧುನಿಕ ಲೋಕವನ್ನು ಪ್ರವೇಶಿಸಿದರು. ದಲಿತೇತರರಿಗೆ ಶಿಕ್ಷಣವು ಈ ಹೊತ್ತಿನ ಕಾಲಕ್ಕೆ ಆಧುನಿಕ ವಿಚಾರವೇನೂ ಅಲ್ಲ. ಅದು ಈಗಾಗಲೇ ಶೂದ್ರರಿಗೆ ನೂರು ವರ್ಷಗಳ ಹಿಂದೆಯೇ ಸಿಗಲಾರಂಭಿಸಿದೆ. ಆದರೆ ಇದು ದಲಿತರಿಗೆ ಗಮನಾರ್ಹ ಸಂಖ್ಯೆಯಲ್ಲಿ ಸಿಗಲಾರಂಭಿಸಿದ್ದು ಸ್ವಾತಂತ್ರ್ಯೋತ್ತರ ಸಂದರ್ಭದಲ್ಲಿ. ಪರಿಣಾಮವಾಗಿ ೭೦ರ ದಶಕದ ಹೊತ್ತಿಗೆ ದಲಿತ ಶಿಕ್ಷಿತ ಪ್ರಮಾಣವು ಗಮನಾರ್ಹವಾಗಿ ಕಾಣಿಸುತ್ತದೆ. ಈ ವರ್ಗಕ್ಕೆ ತಾವು ಕಲಿತ ಔಪಚಾರಿಕ ಮತ್ತು ಅನೌಪಚಾರಿಕ ಶಿಕ್ಷಣ (ಚಳುವಳಿ, ಭಾಷಣ, ಸಾಹಿತ್ಯ ಮೂಲಗಳು)ದ ಮೂಲಕ ತಮ್ಮ ಇತಿಹಾಸದ ದಾರುಣತೆ ಅರಿವಾದ ರೀತಿಯಲ್ಲಿಯೇ ವರ್ತಮಾನದ ಬಗೆಗೆ ಜಾಗೃತಿಯೂ ಮೂಡಿತು. ಇಂತಹ ಜಾಗೃತ ವರ್ಗದ ಮೇಲೆ ಮಾರ್ಕ್ಸ್ ಮತ್ತು ಅಂಬೇಡ್ಕರ್ ಅವರ ಪ್ರಭಾವ ಗಾಢವಾಗಿದೆ. ಆದ್ದರಿಂದಲೇ ಇಲ್ಲಿಯ ಮುಖ್ಯ ಕೃತಿಗಳಲ್ಲಿ ಏಕಕಾಲಕ್ಕೆ ವರ್ಗಪ್ರಜ್ಞೆ ಮತ್ತು ಜಾತಿಪ್ರಜ್ಞೆ ಎರಡೂ ಒಟ್ಟಿಗೆ ಕಾಣುವುದು. ಈ ಎರಡೂ ಪ್ರಜ್ಞೆಗಳು ಮಿಳಿತಗೊಂಡು ವ್ಯಾಪಕವಾಗಿ ಕಾಣುವ ಚಿಂತನಾಕ್ರಮವೇ ದಲಿತ-ಬಂಡಾಯದ ಸ್ವೋಪಜ್ಞತೆ. ಈ ನೆಲೆಯಲ್ಲಿ ಮೊದಲಿಗೆ ಸಿದ್ಧಲಿಂಗಯ್ಯನವರ 'ಏಕಲವ್ಯ' ನಾಟಕವನ್ನು ನೋಡಬಹುದಾಗಿದೆ.

ಇಲ್ಲಿಯ ಏಕಲವ್ಯ ತನ್ನ ಜಾತಿಯ ಕಾರಣಕ್ಕಾಗಿ ದ್ರೋಣನಿಂದ ವಿದ್ಯಾವಂಚಿತನಾದ. ಅಂತೆಯೇ ಕುರುಕ್ಷೇತ್ರವು ವಾಸ್ತವವಾಗಿ ಉಳ್ಳವರ ನಡುವಿನ ಹೋರಾಟವೇ ಹೊರತು ಬೇರೆ ಅಲ್ಲ. ಇಲ್ಲಿ ಪರಸ್ಪರ ಎದುರಿಗಿರುವವರು ಊಳಿಗಮಾನ್ಯ ಪ್ರಭುಗಳು ಮಾತ್ರ. ಇವರು ಪಾಂಡವರಿರಲಿ, ಕೌರವರಿರಲಿ; ಅವರಲ್ಲಿಯೇ ಕರ್ಣನಿರಲಿ, ಅರ್ಜುನನಿರಲಿ, ದುರ್ಯೋಧನನಿರಲಿ – ಇವರಲ್ಲಿ ಒಬ್ಬ ಉದಾರವಾದಿಯಾಗಿರಬಹುದು; ಇನ್ನೊಬ್ಬ ಉದಾರವಾದಿಯಾಗಿಲ್ಲದಿರಬಹುದು. ಆದರೆ ಇವರಲ್ಲಿ ಮೂಲಭೂತ ವ್ಯತ್ಯಾಸವೇನೂ ಇಲ್ಲ. ಆದ್ದರಿಂದ ತಾನು ಉಳ್ಳವರ ಹೋರಾಟದಲ್ಲಿ ಭಾಗಿಯಾಗುವುದು ಸೂಕ್ತವಲ್ಲ ಎಂದು ಏಕಲವ್ಯ ಭಾವಿಸುತ್ತಾನೆ.

ಅಂತೆಯೇ ಬಲಗೈ ಹೆಬ್ಬೆರಳನ್ನು ಕಳೆದುಕೊಂಡ ಏಕಲವ್ಯ ಎಡಗೈ ಹೆಬ್ಬೆರಳಲ್ಲಿ ಬಿಲ್ವಿದ್ಯೆಯನ್ನು ಕಲಿತು ಪಾಂಡವ-ಕೌರವರಿಬ್ಬರೂ ಕುರುಕ್ಷೇತ್ರದಲ್ಲಿ ತಮ್ಮ ತಮ್ಮ ಪಕ್ಷ ಸೇರಬೇಕೆಂದು ನೇರವಾಗಿ ಬಂದು ಆಹ್ವಾನಿಸುವಷ್ಟರ ಮಟ್ಟಿಗೆ ಬೆಳೆಯುತ್ತಾನೆ. ಇದು ಕ್ರಾಂತಿಯ ದಮನ ಎಂದೂ ಸಾಧ್ಯವಿಲ್ಲ; ಅದು ಒಂದೆಡೆ ದಮನವಾದಂತೆ ಕಂಡರೂ ಅದು ರಕ್ತಬೀಜಾಸುರನಂತೆ ನಿರಂತರತೆಯನ್ನು ಪ್ರಕಟಿಸುತ್ತದೆ ಎಂಬುದನ್ನು ಧ್ವನಿಸುತ್ತದೆ. ಇದೇ ವಸ್ತುವನ್ನು ಇಟ್ಟುಕೊಂಡು ಗೋವಿಂದ ಪೈ, ಕುವೆಂಪು, ಪರ್ವತವಾಣಿ ಮುಂತಾದ ಅನೇಕರು ವಿವಿಧ ದೃಷ್ಟಿ, ಬಗೆಗಳ ನಾಟಕಗಳನ್ನು ಬರೆದಿದ್ದರೂ ಚಳುವಳಿಯ ಮೂಲ ಸ್ವರೂಪ, ಕ್ರಾಂತಿಗೆ ಜನತಾ ನಾಯಕತ್ವವಿರುವುದರಿಂದ ಒಬ್ಬ ನಾಯಕನ ಸಾವು ಅಲ್ಲಿ ಅಂತಿಮವಲ್ಲ ಎಂಬ ಅನೇಕ ಒಳನೋಟಗಳು ಇಲ್ಲಿ ಮೊದಲಿಗೆ ಮಿಂಚುತ್ತವೆ.

ಹೀಗೆ ಸಿದ್ಧಲಿಂಗಯ್ಯನವರು ಇಲ್ಲಿ ಹಳೆಯ ವಸ್ತುವನ್ನು ಸ್ವೀಕರಿಸಿದರೂ ತಮ್ಮ ಸೈದ್ಧಾಂತಿಕ ಮೂಸೆಯಲ್ಲಿ ಅದನ್ನು ಹೊಸ ಆಕೃತಿಯನ್ನಾಗಿ ಮೂಡಿಸಿದ್ದಾರೆ. ಈ ಮೂಲಕ ಕೃತಿ ಆಧುನಿಕ ಸಂವೇದನೆಯದ್ದಾಗಿ ಕಂಡುಬರುತ್ತದೆ.

ಶತಶತಮಾನಗಳಿಂದ ಅಕ್ಷರ ವಂಚಿತ ಸಮುದಾಯವೊಂದು ಅಕ್ಷರ ಪಡೆದು ಆಧುನಿಕ ಲೋಕಕ್ಕೆ ಪ್ರವೇಶಿಸುವಾಗ ಇದುವರೆಗೂ ಈ ಅವಸ್ಥೆಗೆ ಕಾರಣವಾದ ಶೋಷಕ ವರ್ಗದಲ್ಲಿ ತಲ್ಲಣಗಳು ಮೂಡದೇ ಇರುವುದು ಸಾಧ್ಯವಿಲ್ಲ. ಅಂತೆಯೇ ಸಮಾಜಕ್ಕೆ ಹಳತಾಗಿರುವ ಆದರೆ ತನಗೆ ಮಾತ್ರ ಆಧುನಿಕವೆನಿಸಿರುವ ಅಕ್ಷರ, ಉದ್ಯೋಗ, ಆಡಳಿತ ಮುಂತಾದ ಔಪಚಾರಿಕ ವಲಯಗಳಿಗೆ ತಮ್ಮನ್ನು ತೆರೆದುಕೊಳ್ಳುವ ದಮನಿತ ಲೋಕ ಸಹ ಅನೇಕ ತಲ್ಲಣಗಳನ್ನು ಅನುಭವಿಸುತ್ತದೆ. ಈ ಎರಡೂ ವರ್ಗಗಳು ಅಂದರೆ ಶೋಷಕ ಮತ್ತು ಶೋಷಿತ ವರ್ಗಗಳು ನಮ್ಮ ರಾಜಕೀಯ ವ್ಯವಸ್ಥೆಯ ಭಾಗವಾಗಿರುವ ಈ ಶಿಕ್ಷಣ, ಉದ್ಯೋಗ, ಆಡಳಿತ ಮುಂತಾದ ಔಪಚಾರಿಕ ವಲಯಗಳಲ್ಲಿ ಒಂದುಗೂಡಿ ಕೆಲಸ ಮಾಡಬೇಕಿರುವುದು ಅನಿವಾರ್ಯ. ಅಂಥಲ್ಲಿ ಶೋಷಕ ವರ್ಗದ ಆಂತರಿಕ ವರ್ತನೆಗಳು ಹೇಗಾದರೂ ಇರಲಿ; ಬಾಹ್ಯ ವರ್ತನೆಗಳು ಮಾತ್ರ ಸಂವಿಧಾನಾತ್ಮಕವಾಗಿಯೇ ಇರಬೇಕಾದದ್ದು ಶಾಸನಬದ್ಧ. ಆದರೂ ಜಡವ್ಯವಸ್ಥೆಯ ಹಾಗೂ ಸಾವಿರಾರು ವರ್ಷಗಳ ಅಸ್ಪೃಶ್ಯತೆಯ ಆಚರಣೆಯ ಸಂಸ್ಕಾರದ ವಕ್ತಾರರು ತಮ್ಮ ಬಾಹ್ಯವರ್ತನೆಗಳಲ್ಲಿ ಸಹ ಕೆಲವೊಮ್ಮೆ ಅಸಹ್ಯ, ಅಸಡ್ಡೆಯನ್ನು ವ್ಯಕ್ತಪಡಿಸುವುದು ಉಂಟು. ಇವತ್ತಿನ ಸಂದರ್ಭದ ವಿಚಾರ ಬೇರೆ. ಇದು ಸ್ವಲ್ಪಮಟ್ಟಿಗೆ ಸುಧಾರಿಸಿದೆ. ಆದರೆ ದಲಿತ ಸಮುದಾಯವು ಗಮನಾರ್ಹ ಸಂಖ್ಯೆಯಲ್ಲಿ ಈ ಔಪಚಾರಿಕ ವಲಯವನ್ನು ಮೊದಲಿಗೆ ಪ್ರವೇಶಿಸುತ್ತಿದ್ದಾಗ ಇವರ ಸ್ಕಾಲರ್‌ಶಿಪ್, ರಿಸರ್ವೇಷನ್, ಹಾಸ್ಟೆಲ್ ಮುಂತಾದವುಗಳನ್ನು ಕುರಿತು ದಲಿತೇತರರಲ್ಲಿ ಥರಾವರಿ ಭಾವನೆಗಳು ಮೂಡಿವೆ; ಅವು ಇಂದಿಗೂ ಅನೇಕರಲ್ಲಿ ಜಾಗೃತಾವಸ್ಥೆಯಲ್ಲಿವೆ.

ಇಂತಹ ವರ್ಗವನ್ನು ಎದುರುಗೊಳ್ಳುವ ದಲಿತ ಸಮುದಾಯದಲ್ಲಿ ಮೂಡುವ ಆಂತರಿಕ ತಲ್ಲಣಗಳು, ಪಲ್ಲಟಗಳು, ವರ್ತನೆಗಳು ಥರಾವರಿಯಾಗಿವೆ. ಇಲ್ಲಿ ಶೋಷಿತ ಸಂಸ್ಕೃತಿಯ ಸಂಕೀರ್ಣ ಮುಖಗಳು ಅನಾವರಣಗೊಳ್ಳುತ್ತವೆ. ಇಂತಹ ಎರಡು ವರ್ಗಗಳ ಮುಖಾಮುಖಿ ಸಿದ್ಧಲಿಂಗಯ್ಯನವರ 'ಪಂಚಮ' ನಾಟಕದ ವಸ್ತುವಾಗಿದೆ.

ಇಲ್ಲಿ ಸವರ್ಣೀಯರಿಗೆ, ಅವರ ದೃಷ್ಟಿಧೋರಣೆ, ವರ್ತನೆಗಳಿಗೆ ಉದ್ಯೋಗ ಪೂರ್ವ ತರಬೇತಿ ನೀಡುವ ಹರಿಜನೋದ್ಧಾರ ಮಂಡಳಿಯ ಐ.ಎ.ಎಸ್. ಅಧಿಕಾರಿಯಾದ ಹಯವದನ ರಾವ್ ಪಾತ್ರವಾಗಿ ಬರುತ್ತಾನೆ. ಸರ್ಕಾರದ ಅವಕಾಶಗಳಿಂದ ಶಿಕ್ಷಿತರಾಗಿ, ಸ್ಥಿತ್ಯಂತರಕ್ಕೆ ಒಳಗಾಗುತ್ತಿರುವ ದಲಿತ ಸಮುದಾಯದ ಹಾಗೂ ಅದರಲ್ಲಿಯ ವಿವಿಧ ಜನ ಮಾದರಿಗಳಿಗೆ ಇಲ್ಲಿ ಪುಟ್ಟಲಕ್ಕಮ್ಮ, ಶೇಷಾದ್ರಿ, ಗಾಂಧಿದಾಸ್, ಹೊಲೆಮಾದಿಗ ಮುಂತಾದ ಪಾತ್ರಗಳು ಇವೆ.

ಹೀಗೆ ಶಿಕ್ಷಣ ಪಡೆದು ಉದ್ಯೋಗಾಕಾಂಕ್ಷಿಗಳಾದ ದಲಿತ ಸಮುದಾಯದ ಮೊದಲನೇ ತಲೆಮಾರು ಸವರ್ಣೀಯರಿಂದ ಅನೇಕ ಮಾನಸಿಕ ಹಿಂಸೆಗಳಿಗೆ ಗುರಿಯಾಗಿದೆ. ಅದೇ ಸಂದರ್ಭದಲ್ಲಿ ದಲಿತ ಸಮುದಾಯದ ಒಂದು ವರ್ಗ ಶಿಕ್ಷಣ ಪಡೆದ ಹಿನ್ನೆಲೆಯಲ್ಲಿ ತಮ್ಮ ಪರಿಸ್ಥಿತಿಯನ್ನು ಸ್ಥಾನಾಂತರಗೊಳಿಸಿಕೊಳ್ಳುವುದಕ್ಕೆ ಯತ್ನಿಸುತ್ತದೆ. ಇನ್ನೊಂದು ವರ್ಗವನ್ನು ಸಂಸ್ಕೃತಿ ಪರವಾದ ಕೀಳರಿಮೆ ಕಾರಣದಿಂದ ಚಿಕ್ಕಯಂಗಟ ಇಲ್ಲಿ ಎಸ್.ಶೇಷಾದ್ರಿ ಆಗುವುದು; ದೇವತೆ ಮುಳುಕಟಮ್ಮನ ಜಾಗದಲ್ಲಿ ರಾಘವೇಂದ್ರಸ್ವಾಮಿ ನೆಲೆಯೂರುವುದು ಸಾಧ್ಯವಾಗುತ್ತದೆ. ಅಂತೆಯೇ ಇದೇ ಶೇಷಾದ್ರಿಯ ಮೈಮೇಲೆ ಜನಿವಾರ ಸಹ ಬಂದು ಕೂರುತ್ತದೆ. ಅಲ್ಲದೆ, ಮಾತನಾಡುವಾಗ ಈತ ಶಕಾರ ಸಕಾರ ಹಾಗೂ ಮಹಾಪ್ರಾಣಾಕ್ಷರಗಳ ಉಚ್ಚಾರಣೆಯ ವಿಚಾರದಲ್ಲಿ ತಲ್ಲಣಕ್ಕೊಳಗಾಗುತ್ತಾನೆ. ಇನ್ನೊಂದು ವರ್ಗ ಈ ಆಧುನಿಕ ಕಾಲದಲ್ಲಿಯೂ ದಲಿತರ ಮೇಲಿನ ಅಧಿಕಾರಶಾಹಿಯ ದೌರ್ಜನ್ಯವನ್ನು ಕಂಡು ಉಗ್ರ ಕ್ರಾಂತಿಕಾರಿಯಾಗುತ್ತದೆ. ಅದು ಶೋಷಕ ಹಯವದನ ರಾವ್‌ನನ್ನು ಬಡಿಯುವ, ದಲಿತರ ಮೇಲಿನ ದೌರ್ಜನ್ಯವನ್ನು ಸಹಿಸದ, ಹೋರಾಟಗಾರ ಹೊಲೆಮಾದಿಗನಲ್ಲಿ ವ್ಯಕ್ತವಾಗುತ್ತದೆ. ಸರ್ಕಾರ ಕೊಡುತ್ತಿರುವ ಸವಲತ್ತುಗಳು ಶೋಷಿತರ ಹಕ್ಕುಗಳು ಹಾಗೂ ಸಮಸಮಾಜದ ನಿರ್ಮಾಣದ ಸಂವಿಧಾನಾತ್ಮಕ ಕರ್ತವ್ಯ ಎಂಬ ಭಾವನೆ ಸಹ ಇದೇ ಹೋರಾಟಗಾರನಲ್ಲಿದೆ.

ಹೀಗೆ ದಲಿತಲೋಕವು ಈಗಾಗಲೇ ಅನ್ಯ ಸಮಾಜಕ್ಕೆ ಹಳೆಯದಾದ ಶಿಕ್ಷಣ, ಉದ್ಯೋಗ ಮುಂತಾದ ವಿಚಾರಗಳನ್ನು, ತನ್ನ ಸಂದರ್ಭಕ್ಕೆ ಮಾತ್ರ ಕಾಣುವ ಅವುಗಳನ್ನು, ಆಧುನಿಕತೆಯ ಆಕರಗಳನ್ನಾಗಿ ಕಾಣುತ್ತದೆ. ಅವುಗಳ [illegible]

ನೇಕ ಬಗೆಯ ತಲ್ಲಣಗಳು, ಸ್ಥಿತ್ಯಂತರಗಳು ಅಲ್ಲಿ ಮೂಡುತ್ತವೆ. ಅಂತಿಮವಾಗಿ ಹೋರಾಟ ಸಾಧ್ಯವಾಗಬೇಕು; ಅದರ ಮೂಲಕ ತಮ್ಮ ಪಾಲನ್ನು ಪಡೆಯಬೇಕು; ಎಲ್ಲರೂ ಬದುಕಲು ಸಾಧ್ಯವಾಗುವ ಸಮಸಮಾಜ ನಿರ್ಮಾಣ ಸಾಧ್ಯವಾಗಬೇಕು ಎಂಬ ಆಶಯದಲ್ಲಿ ನಾಟಕವು ಕೊನೆಗೊಳ್ಳುತ್ತದೆ.

ಹೀಗೆ ೨೦ರ ದಶಕದ ಭಾರತೀಯ-ಕರ್ನಾಟಕದ ದಲಿತ ಮತ್ತು ದಲಿತೇತರ ಜಗತ್ತುಗಳ ಮುಖಾಮುಖಿಯಲ್ಲಿಯ ಸಾಮಾಜಿಕ, ರಾಜಕೀಯ, ಭಾಷಿಕ, ಸಾಂಸ್ಕೃತಿಕ, ಆರ್ಥಿಕ ಸಂದರ್ಭದ ಸೂಕ್ಷ್ಮಗಳನ್ನು ಅನೇಕ ಒಳನೋಟಗಳ ಮೂಲಕವಾಗಿ ಈ ನಾಟಕವು ಕಟ್ಟಿಕೊಟ್ಟಿದೆ. ಇಡೀ ಕೃತಿಯಲ್ಲಿ ಇರುವ ಲವಲವಿಕೆಗೆ ನಾಟಕಕಾರರ ಹಾಸ್ಯಪ್ರಜ್ಞೆಯೂ ಕಾರಣವಾಗಿದೆ. ಆದರೆ ಅಂತಿಮವಾಗಿ ಇದು ವಿಷಾದಪೂರ್ಣ ವಿಡಂಬನಾತ್ಮಕ ಸಾಮಾಜಿಕ ಕಳಕಳಿಯ ನಾಟಕವಾಗಿ ಬೆಳೆದು ನಿಲ್ಲುತ್ತದೆ.

**ಲಿಂಗದೇವರು ಹಳೆಮನೆ ಅವರ 'ಚಿಕ್ಕದೇವಭೂಪ'**

ಕನ್ನಡದ ಆಧುನಿಕ ಚಿಂತನೆಯಲ್ಲಿ ವರ್ಗಪ್ರಜ್ಞೆಯೂ ಒಂದು. ಈ ಪ್ರಜ್ಞೆ ಆಳುವ ಮತ್ತು ಆಳಿಸಿಕೊಳ್ಳುವ ಎರಡು ವರ್ಗಗಳ ನಡುವಿನ ಸಂಘರ್ಷವನ್ನು ಪ್ರಕಟಿಸುತ್ತದೆ. ಮಾರ್ಕ್ಸ್‌ವಾದದ ಪ್ರಮುಖ ಭಾಗವಾಗಿ ಇದು ಮೂಡಿರುವಂಥದ್ದು. ಇದು ಕನ್ನಡ ಚಿಂತನೆಯ ಮೇಲೆ ಸಹ ಪ್ರಭಾವ ಬೀರಿ, ಅದನ್ನು ಆಧುನಿಕಗೊಳಿಸಿದೆ. ಈ ಚಿಂತನೆಯ ಪರಿಪ್ರೇಕ್ಷ್ಯದಲ್ಲಿ ಅನೇಕರು ಚರಿತ್ರೆಯನ್ನು ಪುನಾರಚನೆಗೊಳಿಸಿದ್ದಾರೆ ಹಾಗೂ ವರ್ತಮಾನವನ್ನು ಕಂಡರಿಸಿದ್ದಾರೆ. ಇಂತಹ ನೆಲೆಯಲ್ಲಿ ಮೂಡಿದ ನಾಟಕ ಲಿಂಗದೇವರು ಹಳೆಮನೆ ಅವರ 'ಚಿಕ್ಕದೇವಭೂಪ'.

ಚಿಕ್ಕದೇವಭೂಪನ ಬಗೆಗೆ ಇರುವ ಪ್ರಮುಖ ಲಿಖಿತ ಆಕರ 'ಚಿಕ್ಕದೇವರಾಜ ವಿಜಯ' ಮುಂತಾದ ಆಸ್ಥಾನ ಪಂಡಿತ ಕೃತಿಗಳು ಮಾತ್ರ. ಇದಕ್ಕೆ ಹೊರತಾಗಿ ಜನಪದರ ನೆಲೆಯಲ್ಲಿ ಇದೇ ರಾಜರ ಬಗೆಗೆ ವಿಭಿನ್ನ ಅಭಿಪ್ರಾಯಗಳಿವೆ.

ಹೀಗೆ ಊಳಿಗಮಾನ್ಯ ಪ್ರಭುತ್ವದ ಬಗೆಗೆ ಆ ಪ್ರಭುತ್ವದ ಭಾಗವಾಗಿಯೇ ರಚಿತಗೊಂಡ ಹಾಗೂ ಅದಕ್ಕೆ ಹೊರತಾದ ನೆಲೆಯಲ್ಲಿ ರಚಿತಗೊಂಡ ಎರಡು ಚರಿತ್ರೆಗಳಿವೆ. ಒಂದು ಲಿಖಿತ ಆಕರಗಳದ್ದು; ಎರಡನೆಯದು ಮೌಖಿಕ ಆಕರಗಳದ್ದು. ಇಲ್ಲಿ ಅಕ್ಷರವು ಲಿಖಿತ ಆಕರಗಳಲ್ಲಿ ಭ್ರಷ್ಟಗೊಂಡಿರುವುದನ್ನು ನಾವು ಕಾಣುತ್ತೇವೆ.

ಹೀಗೆ ಚಿಕ್ಕದೇವರಾಜ ಒಡೆಯರ ನೆಪದಲ್ಲಿ ವಸಾಹತುಪೂರ್ವ ಬದುಕಿನ ಆಳುವ ವರ್ಗದ ಚರಿತ್ರೆಯನ್ನು ಈ ನಾಟಕದಲ್ಲಿ ಬರೆಯಲಾಗಿದೆ. ಈ ಪ್ರಭುತ್ವದ ಬಗೆಗೆ ಆಸ್ಥಾನ ಪಂಡಿತರಾದಿಯಾಗಿ ಬರೆದವುಗಳು ಸೃಷ್ಟಿಸಿದ ಚರಿತ್ರೆಗಳಾಗಿವೆ. ಇವುಗಳ ಬಣ್ಣ, ವೈಯ್ಯಾರ ಬೇರೆ. ಇಲ್ಲಿ ಜನವಾಗಲೀ ಅವರ ನಿಟ್ಟುಸಿರಾಗಲೀ ಇಲ್ಲ. ಅಲ್ಲದೇ ಅದು ರಾಜನ ನಿಜದ ಚರಿತ್ರೆಯನ್ನು ಹೇಳುವುದಿಲ್ಲ. ಬದಲಿಗೆ ಈಗಾಗಲೇ ಹೇಳಿದಂತೆ ರಾಜನ ಚರಿತ್ರೆಯನ್ನು 'ಸೃಷ್ಟಿಸು'ತ್ತದೆ.

ರಾಜ, ತನ್ನ ಕುಲ(ಕುಂಭಗೌಡ)ದ ಕೀಳರಿಮೆಯನ್ನು ಕೊನೆಗಾಣಿಸಲು ಮೂಲತಃ ಕುಂಬಾರ ಕುಲದವನಾದ ತನ್ನ ಕೀಳರಿಮೆಯನ್ನು ತೊರೆಯಲು, ಅದಕ್ಕಾಗಿ ಯದುವಂಶಕ್ಕೆ ತನ್ನನ್ನು ಸ್ಥಳಾಂತರಿಸಿಕೊಳ್ಳಲು ಅಗತ್ಯವಾದ ಕಾವ್ಯ ಬರೆಯಲು ಮಂತ್ರಿಯ ಸಲಹೆಯ ಮೇರೆಗೆ ಕವಿ ತಿರುಮಲಾರ್ಯನಿಗೆ ಹೇಳುತ್ತಾನೆ. ಇನ್ನೊಂದು ಸಂದರ್ಭದಲ್ಲಿ ಬೆಂಗಳೂರಿನಲ್ಲಿ ಕಂಡ ಬಿಸಿಲೊತ್ತಿನ ಬ್ರಾಹ್ಮಣರನ್ನು ಇಲ್ಲಿ ನೆನೆಯಬೇಕು. ಜನರಿಗೆ ಅನಪೇಕ್ಷಿತವಾದ ರಾಜ್ಯವನ್ನು ವಿಸ್ತರಿಸಲು (''ಜನ: ನಾವು ದುಡಿಯೋದು ರಾಜ್ಯ ಕಟ್ಟೋದಕ್ಕೆ ಅಲ್ಲ; ನಮ್ಮ ಮಕ್ಕಳು, ಮರಿಗಳನ್ನು ಸಾಕೋದಕ್ಕೆ. ಅವರಿಗೆ ಎರಡು ತುತ್ತು ಹೊಟ್ಟೆಗೆ ಹಾಕೋದಿಕ್ಕೆ'') ವಿದ್ರೋಹಾತ್ಮಕ ತೆರಿಗೆಗಳನ್ನು ಜನರ ಮೇಲೆ ವಿಧಿಸುತ್ತಾನೆ. ಅದರಿಂದ ನೊಂದ ಜನ ಬಂಡಾಯವೇಳುತ್ತಾರೆ. ಇಂತಹ ಬಂಡಾಯಕ್ಕೆ ವೀರಶೈವರ ಕುಮ್ಮಕ್ಕು ಸಹ ದೊರೆಯುತ್ತದೆ. ಇವರ ಕುಮ್ಮಕ್ಕಿಗೆ ಕಾರಣ, ಜೋಗಿ ಜಂಗಮರಿಗೆ ರಾಜ ಹೊಸ ತೆರಿಗೆ ವಿಧಿಸಿದ್ದೇ ಆಗಿರುತ್ತದೆ. ಈ ಎಲ್ಲದರ ಪರಿಣಾಮವಾಗಿ ದಂಗೆ ವ್ಯಾಪಕವಾಗುತ್ತದೆ. ಇದು ನಂಜನಗೂಡು, ತಾಯೂರಿನ ರೈತ ದಂಗೆ ಎಂದೇ ಮೌಖಿಕ ಇತಿಹಾಸದಲ್ಲಿ ಹೆಸರಾಗಿದೆ. ಆದರೆ ಇದರ ಉಲ್ಲೇಖ ರಾಜಾಶ್ರಿತ ವಿದ್ವಾಂಸರ ಕಾವ್ಯಶರೀರ ಇತಿಹಾಸ ಕೃತಿಗಳಲ್ಲಿ ಗೈರುಹಾಜರಿಯಾಗಿದೆ. ಈ ಮೂಲಕ ಆ ಕವಿಗಳು ರಾಜರಿಗೆ ಬಕೆಟ್ ಹಿಡಿದು ಜನತೆಗೆ ಅನ್ಯಾಯವೆಸಗಿದ್ದಾರೆ.

ಹೀಗೆ ಲೇಖಕರು ಈ ಊಳಿಗಮಾನ್ಯ ಪ್ರಭುತ್ವದ ಬಗೆಗಿನ ಲಿಖಿತ ಹಾಗೂ ಮೌಖಿಕ ಮೂಲದ ಆಕರಗಳನ್ನು ವಿವೇಕದಿಂದ ಪರಿಶೀಲಿಸಿ, ವರ್ಗಪ್ರಜ್ಞೆಯ ಮೂಸೆಯಲ್ಲಿ ಯಾವುದೇ ರಾಜ್ಯ (ಒಂದು ಪಾತ್ರ: ತೆರಿಗೆ ಭಾರಕ್ಕೆ ನುಲುಗಿದ ಜನಕ್ಕೆ – ವಲಸೆ ಎಲ್ಲಿಗೆ ಹೋಗುತ್ತೀರಿ...? ಎಲ್ಲಿ ಹೋದರೂ ಆಳುವವರು ಒಂದೇ. ರಾಜಭಟ: ಸಂಪತ್ತು ಜನಗಳ ಮನೆಯಲ್ಲಿರುವುದಕ್ಕಿಂತ ಅರಮನೆಯಲ್ಲಿರುವುದೇ ಶ್ರೇಯಸ್ಸು, ಸುರಕ್ಷಿತ) ಗಳಲ್ಲಿ ಇರಬಹುದಾದ ವರ್ಗ ಸಂಘರ್ಷವನ್ನು ಮನಗಾಣಿಸಿದ್ದಾರೆ.

ಇಂತಹ ಸಂಘರ್ಷದಲ್ಲಿ ಕೋಮುವಾದೀ ಮನಸ್ಸುಗಳು ಹೇಗೆ ತಮ್ಮ ಬೇಳೆ ಬೇಯಿಸಿಕೊಳ್ಳುತ್ತವೆ ಎಂಬುದನ್ನು ಮಂತ್ರಿ ಜಂಗಮಯ್ಯ, ಷಡಕ್ಷರಯ್ಯ ಮುಂತಾದ ಪಾತ್ರಗಳ ಮೂಲಕ ಪರಿಣಾಮಕಾರಿಯಾಗಿ ಗ್ರಹಿಸಬಹುದಾಗಿದೆ.

ಆಳುವ ವರ್ಗದ, ಊಳಿಗಮಾನ್ಯ ಪ್ರಭುತ್ವದ ಹಿಂಸೆಯ ನೆಲೆಗಳನ್ನು ಇದು ಹೇಳುತ್ತದೆ. ಒಬ್ಬ ರಾಜ ಇನ್ನೊಬ್ಬ ರಾಜನನ್ನು ಕೊಂದು ಪಟ್ಟಕ್ಕೆ ಬರುವುದು ಜನಕಲ್ಯಾಣ ಎಂದು ಹೇಳಿಕೊಳ್ಳುವ ಇದು ವ್ಯಂಗ್ಯವೆನ್ನಿಸುತ್ತದೆ.

ಇಂತಹ ಪ್ರಭುವರ್ಗವನ್ನು ಕುರಿತು ಲಿಖಿತ ಪರಂಪರೆ ಸೃಷ್ಟಿಸುವ ಅಭಿಪ್ರಾಯ ಮೌಖಿಕ ಪರಂಪರೆಗೆ ಭಿನ್ನ – ಇದು ಇಲ್ಲಿ ವ್ಯಕ್ತ. ಅಂದರೆ ಜನಸಾಮಾನ್ಯರ ಪರಿಪ್ರೇಕ್ಷ್ಯದಲ್ಲಿ ಪ್ರಭುತ್ವವನ್ನು ಕಾಣುವ ಬಗೆ ಇಲ್ಲಿ ವ್ಯಕ್ತ.

ಸಮಾಜವನ್ನು ಆಳುವ, ಆಳಿಸಿಕೊಳ್ಳುವ ಎರಡು ವರ್ಗಗಳನ್ನಾಗಿ ಇಲ್ಲಿ ನೋಡಲಾಗಿದೆ. ಇಲ್ಲಿ ಮಾರ್ಕ್ಸ್‌ವಾದೀ ದೃಷ್ಟಿಕೋನವಿದೆ.

ಐತಿಹಾಸಿಕ ವಸ್ತು ಇಲ್ಲಿದೆ. ಆದರೆ ಇಲ್ಲಿರುವುದು ಚರಿತ್ರೆಯ ಪುನಾರಚನೆ ಹಾಗೂ ಚರಿತ್ರೆಯ ಪುನರ್ ವ್ಯಾಖ್ಯಾನ, ಜನ ನೆಲೆಯಲ್ಲಿ.

ಈ ನಾಟಕವು ಇತಿಹಾಸವನ್ನು ಹೇಳುತ್ತದೆ; ಇತಿಹಾಸವನ್ನು ಸೃಷ್ಟಿಸಿಲ್ಲ. ಆದರೆ ಪ್ರಸಿದ್ಧ ಕೃತಿಗಳೆಲ್ಲವೂ ಇತಿಹಾಸವನ್ನು ಸೃಷ್ಟಿಸಿವೆ; ಇತಿಹಾಸವನ್ನು ಹೇಳಿಲ್ಲ.

**ಎಚ್. ಎಸ್. ಶಿವಪ್ರಕಾಶ್ ಅವರ 'ಮಹಾಚೈತ್ರ'**

ಪಾರಂಪರಿಕವಾಗಿ ನಮ್ಮ ಕಥನ ಪರಂಪರೆ ಬೆಳೆದುಬಂದಿರುವುದು ನಾಯಕ ಕೇಂದ್ರಿತ ನೆಲೆಯಲ್ಲಿ. ಅದು ಕಾವ್ಯ, ಕಥೆ, ಕಾದಂಬರಿ, ನಾಟಕ ಮುಂತಾದ ಯಾವುದೇ ಸೃಜನ ಪ್ರಕಾರಗಳಿರಬಹುದು. ಈ ಹಿನ್ನೆಲೆಯಿಂದ ನೋಡಿದಾಗ ಬಸವ ಕೇಂದ್ರಿತ ನೆಲೆಯಲ್ಲಿ ಶರಣ ಚಳುವಳಿಯನ್ನು ಕುರಿತು ಮಾತನಾಡಿ ಅನೇಕ ನಾಟಕಗಳು ಇದುವರೆಗೂ ಬಂದಿವೆ. ಅವುಗಳಲ್ಲಿ ಹೆಚ್ಚು ಚರ್ಚೆಗೆ ಒಳಗಾಗಿರುವ ಸಂಕ್ರಾಂತಿ, ತಲೆದಂಡ ಮುಂತಾದವು ಇವೆ. ಈ ಸಾಲಿನಲ್ಲಿಯೇ ಬರುವ ಈ ಕೃತಿ ನಾಯಕ ಕೇಂದ್ರಿತವಾಗಿ ನಿಲ್ಲದೆ ಜನಕೇಂದ್ರಿತವಾಗಿ ನಿಂತಿದೆ ಎಂಬುದು ಇದರ ಆಧುನಿಕ ಚಿಂತನಾ ಆಯಾಮವೂ ವಿಶಿಷ್ಟತೆಯೂ ಆಗಿದೆ.

**ಗಣನೆಗೆ ಬರದೆ ಹೋಗಿದ್ದವರ ಬಗೆಗಿನ ಅಧ್ಯಯನ**

ನಮ್ಮ ಇಪ್ಪತ್ತನೆಯ ಶತಮಾನದ ಉತ್ತರಾರ್ಧದಲ್ಲಿ ಕುಡಿಯೊಡೆದ ಇದು ಆಧುನಿಕ ಚಿಂತನಾ ಕ್ರಮವಾಗಿದೆ. ಗಾಂಧಿಯಂತೇ ಸ್ವತಂತ್ರರಾಗಿ ಜನತೆ ಸಹ ನಡೆಸಿದ ಸ್ವಾತಂತ್ರ್ಯ ಚಳುವಳಿ ಇದರ ಕಣ್ಣಿಗೆ ವಿಶೇಷವಾಗಿ ಬೀಳುತ್ತದೆ. ಇದು ಯಾವುದೇ ರಾಷ್ಟ್ರೀಯ ಘಟನೆಯ ಮುಖ್ಯ ಸ್ವರೂಪವೇ ಆಗಿರುತ್ತದೆ. ಆದರೆ ನಮ್ಮ ಸಾಂಪ್ರದಾಯಿಕ ಲೇಖನಿಯು ನಾಯಕ ಕೇಂದ್ರಿತವಾಗಿ ಹೊರಟು, ಇತಿಹಾಸದ ಮುಖ್ಯ ಮುಖವನ್ನು ಮಸುಕಾಗಿಸುತ್ತದೆ. ಈ ನೆಲೆಯಲ್ಲಿ ಮಸುಕಿನ ಪರದೆಯನ್ನು ಸರಿಸಿ, ಕ್ರಾಂತಿಯನ್ನು ನಡೆಸುವ ಜನತಾ ನಾಯಕತ್ವವನ್ನು ಕಾಣಿಸುವ ಪ್ರಯತ್ನವಾಗಿ 'ಮಹಾಚೈತ್ರ' ನಮಗೆ ಕಾಣುತ್ತದೆ.

ನಾಟಕ ಆರಂಭವಾಗುವ ಪೂರ್ವದಲ್ಲಿಯೇ ಬಸವಣ್ಣ ಕಲ್ಯಾಣವನ್ನು ತೊರೆದು ಕಪ್ಪಡಿ ಸಂಗಮಕ್ಕೆ ಹೊರಟುಬಿಟ್ಟಿದ್ದಾನೆ. ಈ ನೆಪದಲ್ಲಿ ಇಡೀ ನಾಟಕದಲ್ಲಿ ಬಸವಣ್ಣನ ಪಾತ್ರವು ಎಲ್ಲಿಯೂ ಕಾಣುವುದಿಲ್ಲ. ಆದರೂ ಬಸವಣ್ಣನ ಗೈರುಹಾಜರಿಯಲ್ಲಿ ಕಲ್ಯಾಣದಲ್ಲಿ ಮಡಿವಾಳ ಮಾಚಿದೇವ, ಬಹುರೂಪಿ ಚೌಡಯ್ಯ, ನಗೆಯ ಮಾರಿತಂದೆ, ಹಡಪದ ಅಪ್ಪಣ್ಣ, ರಾಯಸದ ಮಂಚಣ್ಣ ಮುಂತಾದವರಿಂದ ಕ್ರಾಂತಿಯ ಕ್ರಿಯೆ ಮುಂದುವರೆಯುತ್ತದೆ. ಅಲ್ಲದೆ ಬಿಜ್ಜಳನ ಸೇನೆಯ ಒಂದು ಭಾಗ ಕ್ರಾಂತಿಯ ವಿಚಾರದಲ್ಲಿ ಅಗೋಚರವಾಗಿದ್ದು ಅನಿರೀಕ್ಷಿತವಾಗಿ ಹಾಗೂ ಒಂದು ನಿರ್ಣಾಯಕ ಕಾಲಘಟ್ಟದಲ್ಲಿ ಕ್ರಾಂತಿಗೆ ಧುಮುಕುತ್ತದೆ. ಈ ಸೇನೆ ಮುಸುಟಿ ಚೌಡಯ್ಯನ ನಾಯಕತ್ವದ್ದು ಎಂದು ಊಹಿಸಲು ನಾಟಕದಲ್ಲಿಯೇ ಅವಕಾಶವಿದೆ.

ಹೀಗೆ ಕ್ರಾಂತಿಯೆಂಬುದು ನಾಯಕನೆನಿಸಿಕೊಂಡವನು ರಂಗದಲ್ಲಿ ಗೈರುಹಾಜರಾದಾಗ ಮುಕ್ತಾಯವಾಗುವುದಿಲ್ಲ. ಹಾಗೆ ಮುಕ್ತಾಯವಾಗುವುದೇನಿದ್ದರೂ ಯುದ್ಧ ಮಾತ್ರ. ಅಲ್ಲಿ ಸಿಪಾಯಿಗಳು ಜೋಳವಾಳಿಗೋಸ್ಕರ ಖಡ್ಗ ಹಿಡಿದ ನೌಕರರಾಗಿರುತ್ತಾರೆ; ಸಾಮಾನ್ಯವಾಗಿ. ಆದರೆ ಕ್ರಾಂತಿಯಲ್ಲಿ ತತ್ವವೇ ನಾಯಕ ಆಗಿರುತ್ತದೆ. ಇದು ಒಬ್ಬೊಬ್ಬ ಶ್ರೀಸಾಮಾನ್ಯನಲ್ಲಿಯೂ ಅಡಕವಾಗಿರುತ್ತದೆ. ಹಾಗಾಗಿ ಆ ಕ್ರಾಂತಿಕಾರಿ ಸಾಮಾನ್ಯ ಕ್ರಾಂತಿಭೂಮಿಯಿಂದ ಕಾಲ್ತೆಗೆಯುವುದು ತನ್ನ ನಾಯಕ ಆದಂತಹ ತತ್ವ ಸತ್ತಾಗ ಮಾತ್ರ. ಆದ್ದರಿಂದಲೇ ಶರಣರ ಸಾಮಾಜಿಕ ಬದಲಾವಣೆಯ

ತತ್ವವು ಬಸವಣ್ಣನ ಸಾವಿನ ನಂತರವೂ ಜೀವಂತವಿರುವುದರಿಂದ ಈಗಾಗಲೇ ಪ್ರಸ್ತಾಪಗೊಂಡ ಅನೇಕ ತರಗಳಿಂದ ಕ್ರಾಂತಿ ಮುಂದುವರೆಯುತ್ತದೆ. ಈ ತತ್ವ ಜೀವಂತವಿರುವವರೆಗೂ ಸಮಾಜದಲ್ಲಿ ಇದಕ್ಕೆ ತದ್ವಿರುದ್ಧ ಸ್ಥಿತಿ ಇರುವವರೆಗೂ ಕ್ರಾಂತಿಯ ಬೀಜಗಳು ಮೊಳಕೆಯೊಡೆಯುತ್ತಲೇ ಇರುತ್ತವೆ. ಹಾಗಾಗಿ ಅದು ಇಂದಿಗೂ ಜೀವಂತ.

ಇಲ್ಲಿ ಇನ್ನೊಂದು ಅಂಶವನ್ನು ಸ್ಪಷ್ಟಪಡಿಸಿಕೊಳ್ಳಬೇಕು. ಕ್ರಾಂತಿ ಎಂಬುದು ಯಾವುದೋ ನಿರ್ದಿಷ್ಟ ಕಾಲಘಟ್ಟದಲ್ಲಿ ಮೊಳಕೆಯೊಡೆದು ನಿರ್ದಿಷ್ಟ ಘಟ್ಟದಲ್ಲಿ ಸಂಭವಿಸುವಂಥದ್ದು ಎಂಬ ರಮ್ಯ ಕಲ್ಪನೆಯನ್ನು ಬಿಡಬೇಕು. ೧೯೧೭ರ ರಷ್ಯಾ ಕ್ರಾಂತಿಯ ಉಗಮಕ್ಕೆ ಕಾಲದ ಹಿನ್ನೆಲೆ ವ್ಯಾಪಕವಾದುದು. ಅಂತೆಯೇ ಲೆನಿನ್‌ನಿಂದ ಈ ಕ್ರಾಂತಿ ನಿರ್ಣಾಯಕ ಘಟ್ಟ ಮಾತ್ರ ತಲುಪಿತು. ಆದರೆ ಪೂರ್ಣಗೊಳ್ಳಲಿಲ್ಲ. ಅದು ಅವನ ಆಡಳಿತ, ಅನಂತರದಲ್ಲಿ ಸ್ಟಾಲಿನ್‌ನ ಆಡಳಿತದಲ್ಲಿಯೂ ಮುಂದುವರೆಯಿತು. ಹೀಗೆ ಕ್ರಾಂತಿ ಎಂಬುದು ಸಿನೆಮಾದ ಆರಂಭದಲ್ಲಿ ಹುಟ್ಟಿ, ವಿರಾಮದ ಹೊತ್ತಿಗೆ ನಿರ್ಣಾಯಕ ಹಂತವನ್ನು ತಲುಪಿ, 'ಶುಭಂ' ಹೊತ್ತಿಗೆ ಮುಕ್ತಾಯಗೊಳ್ಳುವಂಥ ರಮ್ಯ ಕಲ್ಪನೆಯಲ್ಲ ಎಂಬುದನ್ನು ಪುನರುಚ್ಚರಿಸಬಹುದಾಗಿದೆ. ಇಂತಹ ಚಿಂತನೆ ಹಾಗೂ ಜನರ ಕ್ರಾಂತಿಯ ಸ್ವರೂಪವನ್ನು ಕುರಿತ ಚಿಂತನೆ ನಾಟಕದಲ್ಲಿಯೂ ಅಳವಟ್ಟಿರುವುದನ್ನು ಹೀಗೆ ಗುರುತಿಸಬಹುದು.

ಮಾಚಿದೇವ : ಅಪ್ಪಣ್ಣನೋರೆ, ನೋಡಿ ಆ ಗೀಜಗನ ಗೂಡನ್ನ; ಮುಷ್ಟಿ ಗಾತ್ರವೂ ಅಲ್ಲದ ಗೀಜಗನ ಹಕ್ಕಿ ಎಷ್ಟು ಅಂದವಾಗಿ, ನಾಜೂಕಾಗಿ ಕಟ್ಟುತ್ತೆ. ಆದರೆ ಮತ್ತೆ ಅದನ್ನು ಕೀಳುತ್ತೆ; ಮತ್ತೆ ಮತ್ತೆ ಕಟ್ಟುತ್ತೆ. ಹೀಗೆ ಎಷ್ಟೋ ಸಲ.

ಇನ್ನೊಂದು ಸನ್ನಿವೇಶದಲ್ಲಿ—

ಮಡಿವಾಳ ಮಾಚಯ್ಯ : (ಕಲ್ಯಾಣ) ಈಗ ಬೂದಿಯಾಗುತ್ತಿದೆ. ಆದರೆ ನಮ್ಮ ಕೈಗಳಲ್ಲಿ ಇಂತಹ ನೂರಾರು ಕಲ್ಯಾಣಗಳು ಅಡಗಿವೆ.

ಇನ್ನೊಂದು (ನಾಟಕ ಕಡೆಯ) ಸನ್ನಿವೇಶದಲ್ಲಿ-

ನಗೆಯ ಮಾರಿತಂದೆ : ಮಾಚಿದೇವರೆ, ನಿಮ್ಮ ಮಾತಿನ ಪ್ರಕಾರ ಜಲಪಾತದವರೆಗೂ ಬಂದೆವು. ನಾವು ಇಲ್ಲೇ ಎಲ್ಲಾದರೂ ತಂಗಿ, ಇದೇ ನಾಟಕವನ್ನು ಮತ್ತೆ ಆಡಿಸಿತೋರಿಸುತ್ತೇವೆ. ನಮಗೆ ಅಪ್ಪಣೆ ಕೊಡಿ.

(ನಟರು ನಮಸ್ಕರಿಸಿ ಹೊರಡತೊಡಗುತ್ತಾರೆ.)

ಹಡಪದ ಅಪ್ಪಣ್ಣ : ನೀವು ಮತ್ತೆ ಎಲ್ಲಿ ಸಿಕ್ಕೋದು ?

ನಗೆಯ ಮಾರಿತಂದೆ : ಬೇರೆ ಕಾಲದಲ್ಲಿ

ಕಲಕೇತಯ್ಯ : ಬೇರೆ ಜಾಗದಲ್ಲಿ

ಬಹುರೂಪಿ ಚೌಡಯ್ಯ : ಬೇರೆ ರೂಪದಲ್ಲಿ.

ಹೀಗೆ ಕ್ರಾಂತಿಕಾರಿ ಜನತೆಯ ಇತಿಹಾಸ ಮತ್ತು ವರ್ತಮಾನವನ್ನು ಹೇಳುವ ಈ ಕೃತಿ ವರ್ಗಪ್ರಜ್ಞೆಯನ್ನು ಸಹ ಹೊಂದಿರುವುದು ಬಂಡಾಯದ ಭಾಗವಾಗಿ ಮುಖ್ಯವಾಗಿದೆ. ಬಿಜ್ಜಳನ ಜಾಗದಲ್ಲಿ ಬಸವಣ್ಣ ಇದ್ದಿದ್ದರೂ ವ್ಯವಸ್ಥೆಯ ಕಪಿಮುಷ್ಟಿಯ ಅವಸ್ಥೆಯಿಂದ ಪರಿಸ್ಥಿತಿ ಇದಕ್ಕಿಂತ ಭಿನ್ನವೇನೂ ಆಗುತ್ತಿರಲಿಲ್ಲ ಎಂಬ ಚಿಂತನೆಯ ಹೊಳಹನ್ನು ಬಸವಣ್ಣನ ಸಾವಿನ ನಂತರದಲ್ಲಿ ನೀಲಾಂಬಿಕೆ ಬಿಜ್ಜಳನೊಡನೆ ಆಡುವ ಮಾತಿನಲ್ಲಿ ಹೊರಗೆಡಹುತ್ತಾಳೆ:

ನೀಲಾಂಬಿಕೆ : ಚಿಂತೆ ಬೇಡ, ನೀವಲ್ಲದೆ ಯಾರು ಚಕ್ರವರ್ತಿಗಳಾಗಿದ್ದರೂ ಬಸವರಸರ ಕಥೆ ನೀರನಲ್ಲೇ ಮುಗಿಯುತ್ತಿತ್ತು, ಕಲ್ಯಾಣದ ಕಥೆ ಹೀಗೆ ಮುಂದುವರೆಯುತ್ತಿತ್ತು.

**ಸಿಜಿಕೆ ಅವರ ಬೀದಿನಾಟಕ: ಬೆಲ್ಚಿ**

ವಸ್ತು, ತಂತ್ರ, ಧೋರಣೆ ಮುಂತಾದ ನೆಲೆಗಳಲ್ಲಿ ಆಧುನಿಕತೆಯನ್ನು ಆವಿಷ್ಕರಿಸಿಕೊಂಡ ದಲಿತ-ಬಂಡಾಯ ನಾಟಕ ಮತ್ತು ರಂಗಭೂಮಿಯು ಬೀದಿ ರಂಗಭೂಮಿಯನ್ನು ಆವಿಷ್ಕರಿಸಿಕೊಂಡಿದ್ದು ಇನ್ನೊಂದು ಮುಖ್ಯ ವಿಚಾರವೆನ್ನಿಸುತ್ತದೆ. ರಂಗಭೂಮಿಯ ಆಧುನಿಕ ಕಲ್ಪನೆಯಾಗಿ ಇದು ಇಲ್ಲಿ ಅಸ್ತಿತ್ವವನ್ನು ಪಡೆಯುತ್ತದೆ. ಜನ, ಬದಲಾವಣೆ, ಸಮಾಜಮುಖಿ ಮುಂತಾದ ಕಲ್ಪನೆಗಳ ಸ್ಥಾಯೀ ಭೂಮಿಕೆಯಾದ ದಲಿತ-ಬಂಡಾಯಕ್ಕೆ ಜನರ ನಡುವೆ ಇರುವ ಬೀದಿ ರಂಗಭೂಮಿ ಸಹಜವಾಗಿಯೇ ಆಪ್ತವೂ

ಅಕ್ರಮ-ಸಕ್ರಮ:
ಕಾಯ್ದೆ ತಿದ್ದುಪಡಿ



ನಮ್ಮ 'ಅಕ್ರಮ'ಗಳೂ
ಸಕ್ರಮವಾಗುವಂತೆ ಕಾಯ್ದೆ
ಮಾಡಿಸಿ...ಹಾಂ !?

ಪೂರಕವೂ ಆಗುತ್ತದೆ. ಬೀದಿ ರಂಗಭೂಮಿಯ ಹುಟ್ಟನ್ನು ಗಮನಿಸಿದರೆ, ಬೀದಿಯಲ್ಲಿ ಕಾಣುವ ರಂಗಭೂಮಿ ಬೀದಿಯಲ್ಲಿ ಕಾಣುವ ರಂಗಭೂಮಿಯಲ್ಲ. ಅದು ರಾಜಕೀಯ ಪ್ರಜ್ಞೆಯನ್ನು ಇಟ್ಟುಕೊಂಡ, ಬದಲಾವಣೆಯನ್ನು ಅಪೇಕ್ಷಿಸುವ ಜನಪರವಾದ ಮನೋಧರ್ಮದ ರಂಗಭೂಮಿಯಾಗಿದ್ದಾಗ ಮಾತ್ರ ಅದು ಬೀದಿ ರಂಗಭೂಮಿ ಎನ್ನಿಸಿಕೊಳ್ಳುತ್ತದೆ. ಉಳಿದಂತಹ ಬೀದಿ ರಂಗಭೂಮಿ ಪ್ರಚಾರದ ಬೀದಿ ರಂಗಭೂಮಿ ಮಾತ್ರ ಎನ್ನಿಸುತ್ತದೆ.

ಇಂತಹ ಜನಾಭಿಮುಖಿ ಧೋರಣೆಯನ್ನು ಹೊಂದಿದ ಬೀದಿ ರಂಗಭೂಮಿಯು ದಲಿತ-ಬಂಡಾಯಕ್ಕೆ ಮುಖ್ಯ ಮಾಧ್ಯಮವಾಗಿ ಅಸ್ತಿತ್ವವನ್ನು ಪ್ರಕಟಿಸಿದ್ದು ದಲಿತ-ಬಂಡಾಯ ನಾಟಕ ಮತ್ತು ಕನ್ನಡ ರಂಗಭೂಮಿಯ ಮುಖ್ಯ ಆಧುನಿಕ ಆವಿಷ್ಕಾರ ಎನ್ನಿಸುತ್ತದೆ.

ದಕ್ಷಿಣ ಭಾರತದಲ್ಲಿ ಮೊದಲಿಗೆ ಆಂಧ್ರದಲ್ಲಿ 'ಪ್ರಜಾನಾಟ್ಯ ಮಂಡಲಿ' (ಸ್ವಾತಂತ್ರ್ಯಪೂರ್ವದಲ್ಲಿ ಇದರ ಹುಟ್ಟು), 'ಜನನಾಟ್ಯ ಮಂಡಳಿ' (ಸ್ವಾತಂತ್ರ್ಯೋತ್ತರ ಸಂದರ್ಭದಲ್ಲಿ) ಗಳು 'ಇಪ್ಟಾ'ದ ಭಾಗವಾಗಿ ಕೆಲಸ ಮಾಡಿವೆ. ಇದೇ ಮಾರ್ಕ್ಸ್‌ವಾದೀ ಧೋರಣೆಗೆ ಒಳಪಟ್ಟ ಕರ್ನಾಟಕದ ಸಮುದಾಯ ತಂಡವು ಸಹ ಇಲ್ಲಿ ಮೊದಲಿಗೆ ಈ ರಂಗಭೂಮಿಯನ್ನು ಮುಖ್ಯವಾಗಿ ತನ್ನ ಅಭಿವ್ಯಕ್ತಿಯ ಮಾಧ್ಯಮವನ್ನಾಗಿಸಿಕೊಂಡಿತು. ೧೯೭೭ರಲ್ಲಿ ಬಿಹಾರದ ಬೆಲ್ಚಿ ಗ್ರಾಮದಲ್ಲಿ ದಲಿತರ ಮಾರಣ ಹೋಮವಾದಾಗ ಆ ಘಟನೆಯನ್ನು ವಸ್ತುವನ್ನಾಗಿಸಿಕೊಂಡು ಸಿಜಿಕೆಯವರಿಂದ 'ಬೆಲ್ಚಿ' ಎಂಬ ನಾಟಕವು ರಚನೆಯಾಗಿ, ಇವರಿಂದಲೇ ನಿರ್ದೇಶನಕ್ಕೂ ಒಳಗಾಯಿತು. ಸಿದ್ಧಲಿಂಗಯ್ಯನವರು ಇದಕ್ಕೆ ಹಾಡುಗಳನ್ನು ಬರೆದರು. ಇದು ಸಮುದಾಯ ತಂಡದ ಮೂಲಕವಾಗಿ ಕರ್ನಾಟಕದಾದ್ಯಂತ ೨,೫೦೦ಕ್ಕೂ ಹೆಚ್ಚು ಪ್ರದರ್ಶನಗಳನ್ನು ಕಂಡಿದೆ.

ಹೀಗೆ ಕರ್ನಾಟಕದಲ್ಲಿ, ದಲಿತ-ಬಂಡಾಯ ಸಾಹಿತ್ಯ, ನಾಟಕ, ಚಳುವಳಿಯ ಭಾಗವಾಗಿ ಬೀದಿ ರಂಗಭೂಮಿ ಕಣ್ತೆರೆಯಿತು. ಅದು ಅನಂತರದಲ್ಲಿ ಕೋಮುವಾದ, ಸಾಮ್ರಾಜ್ಯವಾದ ಮುಂತಾದ ದಳ್ಳುರಿಗಳು ಭುಗಿಲೆದ್ದಾಗಲೆಲ್ಲಾ ಕ್ರಿಯಾಶೀಲವಾಗಿ ಜನರನ್ನು ಬಡಿದೆಬ್ಬಿಸಿದೆ. ಒಳಾವರಣದ ರಂಗಭೂಮಿಯನ್ನು ಪ್ರವೇಶಿಸಲು ಸಾಧ್ಯವಾಗದಾಗ ಶ್ರಮಿಕ ಸಮುದಾಯ ಬೀದಿ ರಂಗಭೂಮಿಯಿಂದಲೇ ಕಲಿತದ್ದು ಹೆಚ್ಚು.

ಹೀಗೆ ತೀವ್ರ ಜನಮುಖಿ ಮತ್ತು ಪ್ರಗತಿಪರ ಮನೋಭಾವವನ್ನು ಹೊಂದಿರುವ ದಲಿತ ಬಂಡಾಯ ನಾಟಕವು ತಂತ್ರದ ಭಾಗವಾಗಿ ಬೀದಿ ರಂಗಭೂಮಿಯನ್ನು ಆವಿಷ್ಕರಿಸಿಕೊಂಡಿದ್ದು ಸಹಜವೇ ಆಗಿದೆ.

ಇಂತಹ ಬೀದಿರಂಗಭೂಮಿಯ ನಾಟಕದ ಲಿಖಿತ ಪಠ್ಯಗಳು ದೊರೆಯುವುದು ವಿರಳ. ಕಾರಣ, ಸಮಕಾಲೀನ ಕರ್ಷಣಗಳಿಗೆ ಸ್ಪಂದಿಸುವ ಇವು ಕ್ಷಿಪ್ರಕಾಲದಲ್ಲಿಯೇ ಪರಿಕಲ್ಪನೆಯನ್ನು ಒಸೆದು, ಪಾತ್ರ, ಸಂಭಾಷಣೆ, ಹಾಡು ಮುಂತಾದ ರಕ್ತಮಾಂಸವನ್ನು ಸೇರಿಸುತ್ತವೆ. ಈ ನಾಟಕಗಳಲ್ಲಿ ಅಪರೂಪಕ್ಕೆ ಕೆಲವು ಮಾತ್ರ ಪುಸ್ತಕ ರೂಪ ಕಾಣುತ್ತವೆ. ಒಟ್ಟಾರೆ ಸಾಂಪ್ರದಾಯಿಕ ರಂಗಭೂಮಿಗಿಂತ ಇದರ ಕಲ್ಪನೆ ಭಿನ್ನವಾಗಿರುವುದರಿಂದ ಅದರ ಮಾನದಂಡಗಳೇ ಇದಕ್ಕೆ ಅಂತಿಮವಲ್ಲ. ಇದು ದಲಿತ-ಬಂಡಾಯದ ಭಾಗವಾಗಿ ಬರುವ ಬೀದಿ ರಂಗಭೂಮಿಯನ್ನು ಕುರಿತ ವಿಚಾರಗಳು ಮಾತ್ರ. ಉಳಿದಂತಹ ಬೀದಿ ರಂಗಭೂಮಿಯನ್ನು ಕುರಿತ ವಿಚಾರಗಳು ಬೇರೆ. ಅವು ಇಲ್ಲಿ ಅಪ್ರಸ್ತುತ.

ಹೀಗೆ ಕನ್ನಡ ನಾಟಕ ಪರಂಪರೆಯಲ್ಲಿ ದಲಿತ-ಬಂಡಾಯ ನಾಟಕವು, ಕರ್ನಾಟಕದ ರಂಗಭೂಮಿಯಲ್ಲಿ ಬೀದಿ ರಂಗಭೂಮಿಯು, ಆಧುನಿಕದ್ದಾಗಿ ಕಾಣಸುತ್ತವೆ. ಹಾಗಾಗಿ ನಾವು ಇಂದು ಆಧುನಿಕರಾಗುವಾಗ ಯಾವ ಪ್ರಜ್ಞಾಪಾತಳಿಯನ್ನು ಹೊಂದಬೇಕಾಗಿದೆ ಎಂಬುದು ನಮ್ಮ ಮುಂದಿರುವ ಇವತ್ತಿನ ಪ್ರಶ್ನೆಯಾಗಿದೆ.

**ಡಾ|| ಕಾ. ವೆಂ. ಶ್ರೀನಿವಾಸಮೂರ್ತಿ**
ಕನ್ನಡ ಅಧ್ಯಾಪಕ, ಸ್ನಾತಕೋತ್ತರ ಕೇಂದ್ರ
ಬೆಂಗಳೂರು ವಿಶ್ವವಿದ್ಯಾಲಯ, ಕೋಲಾರ - ೫೬೩ ೧೦೧

**ಭಾ**ರತೀಯ ವ್ಯವಸ್ಥೆ ಒಮ್ಮೆ ತನ್ನ ಮೈಯ ಹೊರಳಿಸಿದರೆ ಅದು ಶ್ರೀಮಂತರ, ಬಂಡವಾಳಶಾಹಿಗಳ, ಅಧಿಕಾರಶಾಹಿಗಳ ಪರವಾಗಿಯೇ ಹೊರಳುತ್ತದೆ. ಅದರ ಬುಡದಲ್ಲಿ ಸಿಕ್ಕು ಒದ್ದಾಡುವ ಪರಂಪರೆ ಬಡವರ, ಅಸಹಾಯಕರ, ದಲಿತರ ಪಾಲಿಗೆ ಯಾವತ್ತಿಗೂ ಕಟ್ಟಿಟ್ಟ ಬುತ್ತಿ.

ಇಂದು ವ್ಯವಸ್ಥೆಯ ಬುಡಕ್ಕೆ ಹಾರಿ ಹಾಕಿ ಮತ್ತೊಮ್ಮೆ ಅದರ ಮೈಯ ಹೊರಳಿಸಲಾಗುತ್ತಿದೆ. ದುರಂತವೆಂದರೆ ಬುಡದಲ್ಲಿ ಸಿಕ್ಕು ಒದ್ದಾಡಿದವರೂ ಹಾರಿಗೆ ಕೈಹಾಕಿ ತಮ್ಮ ಶಕ್ತಿ ಪ್ರದರ್ಶನ ಮಾಡುತ್ತಿದ್ದಾರೆ. ಇವರೆಲ್ಲರೂ ಸೇರಿ ಜಾಗತೀಕರಣ, ಉದಾರೀಕರಣ ಮುಂತಾದ ಹೆಸರುಗಳ ನೂತನ ಕ್ರೂರ ಬಂಡವಾಳಶಾಹಿಯ ಗುಲಾಮಗಿರಿಯಲ್ಲಿ ಭಾರತವನ್ನು ಮತ್ತೊಮ್ಮೆ ವ್ಯವಸ್ಥಿತವಾಗಿ ತಳ್ಳಿದ್ದಾರೆ. ಇದೊಂದು 'ಅಮೋಘ ಪ್ರಗತಿ' ಎಂದೆಲ್ಲಾ ಹೇಳಿ ಬೊಂಬಡಿ ಹೊಡೆಯುತ್ತಿದ್ದಾರೆ. ಈ ನೂತನ ಕ್ರೂರ ವ್ಯವಸ್ಥೆಯನ್ನು ಭಾರತ ಸ್ವಾಗತಿಸಿದಾಗಿನಿಂದಲೂ ನಿಜವಾದ ಜನಪರ ಚಿಂತಕರು, ಹೋರಾಟಗಾರರು ತಮ್ಮ ವಿರೋಧ ವ್ಯಕ್ತಪಡಿಸುತ್ತ ಪ್ರತಿಭಟಿಸುತ್ತಲೇ ಬಂದಿದ್ದಾರೆ. ಆ ಕಿರುಚಾಟಕ್ಕೆ ಧ್ವನಿಗೂಡಿಸದ ನೂತನ ವ್ಯವಸ್ಥೆ ಧೈರ್ಯದಿಂದ ಒಳ ನುಗ್ಗಿ ಚಾಕಳಿಮುಕಳಿ ಹಾಕಿ ಕುಳಿತು ತನ್ನ ಅಸ್ತಿತ್ವವನ್ನು ಸರಿಯಾಗಿಯೇ ಗುರುತಿಸಿಕೊಂಡಿದೆ. ಸ್ವತಂತ್ರ ಭಾರತದಲ್ಲಿ ಇನ್ನೇನು ಬಡವ-ದುರ್ಬಲರಿಗೆ ಒಂದು ತುತ್ತು ಅನ್ನ ದಕ್ಕಬಹುದು ಎನ್ನುವಷ್ಟರಲ್ಲಿಯೇ ನೂತನ ವ್ಯವಸ್ಥೆ ಅವರ ಬಾಯಿ ಮೇಲೆ ಬಡೆದು ಕಬಳಿಸಿಕೊಂಡಿದೆ. ಇಂಥ ಜನವಿರೋಧಿ ವ್ಯವಸ್ಥೆಯನ್ನು ಪ್ರಾರಂಭದಲ್ಲಿ ವಿರೋಧಿಸಿದಂತೆ ಮಾಡಿದ ಸ್ವಯಂ ಘೋಷಿತ ಪ್ರಗತಿಪರರು ಇಂದು ಅದನ್ನು ಸಮರ್ಥಿಸಿ ಕೊಳ್ಳುವುದರ ಮೂಲಕ 'ಅದು ಅನಿವಾರ್ಯ' ಎಂದು ವಾದ ಮಂಡಿಸುತ್ತಿದ್ದಾರೆ. ಜನ ವಿರೋಧಿ ನೀತಿಯನ್ನು ಹೊಡೆದೋಡಿಸಲು ಸಾಧ್ಯವಾಗದೇ ಇರುವ ತಮ್ಮ ಅಸಹಾಯಕತನ ಹಾಗೂ ಸ್ವಹಿತಾಸಕ್ತಿಯ ಕಾರಣ ದಿಂದಾಗಿ ಈ ರೀತಿ 'ಅನಿವಾರ್ಯ' ಎಂದು ಹೇಳಿ ಹೂವು ಹಾಸಿಗೆ ಹಾಸುತ್ತಿದ್ದಾರೆ.

ಜಾಗತೀಕರಣ ಎಂಬುದು ಯಾವಾಗ ಅಡಗಿ ಮನಿಯೊಳಗೆ ಬಂದು ಮಂಡಿಯೂರಿ ಕುಳಿತು ಕೊಂಡಿತೋ ಅವಾಗಿನಿಂದಲೇ ಭಾರತೀಯರ ಮನಃಸ್ಥಿತಿಯು ಮಾನವೀಯತೆಯನ್ನು ಮಣ್ಣುಗೂಡಿಸಿಕೊಂಡು ಸಂಪೂರ್ಣವಾಗಿ ಆರ್ಥಿಕಮಯವಾಗಿದೆ. ಹಣಗಳಿಕೆ, ಆಸ್ತಿ ಸಂಪಾದನೆಯೇ ಮುಖ್ಯ ಗುರಿಯಾಗಿದೆ. ಸಾಮೂಹಿಕ ಹಿತಾಸಕ್ತಿ ಎಂಬುದು ಹುಡಿಗೂಡಿ ವೈಯಕ್ತಿಕ ಪ್ರತಿಷ್ಠೆ, ಸ್ವಹಿತಾಸಕ್ತಿ ಪೂರ್ಣ ಪ್ರಮಾಣದಲ್ಲಿ ಹೆಡೆಯಾಡಿಸಲು ಶುರುವಾಗಿದೆ. ನಂತರ ಸಾಮೂಹಿಕ, ಸಾಮಾಜಿಕ ಸಮಸ್ಯೆಗಳು ಮರೆಯಾಗಿ ಅವಕಾಶವಾದ ದಂತಹ ಸಮಸ್ಯೆಗಳೇ ಪ್ರಧಾನ ಪಾತ್ರ ವಹಿಸುತ್ತಿವೆ. ಇದರಿಂದ ಶ್ರೀಮಂತರು ಮತ್ತೆ ಶ್ರೀಮಂತರಾಗಲು ಸುಸಜ್ಜಿತ ಚತುರ್ಭಜ ರಸ್ತೆ ನಿರ್ಮಾಣಗೊಂಡು, ...ಗನ್ನು ಸರಿ ಹಳ್ಳಕ್ಕೆ ದೂಡಿ ಸು...ಭ ವಿಜಯ .... ಈ ಧಂಧೆ ಇಂದು ವ್ಯವಸ್ಥಿತವಾಗಿ ತನ್ನ ಜಾರಿ ಹಿಡಿದು ಯಾರ ತಕರಾರೂ ಇಲ್ಲದೆ ಕಣ್ಮುಚ್ಚಿ ನಡೆದಿದೆ.

ಇಂಥ ಬದಲಾದ ವ್ಯವಸ್ಥೆಯಲ್ಲಿ ಬಡವರ, ದುರ್ಬಲರ, ದಲಿತರ ಉದ್ಧಾರಕ್ಕಾಗಿ ಸರ್ಕಾರ ಹಲವಾರು ಯೋಜನೆಗಳನ್ನು ಜಾರಿಗೆ ತರುತ್ತಿರುವುದರಲ್ಲಿ ಶ್ರೀಮಂತರ, ಅಧಿಕಾರಿಗಳ ಉದ್ಧಾರವೇ ಮುಖ್ಯವಾಗಿದೆ. ಮೇಲ್ನೋಟಕ್ಕೆ ಯೋಜನೆಗಳು ಬಡವರ, ದಲಿತರ ಪರವಾಗಿ ಕಂಡರೂ ವಾಸ್ತವವಾಗಿ ಅವು ಅವರ ಶೋಷಣೆಯ ಹರಿತವಾದ ಅಸ್ತ್ರಗಳಾಗಿವೆ. ಸ್ವಯಂ ಘೋಷಿತ ಜನಪರ ಚಿಂತಕರೆನಿಸಿಕೊಂಡವರು, ಹೋರಾಟ ಗಾರರು ಅದನ್ನು ಸಮರ್ಥಿಸಿಕೊಳ್ಳುವುದರ ಮೂಲಕ ಜಾಗತೀಕರಣ ಪ್ರಕ್ರಿಯೆಗೆ ವಗ್ಗರಣೆ ಕೊಡುತ್ತಿದ್ದಾರೆ.

ಶೋಷಣೆ ಎಂಬ ಬೆಂಕಿಯ ಕುಲುಮೆಯಲ್ಲಿ ಉರುಳು ಸೇವೆ ಮಾಡುವಂತೆ ಇಡೀ ದಲಿತ ಸಮುದಾಯವನ್ನು ಬಲಾತ್ಕರಿಸುತ್ತ ಬರಲಾಗಿದೆ. ಆದರೆ, ಇಂದು ನಿಜವಾದ ದಲಿತರು ಆ ಕುಲುಮೆಯಿಂದ ಪಾರಾಗದಂತೆ ಸುತ್ತಲೂ ಹೊಸದಾದ ಮುಳ್ಳುಬೇಲಿ ಹೆಣೆಯಲಾಗಿದೆ. ಇದರಿಂದಾಗಿ ನೂತನ ಕ್ರೂರ ವ್ಯವಸ್ಥೆಯಲ್ಲಿ ಶೋಷಣೆಗೆ ಒಳಗಾಗಿರುವ ಇತರ ಅಸಹಾಯಕ ಸಮುದಾಯಕ್ಕಿಂತ 'ನಿಜವಾದ ದಲಿತರ' ಸ್ಥಿತಿ ಭಿನ್ನ ಹಾಗೂ ಭಯಂಕರವಾಗಿದೆ.

'ನಿಜವಾದ ದಲಿತರು' ಎಂಬ ಶಬ್ದವನ್ನು ಇಲ್ಲಿ ಉದ್ದೇಶಪೂರ್ವಕವಾಗಿ ಬಳಸಿದ್ದೇನೆ. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡ ಎಂದು ಕರೆಯಿಸಿಕೊಂಡು ಮೀಸಲಾತಿ ಸೌಲಭ್ಯದ ವ್ಯಾಪ್ತಿಗೆ ಒಳಪಟ್ಟವರೆಲ್ಲರೂ 'ದಲಿತರು' ಎಂದು ಇಂದು ಕರೆಯಲು

# ದಲಿತ ಪ್ರಜ್ಞೆ

# ಸಾಮಾಜಿಕ ಅನ್ಯಾಯ

■ ಡಾ|| ಕೆ. ಎನ್. ದೊಡ್ಡಮನಿ



ಸಾಧ್ಯವಾಗುವುದಿಲ್ಲ. ಸಾವಿರಾರು ವರ್ಷಗಳಿಂದ ನಿರಂತರವಾಗಿ ಸಮಾಜದ ಮುಖ್ಯ ವಾಹಿನಿಯಿಂದ ಬಲಾತ್ಕಾರವಾಗಿ ತಳ್ಳಲ್ಪಟ್ಟ ಹಾಗೂ ತುಳಿಯಲ್ಪಟ್ಟವರು ದಲಿತರೆಂಬುವುದರಲ್ಲಿ ನಿಸ್ಸಂಶಯ. ಈ ಮಾತಿನ ಅರ್ಥವನ್ನು ಇಂದು ಎಲ್ಲ ದಲಿತರಿಗೂ ಪಟ್ಟಿಕಟ್ಟಲು ಬರುವುದಿಲ್ಲ. ಸಂವಿಧಾನಾತ್ಮಕವಾಗಿ ಸವಲತ್ತು-ಸೌಲಭ್ಯಗಳನ್ನು ಪಡೆದು ಕೊಳ್ಳುವುದರ ಮೂಲಕ ಆ ಬಲವಾನ ಹಿಡಿತದಿಂದ ಬಿಡುಗಡೆಗೊಂಡು ಸಮಾಜದ ಮುಖ್ಯವಾಹಿನಿಯಲ್ಲಿ ಬದುಕುತ್ತಿದ್ದಾರೆ. ಅದರಲ್ಲಿ ಹಲವಾರು ಮಂದಿ ಮುಖ್ಯವಾಹಿನಿಯ ನೇತೃತ್ವವನ್ನೂ ವಹಿಸಿದ್ದಾರೆ. 'ದಲಿತರು' ಎಂಬ ಶಬ್ದಕ್ಕೆ ನೀಡುವ ವ್ಯಾಖ್ಯಾನದ ಹಿನ್ನೆಲೆಯಲ್ಲಿ ಇಂಥವರನ್ನು 'ದಲಿತರು' ಎಂದು ಹೇಗೆ ಕರೆಯಲು ಸಾಧ್ಯ ? 'ದಲಿತರು' ಪದದ ಅರ್ಥಕ್ಕೆ ಸೇರದ ಇವರು ಈ ಮೊದಲು ಊರ ಹೊರಗಿನ ಕೇರಿಯವರೇ ಆಗಿದ್ದರು. ಈಗ ಕೇರಿ ತೊರೆದು ಊರೊಳಗೆ ಒಂದಾಗಿದ್ದಾರೆ. 'ನಾವೂ ಊರವರೇ' ಎಂದು ಸಮರ್ಥಿಸಿಕೊಳ್ಳುವಷ್ಟು ಗಟ್ಟಿಯಾದ ನೆಲೆ ಪಡೆದುಕೊಂಡು ಆಳವಾಗಿ ಬೇರುಬಿಟ್ಟಿದ್ದಾರೆ. ಹೀಗೆ ಊರೊಳಗೆ ಬೇರುಬಿಟ್ಟವರು ನಾವೂ 'ಕೇರಿಯವರೇ' ಎಂದು ಹೇಳಿ 'ಊರುಕೇರಿ' ಒಂದಾಗಿಸಿ, ಊರೊಳಗಿದ್ದೂ ಕೇರಿಯವರ ಬದುಕು ಕಸಿದು ಕೊಳ್ಳುವುದರಿಂದ ಅವರಿಗೆ ನೇರವಾಗಿ ಅನ್ಯಾಯ ಮಾಡಿದಂತಾಗುತ್ತದೆ. ಈ ರೀತಿ ದಲಿತರಲ್ಲದವರಿಂದ ನಿಜವಾದ ದಲಿತರು ಸಾಮಾಜಿಕ ಅನ್ಯಾಯಕ್ಕೆ ಒಳಗಾಗುತ್ತಿದ್ದಾರೆ.

ಈ ಕಾರಣಕ್ಕಾಗಿ ಇಂಥವರು ಇಂದು ಜಾತಿಯಲ್ಲಿ ಪರಿಶಿಷ್ಟರಾದರೂ ದಲಿತರಾಗು ವುದಿಲ್ಲ. ನಿಜವಾದ ದಲಿತರು ತೆರೆ ಮರೆಯಲ್ಲಿಯೇ ಹೀನಾಯ ಬದುಕು ನಡೆಸುತ್ತಿದ್ದಾರೆ.

ಸಂವಿಧಾನಾತ್ಮಕವಾಗಿ ದಲಿತರಿಗೆ ಸಿಗಬೇಕಾದ ಅವಕಾಶ ಸೌಲಭ್ಯಗಳು ಆ ಮಟ್ಟದಲ್ಲಿ ದೊರೆತಿಲ್ಲ-ದೊರೆಯುತ್ತಿಲ್ಲ ಎಂಬ ವಾಸ್ತವ ಸತ್ಯ ಒಂದೆಡೆಯಾದರೆ, ಸೌಕರ್ಯಗಳನ್ನು ಪಡೆದುಕೊಂಡವರು ಆರ್ಥಿಕವಾಗಿ ಹಾಗೂ ಸಾಮಾಜಿಕವಾಗಿ ಗುರುತರ ಪ್ರಗತಿ ಹೊಂದಿದ್ದಾರೆ ಎಂಬ ಇನ್ನೊಂದು ಸತ್ಯವನ್ನು ನಾವು ಒಪ್ಪಲೇಬೇಕು. ದುರಂತವೆಂದರೆ ಈ ರೀತಿ ಪ್ರಗತಿ ಹೊಂದಿ ಬೆಳೆದವರು ತಮ್ಮ ಎಲ್ಲ ರೀತಿಯ ವರ್ಚಸ್ಸುಗಳನ್ನೂ ಬೀರುವುದರ ಮೂಲಕ ಸಂವಿಧಾನಾತ್ಮಕವಾದ ಎಲ್ಲಾ ಸೌಕರ್ಯಗಳನ್ನೂ ತಮ್ಮಲ್ಲಿಯೇ ಉಳಿಸಿಕೊಳ್ಳುವಲ್ಲಿ ನಿರತರಾಗಿದ್ದಾರೆ. ಇದರಿಂದ ನಿಜವಾದ ದಲಿತರು ಅವಕಾಶ ವಂಚಿತರಾಗಿ ಹೊಸದಾದ ಶೋಷಣೆಯ ಕ್ರೂರ ವ್ಯವಸ್ಥೆಯಲ್ಲಿ ಬಾಳಬೇಕಾದ ಕೆಟ್ಟ ಪರಂಪರೆ ನಿರ್ಮಾಣಗೊಂಡಿದೆ. ಇಂದು 'ದಲಿತ' ಎಂದು ಕರೆಯಿಸಿಕೊಳ್ಳುವ ರಾಜಕಾರಣಿ, ಅಧಿಕಾರಿ, ಜಮೀನ್ದಾರ ಮತ್ತು ಉದ್ಯಮಿಗಳ ಮಕ್ಕಳು ಥರ್ಡ್ ಕ್ಲಾಸಿನಲ್ಲಿ ಪಾಸಾಗಿದ್ದರೂ ಜಾತಿ ಪ್ರಮಾಣಪತ್ರ ಮುಂದುಮಾಡಿಕೊಂಡು ಮೀಸಲಾತಿ ಸೌಲಭ್ಯದಿಂದ ಉನ್ನತ ಹುದ್ದೆ ಗಿಟ್ಟಿಸಿಕೊಳ್ಳುವಲ್ಲಿ ಯಶಸ್ವಿಯಾಗುತ್ತಿದ್ದಾರೆ. ಇವರೆಲ್ಲರೂ ತಮ್ಮಷ್ಟಕ್ಕೆ ತಾವು 'ದಲಿತರು' ಎಂದು ಹೇಳಿಕೊಳ್ಳುವುದರ ಮೂಲಕ ಇವರೇ 'ನಿಜವಾದ ದಲಿತರು' ಎಂದು ಸಮಾಜ ಮತ್ತು ಸರ್ಕಾರಗಳು ನಂಬುವಂತೆ ಮಾಡುತ್ತಿದ್ದಾರೆ. ಆದರೆ, ನಿಜವಾದ ದಲಿತ ಯುವಕರು ಪ್ರಥಮ ದರ್ಜೆ ರ್‍ಯಾಂಕಿನಲ್ಲಿ ಪಾಸಾಗಿದ್ದರೂ ನೌಕರಿಗಾಗಿ ಇಂಟರ್‌ವ್ಯೂ ಸಹಿತ ಬರುವುದಿಲ್ಲ. ಬಂದರೂ ಉದ್ಯೋಗವಂತೂ ದೊರೆಯುವುದಿಲ್ಲ. ಏಕೆಂದರೆ, ಅನುಕೂಲಸ್ಥ ದಲಿತರಂತೆ ಕೇಳಿದಷ್ಟು ಹಣ ಕೊಡುವ, ಬ್ಯಾಂಕ್ ಚೆಕ್ ಬರೆದುಕೊಡುವ, ಪ್ರಭಾವಿ ರಾಜಕಾರಣಿಯ ವಶೀಲಿ ತರುವ ಸಾಮರ್ಥ್ಯ ಇರುವುದಿಲ್ಲ. ಇಂಥ ಶಕ್ತಿ ಇಲ್ಲ ಎಂದ ಮೇಲೆ ಬಯಸಿದ ಉದ್ಯೋಗ ದೊರೆಯುವುದಿಲ್ಲ. ಇದರಿಂದ ಸಾಯಲಿಕ್ಕೂ ಆಗದೇ ಬದುಕಲಿಕ್ಕೂ ಆಗದಂತಹ ಅನಿವಾರ್ಯವಾಗಿ ಉಳ್ಳವರ ಗುಲಾಮಗಿರಿಯಲ್ಲಿ ಒದ್ದಾಡಿ ಸಾಯಬೇಕಾದ ದುರಂತ ಸ್ಥಿತಿ ನಿರ್ಮಾಣಗೊಂಡಿದೆ.

ಇಂಥ ವಿಪರ್ಯಾಸದ ಸ್ಥಿತಿಯ ಹಿನ್ನೆಲೆಯಲ್ಲಿ ಇಂದು ದಲಿತರ ಸಮಸ್ಯೆಗಳನ್ನು ವಿರೂಪ ಗೊಳಿಸಿ ಬಿಂಬಿಸಲಾಗುತ್ತಿದೆ. ಈ ಹಿಂದೆ ಗಿಡಕ್ಕೆ ಕಟ್ಟಿ ಹೊಡೆದರೆ, ತಲೆ ಮೇಲೆ ಮಲ ಹೊರಿಸಿದರೆ ಅಥವಾ ಬಾಯಿಯಲ್ಲಿ ತುರುಕಿದರೆ, ಮಹಿಳೆಯನ್ನು ಬೆತ್ತಲೆಗೊಳಿಸಿ ಮೆರವಣಿಗೆ ಮಾಡಿದರೆ, 'ಹೊಲೆಯ' 'ಮಾದಿಗ' ಎಂದು ಕರೆದರೆ ದಲಿತ ಸಂಘಟನೆಗಳು, ದಲಿತೇತರ ಸಂಘಟನೆಗಳು ಉಗ್ರವಾಗಿ ಪ್ರತಿಭಟಿಸುತ್ತಿದ್ದವು, ಖಂಡಿಸುತ್ತಿದ್ದವು. ತಪ್ಪಿತಸ್ಥರಿಗೆ ಶಿಕ್ಷೆ ಕೊಡುವಂತೆ ಆಗ್ರಹಿಸುತ್ತಿದ್ದವು. ಆದರೆ, ಅದೇ ಸಂಘಟನೆಗಳಲ್ಲಿ ಎಷ್ಟೋ ಸಂಘಟನೆಗಳು ಆ ಹೋರಾಟವನ್ನು ಮರೆತು ಬೇರೆ ಧಂಧೆಯಲ್ಲಿ ಮೈಮರೆತಿವೆ. 'ನಿಜ ದಲಿತರ ಸಮಸ್ಯೆಗಳು ಬದಲಾಗಿಲ್ಲ; ಕೆಲ ದಲಿತರು ಬದಲಾಗಿದ್ದಾರೆ'. ಹೀಗಾಗಿ

## ಬಂಗಾರದ ಪಂಜರ

ತಂಗಳ ಕನಸುಗಳೆಂದು
ಹಂಗಿಸಬೇಡವೋ ಹುಡುಗಾ !
ಅನುಭವದ ಬುತ್ತಿಯ ಬಿಚ್ಚಿ
ಮೆಚ್ಚಿ-ಮೆಲ್ಲಗೆ ಮೆಲ್ಲುವ ನನಗೆ
ನಿನ್ನ ಹಂಗಿನ ಹಾಲೋಗರ ಬೇಕಿಲ್ಲ!

ಬಾಳನದಿಯ ಪ್ರವಾಹದಿ ಈಸುತ್ತ
ಸುಳಿಯ-ಸೆಳೆವುಗಳ ದಾಟಿ
ಛಲದಿ-ತೋಳ್ಬಲದಿ ದಡದತ್ತ
ಸಾಗಿರುವ ನಾನೆಂದೂ ನಿನ್ನ-
ಆಸರೆಯನರಸಿಲ್ಲ-ರಕ್ಷಣೆಯ
ಬಯಸಿಲ್ಲ!

ಭೂಮಿ-ಹೇಮಗಳ ಬಲೆಯನ್ನೊಡ್ಡಿ
ಹಿಡಿಯುವ ಛಲವೇತಕೊ
ನೀನಿಕ್ಕಿದ ಮುತ್ತಿನ ಕಾಳುಗಳ
ಹೆಕ್ಕುವವಳು ನಾನಲ್ಲ!

ಬಾನಂಗಳದಿ ಹಾಯಾಗಿ ಹಾರುವ --
ಹಕ್ಕಿಗೆ ಬಂಗಾರದ ಪಂಜರದಿ
ಬಂದಿಯಾಗುವ ಬಯಕೆ ಇಲ್ಲ!
ಗೆಳೆಯಾ, ನಿನ್ನ ಹಂಗು ನನಗೆ ಸಲ್ಲ!!



**ಕುಸುಮ ನಕೋಪಾ ಕರಾಳೆ**
ಉಪನ್ಯಾಸಕಿ, ಪ್ರಾಣಿಶಾಸ್ತ್ರವಿಭಾಗ, ಕರ್ನಾಟಕ ಸೈನ್ಸ್ ಕಾಲೇಜ್, ಧಾರವಾಡ

ಸಮಸ್ಯೆಗಳೂ ಬದಲಾಗಿವೆ. ಹೀಗೆ ಬದಲಾದ ದಲಿತ ಸಂಘಟನೆಗಳಿಗೆ, ದಲಿತೇತರ ಸಂಘಟನೆಗಳಿಗೆ, ದಲಿತ ನಾಯಕರುಗಳಿಗೆ, ಸಾಹಿತಿಗಳಿಗೆ, ವಿಮರ್ಶಕರಿಗೆ, ಚಿಂತಕರಿಗೆ ಇಂದು ನಿಜವಾದ ದಲಿತರ ಕ್ರೂರ ಬದುಕು ಕಣ್ಣಿಗೆ ಕಾಣುವುದಿಲ್ಲ, ಕಂಡರೂ ಗಮನಿಸುವುದಿಲ್ಲ. ತಮಗೆ ಪಾಲಿಕೆಯಲ್ಲಿ ಮೇಯರ ಸ್ಥಾನ ನೀಡುತ್ತಿಲ್ಲ. ದಲಿತ ಶಾಸಕನಾದರೂ ಮಂತ್ರಿ ಪದವಿ ನೀಡುತ್ತಿಲ್ಲ. ಸಂವೇದನಾಶೀಲ ಕೃತಿಗಳನ್ನು, ಸತ್ಯದ ಪ್ರತಿರೂಪವಾದ ಆತ್ಮ ಚರಿತ್ರೆಗಳನ್ನು ಬರೆದರೂ ಸರಿಯಾಗಿ ಗಮನಿಸುತ್ತಿಲ್ಲ, ಶಾಲು ಹೊದಿಸಿ ಸನ್ಮಾನಿಸುತ್ತಿಲ್ಲ, ಪ್ರಶಸ್ತಿ ನೀಡುತ್ತಿಲ್ಲ, ಅಕಾಡೆಮಿ, ಪರಿಷತ್, ಪ್ರಾಧಿಕಾರ ಸಂಸ್ಥೆಗಳಲ್ಲಿ ಅಧ್ಯಕ್ಷ ಸ್ಥಾನ ನೀಡುತ್ತಿಲ್ಲ, ಸಮ್ಮೇಳನದ ಅಧ್ಯಕ್ಷರನ್ನಾಗಿ ಮಾಡುತ್ತಿಲ್ಲ – ಇವೇ ಮೊದಲಾದ ಅವಕಾಶವಾದಿ ಸಮಸ್ಯೆಗಳೇ ಇಂದು ದಲಿತರ ಸಮಸ್ಯೆಗಳು ಎಂಬಂತೆ ಬಲವಾಗಿ ಹಾಗೂ ವ್ಯಾಪಕವಾಗಿ ಬಿಂಬಿಸಲಾಗುತ್ತಿದೆ. ಆದರೆ, ಅನ್ನ, ಆಶ್ರಯವಿಲ್ಲದೆ ಅಲೆದಾಡುತ್ತಿರುವವರ, ಇನ್ನೂ ಜಮೀನ್ದಾರರ ಬಿಗಿಮುಷ್ಟಿಯಲ್ಲಿ ನರಳುತ್ತಿರುವವರ, ಉನ್ನತ ಪದವಿಗಳನ್ನು ಹೊಂದಿದ್ದರೂ ಉದ್ಯೋಗವಿಲ್ಲದೆ ಅಲೆಯುತ್ತಿರುವ ಯುವಕರ ಪರಿಸ್ಥಿತಿ ಇವರಾರಿಗೂ ಕಾಣಿಸುತ್ತಿಲ್ಲ. ದಲಿತರ ಹೆಸರಿನಲ್ಲಿ ಮೀಸಲಾತಿ ಕ್ಷೇತ್ರದಿಂದ ಆಯ್ಕೆಯಾಗಿ ವಿಧಾನಸೌಧ ಹಾಗೂ ಸಂಸತ್ತುಗಳನ್ನು ಪ್ರವೇಶಿಸುವ ಎಷ್ಟು ಜನ ನಾಯಕರು ಇಂದು ದಲಿತರ ಬಗ್ಗೆ ಹೋರಾಡುತ್ತಿದ್ದಾರೆ ? ಎಷ್ಟು ಜನ ಈ ಜನರಿಗಾಗಿ ರಾಜಿನಾಮೆ ನೀಡಿದ್ದಾರೆ ? ಹೋರಾಡುತ್ತಿದ್ದರೂ ಅಂತಹ ಹೋರಾಟಗಳು ಯಾವ ದಲಿತರಿಗಾಗಿ ? ಇಂತಹ ರಾಜಕಾರಣಿಗಳು, ಅಧಿಕಾರಿಗಳು, ಉಳ್ಳವರು 'ಎಡಕಿನವರು', 'ಬಲಕಿನವರು' ಎಂಬ ಐಡೆಂಟಿಟಿ ಕಾರ್ಡ್ ಹಿಡಿದುಕೊಂಡು ತಮ್ಮ ಸ್ವಾರ್ಥ ಸಾಧನೆಯಲ್ಲಿಯೇ ತಂತ್ರ-ಕುತಂತ್ರಗಳನ್ನು ಹೆಣೆಯುತ್ತಿದ್ದಾರೆ. ಬಿ. ಆರ್. ಅಂಬೇಡ್ಕರ್ ಅವರು ಅಂದು ಇವರಂತೆಯೇ ದಾರಿ ತುಳಿದಿದ್ದರೆ ಈ ಜನ ಇಂದು ಇಷ್ಟು ಮರ್ಯಾದೆಯಿಂದ ಬದುಕಲು ಸಾಧ್ಯವಾಗುತ್ತಿತ್ತೆ? ಇವೆಲ್ಲವುಗಳನ್ನು ದಲಿತರೆನಿಸಿಕೊಂಡ ನಾಯಕರು, ಸಾಹಿತಿಗಳು, ಚಿಂತಕರು, ಹೋರಾಟಗಾರರು ಯೋಚಿಸಿ ತಮ್ಮಲ್ಲಿ ಆತ್ಮ ಅನ್ನೋದು ಇದ್ದರೆ ಅದನ್ನು ವಿಮರ್ಶೆಗೆ ಒಳಪಡಿಸಬೇಕಾಗಿದೆ.

ಡಾ|| ಬಿ. ಎಂ. ಪುಟ್ಟಯ್ಯ ಎಂಬುವರು ದಲಿತರ ನಿರ್ಣಯ ಹಾಗೂ ವರ್ತನೆಯ ಬಗ್ಗೆ ಒಂದು ಕಡೆ ಹೀಗೆ ದಾಖಲಿಸುತ್ತಾರೆ : "ಸರ್ಕಾರ ತಾನೇ ಮುಂದಾಗಿ ಏನನ್ನು ಜಾರಿಗೊಳಿಸುತ್ತದೋ ಅದು ತಮಗೆ ಮಾಡುತ್ತಿರುವ ಮೋಸವೆಂದು ಅಂದು ದಲಿತರು ತಿಳಿದಿದ್ದರು. ಆದರೆ, ಇಂದು ಸರ್ಕಾರದ ಕುತಂತ್ರದ ಯೋಜನೆಗಳನ್ನು ದಲಿತರು ತಮ್ಮ ಉದ್ಧಾರಕ್ಕಾಗಿಯೇ ಮಾಡುತ್ತಿವೆ ಎಂದು ಖುಷಿಪಟ್ಟು ಕುಣಿದಾಡುತ್ತಿದ್ದಾರೆ. ಇಂಗ್ಲಿಷ್ ಕಲಿಸುವ ವಿಷಯದಲ್ಲಿ ಕರ್ನಾಟಕದ ಚರಿತ್ರೆಯಲ್ಲಿ ಮೊಟ್ಟಮೊದಲಬಾರಿಗೆ ಆಳುವ ಸರ್ಕಾರ + ಐಟಿ ನಾರಾಯಣಮೂರ್ತಿ + ದಲಿತ ಚಿಂತಕರು, ಹೋರಾಟಗಾರರು + ದಲಿತಪರ ಚಿಂತಕರು=೦ ಎಂಬ ತೀರ್ಮಾನಕ್ಕೆ ಬಂದಿದ್ದಾರೆ. ಇದು ಚಾರಿತ್ರಿಕ ತಮಾಷೆಯ ಸಂಗತಿ. ನಾರಾಯಣಮೂರ್ತಿ ಮತ್ತು ದಲಿತರ ಹಿತಾಸಕ್ತಿ ಒಂದೇ ಆಗಿರಬೇಕಾದರೆ ಒಂದೋ ನಾರಾಯಣಮೂರ್ತಿ ದಲಿತರ ಹಂತಕ್ಕೆ ಇಳಿದಿರಬೇಕು,. ಇಲ್ಲವೇ ದಲಿತರು ನಾರಾಯಣಮೂರ್ತಿ ಹಂತಕ್ಕೆ ಏರಿರಬೇಕು. ಇಲ್ಲಿ ಎರಡೂ ನಡೆದಿಲ್ಲ" ಎಂದು ಹೇಳುತ್ತಾರೆ (ಹೊಸತು : ಜನವರಿ ವಿಶೇಷ ಸಂಚಿಕೆ – ೨೦೦೭, ಪು. ೧೯೧).

ಪುಟ್ಟಯ್ಯ ಅವರು ಗುರುತಿಸಿರುವ ಚಾರಿತ್ರಿಕ ಸತ್ಯ ಸಂಗತಿಯಾಗಿದ್ದರೂ = ೦ ವ್ಯವಸ್ಥೆಯ ಭಾಗಿದಾರರಲ್ಲಿ ನಿಜವಾದ ದಲಿತರು, ನಿಜವಾದ ಚಿಂತಕರು, ನಿಜವಾದ ಹೋರಾಟಗಾರರು, ನಿಜವಾದ ದಲಿತಪರ ಚಿಂತಕರು ಯಾರೂ ಇಲ್ಲ. ಇವರೆಲ್ಲ ತಮ್ಮ ಅಸ್ತಿತ್ವದ ಸ್ವಯಂಘೋಷಿತರು. ಇಂದು ಇವರೆಲ್ಲ ನಾರಾಯಣಮೂರ್ತಿಗಳೇ ಆದವರು. ನಿಜವಾದ ದಲಿತ, ನಿಜವಾದ ಚಿಂತಕ – ಹೋರಾಟಗಾರ, ಸಾಹಿತಿ, ನಿಜವಾದ ದಲಿತಪರ ಚಿಂತಕರು ನಾರಾಯಣಮೂರ್ತಿ ವ್ಯವಸ್ಥೆಯನ್ನು ಸಮರ್ಥಿಸಿಕೊಳ್ಳುವುದಿಲ್ಲ. ಬದಲಾಗಿ ವಿರೋಧಿಸುತ್ತಾರೆ. ನಾರಾಯಣಮೂರ್ತಿ ವ್ಯವಸ್ಥೆಯನ್ನು ನಾರಾಯಣಮೂರ್ತಿಯಂತಹವರೇ ಬಲವಾಗಿ ಸಮರ್ಥಿಸಿಕೊಳ್ಳುತ್ತಾರೆ. ಇಂದು ನಿಜವಾದ ಚಿಂತಕರು, ಹೋರಾಟಗಾರರು, ದಲಿತಪರ ಚಿಂತಕರು ಯಾರೂ ಇಲ್ಲ ಎನ್ನುವಷ್ಟರಮಟ್ಟಿಗೆ ಕಡಿಮೆ ಸಂಖ್ಯೆಯಲ್ಲಿದ್ದಾರೆ. ಇವರ ಧ್ವನಿ ಕೇಳಿಸುವುದಿಲ್ಲ. ಕೈ ಕಾಣಿಸುವುದಿಲ್ಲ. ಕೇಳಿಸಿದರೂ, ಕಾಣಿಸಿದರೂ ಅವರತ್ತ ಗಮನ ನೀಡುವುದಿಲ್ಲ. ಗಮನಿಸಿದರೆ ತಮ್ಮ ಅಸ್ತಿತ್ವಕ್ಕೆ ತೊಂದರೆ ಇದೆ ಎಂಬ ವಾಸ್ತವ ಸತ್ಯ ತಂತ್ರಿ-ಕುತಂತ್ರಿಗಳಿಗೆ ಗೊತ್ತು. ಪುಟ್ಟಯ್ಯನಂತಹವರು ಸರಿಯಾಗಿ ಇದನ್ನು ಗಮನಿಸಬೇಕಾಗಿದೆ.

ಒಂದು ಕಡೆ ಆಸ್ತಿ ಸಂಗ್ರಹವಾದಂತೆಯೇ ಇನ್ನೊಂದು ಕಡೆ ಕೊರತೆ ಉಂಟಾಗಿ ಅಸಮಾನತೆ ನಿರ್ಮಾಣಗೊಳ್ಳುತ್ತದೆ. ಆಸ್ತಿ ಸಂಗ್ರಹಕಾರರು ಸಮಾಜದಲ್ಲಿ ಸಮಾನತೆ ತರಲು ಇಚ್ಛೆಪಡುವುದಿಲ್ಲ. ಹಾಗೇನಾದರೂ ತಂದರೆ ತಮ್ಮ ವೈಭವದ ಬದುಕಿಗೆ ಧಕ್ಕೆ ಉಂಟಾಗುತ್ತದೆ ಎಂಬುದು ಅವರಿಗೆ ಗೊತ್ತು. ಸಮಾನತೆ ತರುವ ಇನ್ನೊಂದು ರೀತಿಯ ನಾಟಕವಾಡುತ್ತ ಅದೇ ಅಸಮಾನತೆ ವ್ಯವಸ್ಥೆಯನ್ನು ಜಾಣತನದಿಂದ ಕಾಯ್ದುಕೊಳ್ಳುತ್ತಾರೆ. ದೇವಾಲಯಕ್ಕೆ ಬಂದ ಶ್ರೀಮಂತರು ಹೊರಗೆ ತಟ್ಟೆ ಹಿಡಿದು ಕೂತವರಿಗೆ ಭಿಕ್ಷೆ ನೀಡಿ ಧರ್ಮ ಮೆರೆಯುತ್ತಾರೆ. ಆ ಮೂಲಕ ಅಲ್ಲಿ ಅವರು ಭಿಕ್ಷುಕರನ್ನು ಸೃಷ್ಟಿಸುತ್ತಾರೆ. ನಮ್ಮ ದೇಶದಲ್ಲಿ ಆಸ್ತಿ ಸಂಗ್ರಹಕಾರರು ಮಾಡಿದ್ದು, ಮಾಡುತ್ತಿರುವುದು ಇದನ್ನೇ. ದಾನ ಧರ್ಮದ ಹೆಸರಿನಲ್ಲಿ ದಲಿತರಿಗೆ, ದುರ್ಬಲರಿಗೆ, ಬಡವರಿಗೆ, ಅಸಹಾಯಕರಿಗೆ ಇವರು ಭಿಕ್ಷೆ ನೀಡುವ ನಾಟಕ ಹೂಡಿ ಭಿಕ್ಷುಕರನ್ನು ಸೃಷ್ಟಿಸುತ್ತಿದ್ದಾರೆಯೇ ಹೊರತು ತಮ್ಮಂತೆ ಅವರೂ ಬದುಕು ಸೃಷ್ಟಿಸಿಕೊಳ್ಳಲಿ ಎಂಬ ಆಶಯ ಅವರಲ್ಲಿ ಇಲ್ಲ. ಈ ಭಿಕ್ಷೆಯೇ ತಮ್ಮ ಪಾಲಿಗೆ ವರ ಎನ್ನುವಂತೆ ಹೊಟ್ಟೆಗಿಲ್ಲದವರು ಕುಣಿದಾಡುತ್ತಿದ್ದಾರೆ.

ಇಂತಹ ಪರಿಸ್ಥಿತಿಯಿಂದಾಗಿ ನಿಜವಾದ ದಲಿತರು ಸಂಕೀರ್ಣವಾದ ಕ್ರೂರ ವ್ಯವಸ್ಥೆಯಲ್ಲಿ ಸಿಕ್ಕಿಹಾಕಿಕೊಂಡಿದ್ದಾರೆ. ನಿಜವಾದ ದಲಿತರು ಒಂದು ಕಡೆ ಸಾಂಪ್ರದಾಯಿಕ ಶೋಷಕರನ್ನು ಎದುರಿಸಬೇಕಾಗಿದೆ. ಇನ್ನೊಂದು ಕಡೆ ದಲಿತರಲ್ಲದ ದಲಿತರ ಶೋಷಣೆ, ಪ್ರಗತಿಪರ ಮುಖವಾಡ ಧರಿಸಿರುವ ನಾಯಕರ, ಹೋರಾಟಗಾರರ ಶೋಷಣೆ ಹಾಗೂ ದಲಿತರ ಬದುಕನ್ನು ಬಂಡವಾಳವನ್ನಾಗಿಸಿಕೊಳ್ಳುತ್ತಿರುವ ಸೋಗಲಾಡಿ ಸಾಹಿತಿಗಳ ಚಿಂತಕರ ನಯವಂಚನೆಯನ್ನೂ ಎದುರಿಸಿ ತಮ್ಮ ಬದುಕಿನ ದಾರಿ ಕಂಡುಕೊಳ್ಳುವ ದುರಂತದ ಸನ್ನಿವೇಶದಲ್ಲಿ ನಿಂತಿದ್ದಾರೆ.

ಸಾಂಪ್ರದಾಯಿಕ ಶೋಷಕರಿಗಿಂತ ಮಗ್ಗುಲಲ್ಲಿಯೇ ಇರುವ ನಯವಂಚಕರ ಕೂಟ ತುಂಬಾ ಅಪಾಯಕಾರಿ. ಸಾಂಪ್ರದಾಯಿಕ ಶೋಷಕ ಎದುರಿನಿಂದ ಚಾಕುಚೂರಿ ಹಿಡಿದುಕೊಂಡು ಬರುತ್ತಾನೆ. ಆಗ ಅವನು ನಮಗೆ ಕಾಣಿಸಿಕೊಳ್ಳುತ್ತಾನೆ. ದುರಂತದಿಂದ ಬಚಾವ್ ಆಗಲು ಸ್ವಲ್ಪ ಸರಿದುಕೊಳ್ಳಬಹುದು. ಆದರೆ, ನಮ್ಮೊಂದಿಗೆಯೇ ಇರುವ ಮುಖವಾಡ ಧಾರಿ ಶೋಷಕರು, ನಯವಂಚಕರು ನಮ್ಮ ಮಗ್ಗುಲಲ್ಲಿಯೇ ಇರುವುದರಿಂದ ನಮಗೆ ಕಾಣಿಸುವುದಿಲ್ಲ, ಹೀಗಾಗಿ ಇವರು ನಮ್ಮೊಂದಿಗೆಯೇ ಇದ್ದುಕೊಂಡು ಯಾವಾಗ, ಯಾವ ಪ್ರಮಾಣದಲ್ಲಿ, ಯಾವ ರೀತಿಯಾಗಿ, ಯಾವ ಜಾಗದಲ್ಲಿ ಹೇಗೆ ಚಾಕುಚೂರಿ ಹಾಕಿ ಸಾಯಿಸುತ್ತಾರೆ ಹೇಳಲಿಕ್ಕಾಗದು. ನಿಜವಾದ ದಲಿತರ ಪರಿಸ್ಥಿತಿ ಇಂದು ಇದೇ ರೀತಿಯದಾಗಿದೆ. ಇಂದು ಇವರ ಸಹಾಯಕ್ಕೆ ಬರುವವರು ಯಾರು ? ಇವರ ಧ್ವನಿಗೆ ಯಾರು ಓಗೊಡುತ್ತಾರೆ ?

ನಿಜವಾದ ದಲಿತರ ಮೇಲೆ ನಡೆಯುತ್ತಿರುವ ಶೋಷಣೆ ಹಾಗೂ ಆಗುತ್ತಿರುವ ಅನ್ಯಾಯಗಳನ್ನೇ ನಿವಾರಿಸಿ, ಸಂವಿಧಾನಾತ್ಮಕವಾಗಿ ನ್ಯಾಯ ಕಲ್ಪಿಸಬೇಕಾದರೆ ಮೀಸಲಾತಿಯ ಹಿನ್ನೆಲೆಯಲ್ಲಿ ಶಾಸನಾತ್ಮಕ ಕ್ರಮದಿಂದ ಮಾತ್ರ ಸಾಧ್ಯವಿದೆ. ಮೀಸಲಾತಿ ಸೌಲಭ್ಯವನ್ನು ಪಡೆದುಕೊಂಡು ಸಮಾಜದಲ್ಲಿ ಗಣ್ಯರಾಗಿ, ನೆಮ್ಮದಿಯಾಗಿ ಬಾಳುತ್ತಿರುವವರನ್ನು ಮೀಸಲಾತಿಯಿಂದ ಹೊರಗೆ ಹಾಕಬೇಕು. ಅವರ ಕುಟುಂಬದ ನೇರ ಸಂಬಂಧಿಗಳು ಅಂದರೆ ಗಂಡ, ಹೆಂಡತಿ ಮತ್ತು ಮಕ್ಕಳು ಎಲ್ಲರಿಗೂ ಮೀಸಲಾತಿ ಸೌಲಭ್ಯವನ್ನು ಕಡಿತಗೊಳಿಸಬೇಕು. ಇಂದು ಅವರ ಮಟ್ಟಿಗೆ ಮಾತ್ರ ಮಿತಿಗೊಂಡಿರುವ ಈ ಮೀಸಲಾತಿಯ ಸೌಲಭ್ಯವನ್ನು ನಿಜವಾದ ದಲಿತರ ಗುಡಿಸಲು ಗುಡಾರಗಳವರೆಗೆ ಹರಿದು ಬರುವಂತೆ ಮಾಡಬೇಕಾಗಿದೆ. ನಿಜವಾದ ದಲಿತರ ಬದುಕನ್ನು ಬಂಡವಾಳ ಮಾಡಿಕೊಂಡು ದಲಿತರಲ್ಲದವರ ಬಗ್ಗೆ ಮಾತನಾಡುತ್ತಿರುವವರಿಗೆ ತಿಳಿಯ ಹೇಳಬೇಕಾಗಿದೆ. ಕೇಳದೇ ಹೋದರೆ ಹೋರಾಟದ ಕಣಕ್ಕೆ ಇಳಿದು ಬೇರೆ ರೀತಿಯಾಗಿಯೇ ಹೇಳಬೇಕಾಗಿದೆ. ನಿಜವಾದ ದಲಿತರು ಈ ಎಲ್ಲದರ ವಿರುದ್ಧ ಹೋರಾಟಕ್ಕೆ ಸಂಘಟನೆಗೊಳ್ಳಬೇಕಾಗಿದೆ. ಆ ಮೂಲಕ ತಮ್ಮ ಹಕ್ಕು ಪಡೆದುಕೊಂಡು ಬದುಕಲು ಮುಂದಾಗಬೇಕಾಗಿದೆ. ಇದರಿಂದ ಮೀಸಲಾತಿ ಸೌಲಭ್ಯ ವಾಸ್ತವವಾಗಿ ಯಾರಿಗೆ ದೊರೆಯಬೇಕಾಗಿದೆಯೋ ಅವರಿಗೆ ಮಾತ್ರ ದೊರೆಯುವಂತಹ ವ್ಯವಸ್ಥೆ ನಿರ್ಮಾಣಗೊಳ್ಳುತ್ತದೆ. ಮೀಸಲಾತಿ ತನ್ನ ಜವಾಬ್ದಾರಿಯ ಕೊನೆಯ ಅಂಚು ಮುಟ್ಟಿದಾಗ ತಾನಾಗಿಯೇ ಅದು ಕರಗಿಹೋಗುತ್ತದೆ. ಇಲ್ಲದೆ ಹೋದರೆ, ನಿಂತಿರುವ ಕೆಲವರಿಗೆ ಮಾತ್ರ ಲಭ್ಯವಾಗುತ್ತಿರುವ ಮೀಸಲಾತಿ ಅದೇ ಹಂತಕ್ಕೆ ಮಿತಿಗೊಳ್ಳುತ್ತದೆ. ಹಾಗೇ ದಲಿತರು ದಲಿತರಾಗಿಯೇ ಉಳಿಯುತ್ತಾರೆ. ದಲಿತರಲ್ಲದವರು ಅದರ ಲಾಭ ಪಡೆದುಕೊಳ್ಳುತ್ತ ನಿಜವಾದ ದಲಿತರ ಶೋಷಣೆಯಲ್ಲಿ ಪಾಲುದಾರರಾಗುತ್ತಾರೆ.

**ಡಾ|| ಕೆ. ಎನ್. ದೊಡ್ಡಮನಿ**
ಪ್ಲಾಟ್ ನಂ. ೮೦, ಸರಾಫ ಕಾಲನಿ, ಖಾನಾಪೂರ ರಸ್ತೆ
ಟಿಳಕವಾಡಿ, ಬೆಳಗಾವಿ - ೫೯೦ ೦೦೬



**ಬಿಳಿಯ ಚಾದರ** (ಕಾದಂಬರಿ)

*ಡಾ|| ಗುರುಪ್ರಸಾದ್ ಕಾಗಿನೆಲೆ*

**ಪುಟ : xvi + ೨೦೦ = ೨೧೬ ಬೆಲೆ : ರೂ. ೧೨೦**

**ಮನೋಹರ ಗ್ರಂಥ ಮಾಲಾ**, ಲಕ್ಷ್ಮೀ ಭವನ, ಸುಭಾಸ ರಸ್ತೆ ಧಾರವಾಡ - ೫೮೦ ೦೦೧

ಅವಳ ಮಕ್ಕಳಾದ ರಶ್ಮಿ ಮತ್ತು ಶ್ರೀಧರನ ಸುತ್ತ ಹೆಣೆದ ಕಥೆ. ಸಾಫ್ಟ್‌ವೇರ್ ಇಂಜಿನಿಯರ್ ಆದ ರಶ್ಮಿ, ವೈದ್ಯನಾದ ಶ್ರೀಧರ – ಇಬ್ಬರೂ ತಲುಪುವುದು ಒಂದು ಕಾಲಕ್ಕೆ ಜಗಮಗಿಸುತ್ತಿದ್ದ, ಕೈಬೀಸಿ ಕರೆಯುವ ಅಮೆರಿಕೆಯನ್ನು. ಇವರಿಬ್ಬರ ವೃತ್ತಿಗಳು, ಅಮೆರಿಕೆಯ ಜೀವನದ ಕಟುವಾಸ್ತವ, ಕಡೆಯ ಭ್ರಮನಿರಸನ ಇಲ್ಲಿಯ ಕಥಾವಸ್ತು. ಅಲೋಪತಿ ವೈದ್ಯ ವ್ಯವಸ್ಥೆಯ ಕಟು ವಿಮರ್ಶೆ ಇಲ್ಲಿದೆ. ಜಾತಿ ಮಡಿವಂತಿಕೆಗೆ ಗಂಟುಬಿದ್ದ ತಂದೆತಾಯಿಗಳ ಸೋಲು, ಅಮೆರಿಕೆಯಲ್ಲಿ ತಮ್ಮ ಸಂಸ್ಕಾರಗಳನ್ನು ಕಳೆದುಕೊಂಡು, ಜೀವನೋದ್ದೇಶವನ್ನು ಗೊಂದಲದ ಗೂಡಾಗಿಸಿಕೊಂಡ ಯುವಕ-ಯುವತಿಯರ ಪರಿಸ್ಥಿತಿ ಇಲ್ಲಿ ಚಿತ್ರಿತವಾಗಿದೆ. ಇಂಗ್ಲಿಷಿಗೆ ಪರ್ಯಾಯವಾಗಿ ಕಾಗಿನೆಲೆಯವರು ಆರಿಸಿದ ಕನ್ನಡದ ಪದಗಳು. ತೊಡೆ ಮೇಲಿಗ, ಮೃದುಯಂತ್ರಿ, ಪ್ರಾಣ ಪಾಲಕರು, ಧನ್ವಂತ್ರಿ, ಪಾಳಯ – ಇಂತಹ ಇನ್ನೂ ಅನೇಕ ಪದಗಳು ವಿನೋದ, ವ್ಯಂಗ್ಯದೊಂದಿಗೆ ಅಂತರಾಳದಲ್ಲಿ ಅವುಗಳ ವಾಸ್ತವಾರ್ಥವನ್ನೂ ಅಡಗಿಸಿಟ್ಟುಕೊಂಡಿವೆ. ಯು. ಆರ್. ಅನಂತಮೂರ್ತಿಯವರ ಮುನ್ನುಡಿ ಇದೆ. ಅಮೆರಿಕೆಯಲ್ಲಿ ವೃತ್ತಿನಿರತರಾಗಿರುವ ಲೇಖಕರು ತಮ್ಮ ಅನುಭವಗಳನ್ನು ಸಮರ್ಥವಾಗಿ ಬಳಸಿಕೊಂಡಿದ್ದಾರೆ.



**ಹಿಡಿಯದ ಹಾದಿ** (ಲಲಿತ ಪ್ರಬಂಧಗಳು)

*ಗಿರಡ್ಡಿ ಗೋವಿಂದರಾಜ*

**ಪುಟ : xx + ೧೨೮ = ೧೪೮ ಬೆಲೆ : ರೂ. ೯೦**

**ಮನೋಹರ ಗ್ರಂಥ ಮಾಲಾ**, ಲಕ್ಷ್ಮೀ ಭವನ, ಸುಭಾಸ ರಸ್ತೆ ಧಾರವಾಡ - ೫೮೦ ೦೦೧

೧೯೬೯ರಿಂದ ೨೦೦೬ರ ಅವಧಿಯಲ್ಲಿ ಬರೆದ ಒಂಬತ್ತು ಪ್ರಬಂಧಗಳು ಇಲ್ಲಿವೆ. ಲೇಖಕರು ಒಂದು ವರ್ಷಕಾಲ ಇಂಗ್ಲೆಂಡಿನಲ್ಲಿದ್ದ ಅನುಭವಗಳನ್ನು 'ಇಂಗ್ಲೆಂಡಿನಲ್ಲಿ ಭಾರತೀಯರು' ಹೇಳುತ್ತದೆ. ಪುಸ್ತಕಗಳನ್ನು ಕಡ ಕೊಡುವ, ತರುವ ಅನುಭವಗಳು, ಪುಸ್ತಕಗಳು ನಮ್ಮ ಕೈತಪ್ಪಿ ಹೋಗದಂತೆ ಜಾಗರೂಕರಾಗುವ ಉಪಾಯವನ್ನು ೧೯೬೯ರಲ್ಲಿ ರಚಿಸಿದ 'ಪುಸ್ತಕಗಳು' ತಿಳಿಸಿದರೆ ೨೦೦೬ರ 'ಇನ್ನಷ್ಟು ಪುಸ್ತಕಗಳು' ಪ್ರಬಂಧದಲ್ಲಿ ಮನೆಯಲ್ಲಿ ಬಹುಪಾಲು ಸ್ಥಳವನ್ನು ಹಿಡಿದು ಕುಳಿತ ಬೇಡವಾದ ಪುಸ್ತಕಗಳನ್ನು ಸಾಗಹಾಕಲು ಬೀಳುವ ಪಡಿಪಾಟಲಿನ ಸೂಕ್ಷ್ಮ ವ್ಯಂಗ್ಯ ಇದೆ. 'ಕಿಸೆಗಳ್ಳತನ' ಗಿರಡ್ಡಿಯವರ ಸ್ವಾನುಭವವನ್ನು ಚಿತ್ರಿಸಿ, ಒಂದೊಂದು ಕಿಸೆಗಳ್ಳತನದ ಪ್ರಸಂಗವೂ ಒಂದೊಂದು ಕಲಾಕೃತಿ ಎಂಬ ಅವರ ಒಳನೋಟವನ್ನು ಕಟ್ಟಿ ಕೊಡುತ್ತೆ. ಇನ್ನು 'ಮುನ್ನುಡಿ ಎಂಬ ವ್ರತ'ದಲ್ಲಿ ಮುನ್ನುಡಿಕಾರನ ಸುಖದುಃಖಗಳ ಜೀವನಚಿತ್ರವಿದೆ. ಗಿರಡ್ಡಿಯವರು ಅನೇಕ ಪ್ರಶಸ್ತಿ ನೀಡುವ ಸಂಸ್ಥೆಗಳ ಸದಸ್ಯನಾಗಿ, ಸಂಚಾಲಕನಾಗಿ, ಅಧ್ಯಕ್ಷನಾಗಿ ಅವುಗಳ ಒಳಹೊರಗನ್ನು ಕಂಡವರು. ಪ್ರಶಸ್ತಿಗಳ ಸತ್ಯಾಸತ್ಯತೆಗಳು 'ಪ್ರಶಸ್ತಿ ಎಂಬ ಆಕಸ್ಮಿಕ'ದಲ್ಲಿ ಅನಾವರಣಗೊಂಡಿವೆ. ಹಾಸ್ಯ ಇಲ್ಲಿಯ ಪ್ರಬಂಧಗಳಲ್ಲಿ ಹಾಸುಹೊಕ್ಕಾಗಿರುವ ಗುಣ.

**ಮೆಲುಕು** (ಚಿಂತನ ಬರಹಗಳು)

*ಡಾ|| ಆರ್. ರಾಮಚಂದ್ರ*

**ಪುಟ : viii + ೬೪ ಬೆಲೆ : ರೂ. ೪೦.**

**ಹೊನ್ನು ಪ್ರಕಾಶನ**, ನಂ. ೧೨೩, 'ಹೊನ್ನು', ಶ್ರೀಕಂಠೇಶ್ವರ ಡಿಪಾರ್ಟ್‌ಮೆಂಟಲ್ ಸ್ಟೋರ್ಸ್ ಹಿಂಭಾಗ, ವಿಶ್ವೇಶ್ವರಯ್ಯ ರಸ್ತೆ, ವಿದ್ಯಾನಗರ, ಹಾಸನ - ೫೭೩ ೨೦೧



ಚಿಕ್ಕ ಚೊಕ್ಕ ಪುಸ್ತಕ. ಸರಳ ಸುಂದರ ರಕ್ಷಾಪುಟ. ವಿಷಯಗಳು ವೈವಿಧ್ಯ. ಜಾಹಿರಾತುಗಳ ಹಾವಳಿ, ಪರದೆಯ ಎಲ್ಲವನ್ನೂ ಆವರಿಸಿದ ಯುಗ, ಪ್ರಾಣಿಗಳಿಂದ ಕಲಿಯಬೇಕಾದ ನೀತಿ, ನಾಗರಿಕತೆ, ವ್ಯಾಪಾರಿ ವಿಶ್ವ, ಮಾನವ ಸಂಬಂಧಗಳು, ಜಡವಸ್ತುಗಳಿಗೆ ಹೆಚ್ಚುತ್ತಿರುವ ಪ್ರಾಶಸ್ತ್ಯ– ಹೀಗೆ ಒಟ್ಟು ೨೪ ಬಿಡಿ ಬರಹಗಳ ಸಂಕಲನ. ಈ ಬಿಡಿ ಲೇಖನಗಳು ಆಕಾಶವಾಣಿಯ 'ಚಿಂತನ' ಕಾರ್ಯಕ್ರಮದಲ್ಲಿ ಪ್ರಸಾರಗೊಂಡವು. ಲೇಖಕರ ವಿಸ್ತಾರವಾದ ಓದು, ಚಿಂತನೆಗಳ ಆಳವನ್ನು ಇಲ್ಲಿ ಗುರುತಿಸಬಹುದು. ಇಲ್ಲಿಯ ಯಾವ ಬರಹಗಳೂ ದೀರ್ಘವೆನಿಸೊಲ್ಲ, ಯಾವ ವಾಕ್ಯವನ್ನೂ ಅನಗತ್ಯವಾಗಿ ಜಗ್ಗಿಸಿಲ್ಲ. ಅಚ್ಚುಕಟ್ಟುತನ, ಸ್ಫುಟತೆ ಈ ಕಿರು ಪುಸ್ತಕದ ವಿಶೇಷತೆ. ಪ್ರತಿ ಲೇಖನವೂ ವಾಸ್ತವ ಸಮಸ್ಯೆಯ ಚರ್ಚೆ ನಡೆಸುವುದರೊಂದಿಗೆ ಪರಿಹಾರದತ್ತಲೂ ಬೆಳಕು ಹರಿಸುತ್ತವೆ. ಲೇಖಕರು ಇನ್ನಷ್ಟು ಬರೆಯಲಿ ಎನಿಸುತ್ತೆ.




ಅಭಿನವ ಚಾತುರ್ಮಾಸಿಕ

ಸಂಪುಟ ೧೩ ಸಂಚಿಕೆ : ೩

**ಬಾಗಿಲು** – ಈ ಹೊತ್ತಿನ ತಮಿಳು ಕಥೆಗಳು

*ಸಂ. ಮತ್ತು ಅನು : ಶ್ರೀಮತಿ ಜಯಲಲಿತ*

**ಪುಟ : ೧೬೦ ಬೆಲೆ : ಬಿಡಿ ಪ್ರತಿ ರೂ. ೭೫**

**ಅಭಿನವ**, ಸಂ. ೧೭/೧೮-೨, ಮೊದಲನೆಯ ಮುಖ್ಯರಸ್ತೆ, ಮಾರೇನಹಳ್ಳಿ ವಿಜಯನಗರ, ಬೆಂಗಳೂರು - ೫೬೦ ೦೪೦

ಒಟ್ಟು ೧೯ ವಿವಿಧ ತಮಿಳು ಲೇಖಕರ ಕಥೆಗಳ ಸಂಕಲನ. ಜಯಲಲಿತ ಅವರ ಮಾತಿನಲ್ಲಿ: ಇಲ್ಲಿ ಪ್ರತಿಯೊಂದು ಚಳುವಳಿ ಮತ್ತು ಹೊಸ ಪ್ರವೃತ್ತಿಗಳನ್ನು ಬಿಂಬಿಸುವ ಕಥೆಗಳನ್ನು ನೀಡಲಾಗಿಲ್ಲ, ಆದರೆ ಪ್ರಾರಂಭ ಕಾಲದಿಂದ ಇತ್ತೀಚಿನ ಕಥೆಗಾರರಾದ ದೇವಿಭಾರತಿಯವರೆಗೆ ಕೆಲವು ಕಥೆಗಳನ್ನು ಅನುವಾದಿಸಲಾಗಿದೆ. ಹೀಗಾಗಿ ಇದು ತಮಿಳು ಕಥಾಲೋಕದ ಒಂದು ಕ್ರಾಸ್-ಸೆಕ್ಷನ್. ಆರಂಭದಲ್ಲಿ ಪ್ರೊ|| ಕಾರ್ಲೋಸ್ ಅವರು ಒಂದು ವಿಚಾರ ಸಂಕಿರಣದಲ್ಲಿ ಮಂಡಿಸಿದ 'ತಮಿಳು ಕಥೆಗಳಲ್ಲಿ ಪಾಶ್ಚಾತ್ಯ ಪ್ರಭಾವ, ಪ್ರೇರಣೆಗಳು' ಎಂಬ ಪ್ರಬಂಧವಿದೆ. ಈ ಸಂಕಲನ ಹಲವು ನೆಲೆಗಳಿಂದ ಹಲ ಬಗೆಯ ವಿಚಾರ, ಸಂಬಂಧ, ಅಭಿವ್ಯಕ್ತಿಗಳಿಗೆ ತೆರೆದುಕೊಳ್ಳಲು ದಾರಿಯಾಗಲಿ ಎಂಬುದು ಅಭಿನವದ ಆಶಯ.



**ಹುಚ್ಚನ ದಿನಚರಿ ಮತ್ತು ಇತರ ಕಥೆಗಳು**

(ಲು ಷುನರ ಆಯ್ದ ಚೀನಿ ಕಥೆಗಳು)

*ಮೂಲ : ಲು ಷುನ್ ಅನು : ಡಾ|| ವಿಜಯಾ ಸುಬ್ಬರಾಜ್*

**ಪುಟ : ೯೬ ಬೆಲೆ : ರೂ. ೬೦**

**ಅಕ್ಷಯ ಪಬ್ಲಿಷರ್ಸ್**, ನಂ. ೮೭, ''ಗುರುಕೃಪ'', ೧೧ನೇ ಮುಖ್ಯರಸ್ತೆ, ೩ನೇ ಹಂತ, ಗಿರಿನಗರ, ಬೆಂಗಳೂರು - ೮೫

ಪುಸ್ತಕದ ಆರಂಭದಲ್ಲಿ ಮೂಲ ಲೇಖಕನ ಕುರಿತ ಒಂದೂವರೆ ಪುಟದ ಪರಿಚಯವಿದೆ. ಅದರಂತೆ ಲು ಷುನ್ ೧೮೮೧-೧೯೩೬ರ ನಡುವಿನಲ್ಲಿ ಬದುಕಿದ್ದ ಚೀನಾದ ಅತ್ಯಂತ ಪ್ರಭಾವಿ ವ್ಯಕ್ತಿ, ಚಿಂತಕ, ಕ್ರಾಂತಿಕಾರಿ, ಕೆಳವರ್ಗದವರ ಬಗ್ಗೆ ಅತ್ಯಂತ ಕಾಳಜಿ ಇದ್ದವ. ಈ ಪುಸ್ತಕದಲ್ಲಿ ಆತನ ಒಟ್ಟು ೯ ಕಥೆಗಳ ಅನುವಾದವಿದೆ. ಈಗಾಗಲೇ ವಿಜಯ ಅವರಿಂದ ಲು ಷುನ್ ಕಥೆಗಳ ಅನುವಾದಗಳು ಹಲವು ಪುಸ್ತಕಗಳಲ್ಲಿ ಹೊರಬಂದಿವೆ. ತಮ್ಮ ಬರಹಗಳನ್ನು ಇನ್ನೆರಡು ಬಾರಿ ಓದಿ ಪರಿಷ್ಕರಿಸಿ, ಎರಡು-ಮೂರು ಬಿಡಿ ಪುಸ್ತಕಗಳನ್ನು ಸಾವಧಾನವಾಗಿ ಒಂದೇ ಪುಸ್ತಕದಲ್ಲಿ ತಂದು ಒಳ್ಳೆಯ ಮುಖಪುಟದೊಂದಿಗೆ ಮುದ್ರಿಸಿದರೆ ಚೆನ್ನಾಗಿರುತ್ತೆ.

**ಮನು ಮತ್ತು ಭೈರಪ್ಪ**

*ಪ್ರೊ|| ಎ. ಸಿ. ಹಿರೇಒಡೆಯರ್*

**ಪುಟ : ೧೨೦ ಬೆಲೆ : ರೂ. ೭೦**

**ಅಭಿರುಚಿ ಪ್ರಕಾಶನ**, ನಂ. ೩೮೬, ೧೪ನೆಯ ಮುಖ್ಯರಸ್ತೆ ೩ನೆಯ ಅಡ್ಡರಸ್ತೆ, ಸರಸ್ವತಿಪುರ, ಮೈಸೂರು - ೯



ಮನುಸ್ಮೃತಿ ಹಾಗೂ ಡಾ|| ಎಸ್. ಎಲ್. ಭೈರಪ್ಪನವರ ಕಾದಂಬರಿಗಳ ಒಂದು ತೌಲನಿಕ ಓದು. ಲೇಖಕರೇ ಪೀಠಿಕೆಯಲ್ಲಿ ತಿಳಿಸುವಂತೆ ಭೈರಪ್ಪನವರ ಕಾದಂಬರಿಗಳ ಮೇಲೆ 'ಮನುಸ್ಮೃತಿ'ಯ ಪ್ರಭಾವ ಎಷ್ಟರ ಮಟ್ಟಿಗೆ ಆಗಿದೆ ಎಂಬುದನ್ನು, ಭೈರಪ್ಪನವರು ಮನುವಿನ ವಿಚಾರಗಳನ್ನು ಪ್ರತಿಪಾದಿಸಲು ತಮ್ಮ ಕಾದಂಬರಿಗಳನ್ನು ಬಳಸಿಕೊಂಡಿದ್ದಾರೆ ಎಂಬುದನ್ನು ಗುರುತಿಸುವುದು ಈ ಪುಸ್ತಕದ ಉದ್ದೇಶ. ಇಲ್ಲಿ ಭೈರಪ್ಪನವರ 'ಧರ್ಮಶ್ರೀ' ಕಾದಂಬರಿಯಿಂದ ಆರಂಭಿಸಿ 'ನೆಲೆ' ಕಾದಂಬರಿಯವರೆಗೆ ಅವರ ಒಟ್ಟು ೧೩ ಸಾಮಾಜಿಕ ಕಾದಂಬರಿಗಳನ್ನು ಪರೀಕ್ಷೆಗೆ ಒಳಪಡಿಸಲಾಗಿದೆ. 'ಪರ್ವ' ಪುರಾಣದ ವಿಷಯವನ್ನು ಒಳಗೊಂಡಿರುವುದರಿಂದ ಅದನ್ನು ಇಲ್ಲಿ ಗಣನೆಗೆ ತೆಗೆದುಕೊಂಡಿಲ್ಲ.

– ಸಹನ, ನಂ. ೩, 'ಕೆರೆಮನೆ' ಅಪಾರ್ಟ್‌ಮೆಂಟ್ಸ್, 'ದೇವರಕೆರೆ' ಎಕ್ಸ್‌ಟೆನ್ಶನ್, ಇಸ್ರೋ ಲೇಔಟ್, ಬೆಂಗಳೂರು - ೫೬೦ ೦೭೮

ಮನಸ್ಸು ಯಾವುದನ್ನು ಗ್ರಹಿಸಬೇಕೆನ್ನುವುದು ಹಾಗೆ ಕಾವ್ಯ ಎನ್ನುವುದು ಕವಿ ಪ್ರತಿಭೆಯಿಂದ ನಿರ್ಮಾಣವಾದ ಒಂದು ವಿಶಿಷ್ಟ ಪ್ರಪಂಚ. ಅದರ ಮೂಲದ್ರವ್ಯ ನಮ್ಮ ವಾಸ್ತವ ಲೋಕದ ಅನುಭವಗಳೇ ಆದರೂ, ಪ್ರತಿಭಾವಶವಾದ ಅನುಭವಗಳು, ಅಲ್ಲಿ ತಾಳುವ ಪರಿವರ್ತಿತ ರೂಪಗಳು ಎಷ್ಟೋ ವೇಳೆ ಈ ವಾಸ್ತವ ಲೋಕದ ನಿಯತಿಯ ಗೆರೆಯನ್ನು ದಾಟಿದವುಗಳಾಗಿರುತ್ತವೆ. 'ಆಂಜನೇಯ ಸಾಗರವನ್ನು ಹಾರಿ ದಾಟುವದು, ನಾರದರು ನೀರದ ಮಾರ್ಗದಿಂದ ಅವತರಿಸುವುದು, ಯಕ್ಷನು ಮೋಡವೊಂದರ ಮೂಲಕ ನಲ್ಲೆಗೆ ಸಂದೇಶವನ್ನು ಕಳಿಸುವುದು, ಸೀತೆ ಅಗ್ನಿಪ್ರವೇಶ ಮಾಡಿ ಹೊಸತೇಜಸ್ಸಿನಿಂದ ಹೊರಕ್ಕೆ ಬರುವುದು, ವೈಶಂಪಾಯನ ಸರೋವರದಲ್ಲಿ ಅಡಗಿ ಕುಳಿತ ದುರ್ಯೋಧನ, ಭೀಮನ ಮೂದಲಿಕೆಯ ಮಾತು ಕೇಳಿ, ನೀರೊಳಗಿದ್ದು ಕೋಪದಿಂದ ಬೆವರುವುದು, ಭೀಮನ ಗದಾಘಾತಕ್ಕೆ ಕೂರ್ಮನ ಬೆನ್ನು ಕುಸಿಯುತ್ತದೆ.' ಈ ಬಗೆಯ ವರ್ಣನೆಗಳನ್ನೋದಿದರೆ, ಇವೆಲ್ಲ ಸುಳ್ಳು ಎಂದೋ ಅಸಂಭಾವ್ಯವೆಂದೋ ಮೇಲುನೋಟಕ್ಕೆ ತೋರಿದರೂ, ಶತಮಾನಗಳಿಂದ ಕವಿಗಳು ಇಂಥ ಸಂಗತಿಗಳನ್ನು ಕಲ್ಪಿಸುತ್ತಲೇ ಬಂದಿದ್ದಾರೆ. ಸಹೃದಯರು ಇವುಗಳನ್ನು ಒಪ್ಪಿಕೊಂಡು ಆಸ್ವಾದಿಸಿ ಆನಂದಿಸುತ್ತಾ ಬಂದಿದ್ದಾರೆ. ಆದ್ದರಿಂದ ಇವುಗಳನ್ನು ತಳ್ಳಿಹಾಕಲು ಸಾಧ್ಯವಿಲ್ಲ. ಅದಕ್ಕೇ ಮಮ್ಮಟನು 'ಕಾವ್ಯನಿರ್ಮಿತಿ'ಯನ್ನು 'ನಿಯತಿಕೃತಿ ನಿಯಮ ರಹಿತವಾದದ್ದು' ಎಂದಿರುವನು. ಹೀಗಾಗಿ ನಮ್ಮ ಕಾವ್ಯಕ್ಷೇತ್ರಕ್ಕೆ ಬರುವ ಯುವಕವಿ ಕಾವ್ಯದ ಸೆಲೆಯ ಸ್ತರಗಳನ್ನು ಅಧ್ಯಯಿಸುವುದು ಒಳಿತು.

# ಕಾವ್ಯ ಸೆಲೆಯ ಸ್ತರಗಳು

## ಡಾ|| ಸಣ್ಣ ವೀರಣ್ಣ ಹಾಲಪ್ಪ ದೊಡ್ಡಮನಿ

'ನೈಜತೆ'ಯೆನ್ನುವುದು ಬದುಕನ್ನು ಒಂದು ಅಮರತ್ವದ ಕಡೆಗೆ ಕೊಂಡೊಯ್ಯುವ ಸಾಧನವಾಗಿದೆ. ಅಂತೆಯೇ ಅದರ ಜೊತೆ ಕಾವ್ಯದಲ್ಲಿ ಸಮ್ಮಿಳಿತಗೊಂಡಿರುವುದು 'ಸೌಂದರ್ಯ ಪ್ರಜ್ಞೆ'. ಇದನ್ನು ಮಾನವ ಯಾವ ರೂಪದಲ್ಲಿಯೇ ಆಗಲಿ ಒಮ್ಮೆ ಕಂಡರಾಯಿತು, ಮರೆಯಲು ಸಾಧ್ಯವಿಲ್ಲ. ಸತ್ಯ, ಸೌಂದರ್ಯಗಳಂತೆಯೇ ಸುಖವೂ ಒಂದು. ಸುಖದ ಅನುಭವ ಕ್ಷಣಮಾತ್ರವಾಗಿದ್ದರೂ ಅದು ಅಮೃತಗೊಂಡಾಗ, ಮಾನವ ದೇವನಂತೆ ತನ್ನನ್ನು ತಾನು ಮರೆತುಬಿಡುವನು. ಯಾವುದೇ ಸಾಹಿತ್ಯವಿರಲಿ ಪ್ರಮುಖವಾಗಿ ಸತ್ಯ ಮತ್ತು ಸೌಂದರ್ಯದ ಕಲ್ಪನೆಯನ್ನು ಹೊಂದಿದ್ದರೆ, ಪರಬ್ರಹ್ಮನ ಸಾಕ್ಷಾತ್ಕಾರ ಪಡೆದಂತೆ. ಮಾನವನ ಬದುಕು ಹುಡುಕಲು ಹೊರಟಿದ್ದು ಇದೆ. ಸತ್ಯ-ಸೌಂದರ್ಯ ಮತ್ತು ಸುಖ ಇವು ಅಡಗಿರುವುದು ಸಾಹಿತ್ಯದ ಗರ್ಭದಲ್ಲಿ. ಜೀವನವು ಒಂದು ಕಾವ್ಯ 'ಸೃಷ್ಟಿ'ಯಾಗಿರುವಂತಹದ್ದು. ಅಂದರೆ ಪ್ರತಿಯೊಂದು ಜೀವಿಯೂ ತನಗೆ ಬೇಕಾದುದನ್ನು ಪಡೆಯಲು ಶ್ರಮಿಸುವ ಶಕ್ತಿ. ಆದರೆ ಸಾಹಿತ್ಯ ಹಾಗಾಗದು. ಅದು ಶಬ್ದ ಸೃಷ್ಟಿ ಭಾಷೆ - ಪರಿಭಾಷೆಗಳ ಮೂಲಕ ಅರ್ಥ ಸಾದೃಶ್ಯತೆಯನ್ನು ತಂದುಕೊಡುವ ಶಕ್ತಿ. ಅಂದರೆ ಜೀವನದ ಒಟ್ಟಾರೆ ಅರ್ಥವನ್ನು ಸೌಂದರ್ಯ ಮತ್ತು ಸತ್ಯಗಳ ಮೂಲಕ ಕಟ್ಟಿಕೊಟ್ಟು, ಆನಂದವನ್ನು ಪಡೆದುಕೊಳ್ಳಲು ತನ್ನನ್ನು ತಾನು ತೆರೆದುಕೊಳ್ಳುವಂತಹದ್ದು. ಆದ್ದರಿಂದಲೇ ಅದನ್ನು ಸೃಜಿಸುವ ಲೇಖಕನಿಗೆ 'ಶಬ್ದಗಾರುಡಿಗ' ಎಂದು ಕರೆಯುವುದು.

ಈ ಶಬ್ದ ಅರ್ಥಗಳ ಹಿಂದೆ ಮೇಲೆ ನಿರೂಪಿತ ಸತ್ಯ, ಸೌಂದರ್ಯ-ಸುಖವು ಜೀವಿಗೆ ಅರಿವಿಲ್ಲದೆ ಆಗಾಗ, ನುಸುಳಿ ಸಮ್ಮೋಹನಗೊಳಿಸುವ ಕ್ರಿಯೆಯಲ್ಲಿ ಲೀನವಾಗಿ ಇರುತ್ತದೆ. ಎಲ್ಲ ಸಾದೃಶ್ಯ ಜೀವಿಗಳನ್ನು ನಿಸರ್ಗದಡಿ ನೆರಳಾಗಿ 'ಪ್ರತಿಕೃತಿ'ಯಾಗಿ ಭೌತಿಕ ಜಗತ್ತಿನಿಂದ ಆಧ್ಯಾತ್ಮಿಕತೆಗೆ ಕರೆದೊಯ್ಯುವ ಅಥವಾ ದೃಶ್ಯದಿಂದ ಅದೃಶ್ಯದೆಡೆಗೆ ಸೆಳೆಯುವ ಆಕರ್ಷಣವೆನ್ನಬಹುದು.

ಹಾಗೆ 'ರವಿ ಕಾಣದ್ದನ್ನು ಕವಿ ಕಂಡನು' ಎನ್ನುವಲ್ಲಿ ಒಂದು ಸತ್ಯವಿದೆ. ಇಲ್ಲಿ ಕವಿಯು ಗೋಚರಿಸುವ, ಗೋಚರಿಸಬಹುದಾದ ಸೆಲೆಯನ್ನು ಗುರುತಿಸುವುದೇ ಆತನ ಕರ್ಮವಾಗಿದೆ. ಇಲ್ಲಿ ಜೀವಿಯ ಜೀವವಿರುವಲ್ಲಿ ಅದಕ್ಕೆ ತಕ್ಕ ಪರಿಸರದ ನಾದಮಯ ವಾತಾವರಣವಿದ್ದೇ ಇರುತ್ತದೆ. ಆದ್ದರಿಂದ 'ಜೀವನವಿಲ್ಲದೆ ಸಾಹಿತ್ಯವಿಲ್ಲ'ವೆಂದಿರುವುದು. ಪ್ರತಿಯೊಂದು ಜೀವನವೂ ಒಂದಿಲ್ಲೊಂದು ಬಗೆಯ ರಸಾನುಭವವನ್ನು ಪಡೆಯುತ್ತದೆ. ಪಡೆದುದನ್ನು ಅಥವಾ ಗ್ರಹಿಸಿರುವುದನ್ನು ಅರಗಿಸಿಕೊಂಡು ಅಭಿವ್ಯಕ್ತಿಗೊಳಿಸುವ ಕ್ರಿಯೆ ಮಾಧ್ಯಮವನ್ನು ಅವಲಂಬಿಸಿರುತ್ತದೆ. ಇದರಿಂದ ಆಗ ಇನ್ನೊಂದು ಜೀವಕ್ಕೂ ಅದು ಪರಿಣಾಮ ಬೀರುವ ಸಾಧ್ಯತೆ ಹೆಚ್ಚು. ಆಗ 'ಶಬ್ದಕಾವ್ಯವಾಗಿ', 'ಜೀವನ ಕವಿಯಾಗಿ' ಮಾರ್ಪಾಡುಗೊಳ್ಳುವುದು.

ಒಂದು ವೇಳೆ 'ಜೀವ'ನು ಆತ್ಮದ ಕಲ್ಪನೆಯನ್ನು ಮೂಡಿಸಿಕೊಳ್ಳದೆ ಹೋದರೆ, ಅದರ ಅರಿವು ಮತ್ತು ಪರಿವೆ ಮೂಡದೆ ತೊಳಲಿ, ಬಳಲಿ, ಜಡತ್ವಕ್ಕೆ ನಾಂದಿಯಾಗುವುದು. ಒಂದು ವೇಳೆ ರಸಾನುಭವದ ಭವ್ಯತೆ ಮೂಡಿದ್ದಾದರೆ ಜೀವನವೊಂದು ನಾಟಕ, ಜೀವನ ಒಂದು ಕಾವ್ಯ, ಅದು ಒಂದು ಸೌಂದರ್ಯ. ಅದು ಸುಖದ ಸುಪ್ಪತ್ತಿನ ಅಂಗ. ಸಂಸಾರವನ್ನು ಸಾರವತ್ತಾಗಿ ಸವೆಯಿಸುವ 'ಸಾಣೆ' ಎಂದಾಗಿ ಪರಿವರ್ತಿಸಿಕೊಳ್ಳುವುದರಲ್ಲಿ ಸಂದೇಹವಿಲ್ಲ.

ಈ ಪರಿಕಲ್ಪನೆ ನಮ್ಮ ಹಿಂದಿನ ತಲೆಮಾರಿನ ಜಾನಪದದಲ್ಲಿತ್ತು. ಅವರ ಬದುಕಿನ ಆಂತರ್ಯದ ಅಂತಃಸ್ಫೂರ್ತಿಯಾಗಿ ಶ್ರದ್ಧೆಯ ರೂಪದಲ್ಲಿ ಸೃಜಿಸಿ, ಆ ಬದುಕನ್ನು ಸನ್ಮಾರ್ಗದತ್ತ ಚಲಿಸಿ, ಸಾರ್ವತ್ರಿಕ ಸತ್ಯದ ಸೆಲೆಯಾಗಿಸಿತು. ಅದೇ ನೈಜ ಜೀವನವೇ ಕಾವ್ಯವೆಂದು ವ್ಯಾಖ್ಯಾನಗೊಂಡಿತು. ಇಲ್ಲಿ ಆ ಜೀವನ, ಈ ಜೀವನ ಎಂಬ ಭೇದದ ಕಲ್ಪನೆ ಕಂಡುಬರಲಿಲ್ಲ. ಆ ಶ್ರಮ ಈ ಶ್ರಮವೆನ್ನದೆ ಮನಸ್ಸಿಗೆ ತಾಗಿದ್ದನ್ನು ರಸಮಯವಾಗಿಸಿ ಉಸಿರಾಡುವ ವ್ಯವಸ್ಥೆಗೆ ತಲುಪಿದರು. ಅಂದರೆ ತಾವು ಯಾವ ಕಾರ್ಯಕಲಾಪದಲ್ಲಿಯೇ ತೊಡಗಿರಲಿ, ಅದನ್ನು ಬದುಕಿನ ಉಸಿರಾಗಿ (ನಾದವಾಗಿಸಿ), ಅದರ ಮೂಲಕ ತಮ್ಮ ಜೀವನದ ಬಹುಭಾಗವನ್ನು ಶ್ರಮದಲ್ಲಿಯೇ ಕಳೆದು ಕಾಲೈಕ್ಯ-ಕ್ರಿಯೈಕ್ಯವೆಂದು ಗುರುತಿಸಿ, ನಾಯಕ-ನಾಯಕಿಯರ ಮಹತ್ವವನ್ನು ಪಡೆಯದೆ ತಾವೇ ಆ ನೆಲೆಗೆ ಅಧಿನಾಯಕರಾಗಿ ಜೀವನ ತೇದರು. ಅಂತೆಯೇ ಸಮುದಾಯ ಕಟ್ಟಿಕೊಂಡು, ಸಂಘಜೀವಿಯಾಗಿ ಪ್ರತಿಯೊಂದು ನೋವು - ನಲಿವನ್ನು ಸಂಘಮಯವಾಗಿ (ಸಮಾಜಮುಖೇನ) ಅನುಭವಿಸಿ ಉಸಿರನ್ನು ಅಮರವಾಗಿಸಿದ್ದಾರೆ.

ಈ ಜನಪದರು ತಮ್ಮ ಜೀವನ ಒಂಟಿಯಲ್ಲ, ಅದು ಒಂದು ಸಮೂಹದಲ್ಲಿದೆ ಎಂದು ಬಂಧನಕ್ಕಂಟಿ, ತಂದೆ-ತಾಯಿ, ಮಕ್ಕಳು, ಮೊಮ್ಮಕ್ಕಳು, ಚಿಕ್ಕಪ್ಪ, ದೊಡ್ಡಪ್ಪ, ಅಜ್ಜ-ಅಜ್ಜಿ, ಅಣ್ಣ-ತಮ್ಮ, ಅಕ್ಕ-ತಂಗಿ – ಹೀಗೆ ಹಲವು ಬಗೆಯ ಪರಿಕಲ್ಪನೆಯನ್ನು ಮೂಡಿಸಿಕೊಂಡು ಅವರ ಅಗಲಿಕೆಯ ಕಾತರದಲ್ಲಿ, ಅವರ ಬರುವಿಕೆಯೇ ಒಂದು ಸಂಭ್ರಮವಾಗಿ, ಮಾರ್ಪಡಿಸಿಕೊಂಡರು. ಅದು ಬಂಧನಕ್ಕೆ ಮುಷ್ಟಿಯ ಶಕ್ತಿಯಾಗಿ ನಿಂತಿತು. ಆ ಶಕ್ತಿಯ ಉಸಿರು ಕಾಂತಸಮ್ಮಿತವಾಯಿತು. ಅದೇ ಪ್ರತಿಯೊಬ್ಬರ ಆಕರ್ಷಣೆಯಾಗಿ ಮುಂದೆ ಸೌಂದರ್ಯ ಶಕ್ತಿಯನ್ನು ಪಡೆದುಕೊಂಡು ಸಹಜ ಸಂದರ್ಭದ ಮಾತು ಕಾವ್ಯಮಯವಾಗಿ ಬದುಕಿತು. ಅದು ನಾದಮಯವೆನಿಸಿತು. ಅಂದರೆ ಜನಪದರ ಸಹಜ ಮಾತೆ ಕಾವ್ಯ 'ಜನಪದ ಕಾವ್ಯ'. ಅದೇ ಬೆಳೆದು ಕವಲೊಡೆದು

ವಿವಿಧ ಮಾರ್ಗಗಳಲ್ಲಿ ಪ್ರವಹಿಸಲು ಮುಂದಾಯಿತು. ಇದೇ ಕಾವ್ಯದ ಮೂಲರೂಪವೆನ್ನಬಹುದು. ಅದರ ನಂತರ ಶಿಷ್ಟ ಸಾಹಿತ್ಯ ರೂಪಗಳಾಗಿ ಹಲವಾರು ಬಗೆಯಲ್ಲಿ ಪ್ರವಹಿಸಿತು.

ಇಲ್ಲಿ ಮೊದಲು ಮೌಲ್ಯಯುತ ಸಹಜ ಮಾತೆ ಕಾವ್ಯವಾದ ಬಗೆಯನ್ನು ಗಮನಿಸುವುದಾದರೆ, ಒಬ್ಬಳು ಸಾಮಾನ್ಯ ಜಾನಪದ ಮಹಿಳೆ ಅಣ್ಣನ ಮುಖ ನೋಡಲು ಕಾತುರಗೊಂಡು ಬರಲು ಹೇಳಿಕಳಿಸುವ ಸಹಜ ಭಾವನೆ – ಪುಟ್ಟ ತ್ರಿಪದಿಯ ಮೂಲಕ - ತಂಗಿ

*ಸೊಲ್ಲಾಪುರದಣ್ಣಗ ನಿಲ್ಲದಲೆ ಬರಹೇಳ*
*ಸೀರ್‍ಯೊಲ್ಲ ಅವನ ಕುಬಸೊಲ್ಲ । ಅಣ್ಣನ।*
*ಮಾರಿ ನೋಡಂತ ಮನವಾಗಿ ॥*

ತಂಗಿಯ ನುಡಿಗಳಂತೆ ಅಣ್ಣನ ನುಡಿಯೂ ಅಷ್ಟೇ ಸಹಜ. ಹಾಗೆ ತಂಗಿ ಮನೆಗೆ ಬಂದಾಗ –

*ತಂಗೀ ತಂಗೀ ಬಾರ ತಾಂಬೂಲ ತುಟಿ ಬಾರ*
*ಸೆಟ್ಟಿ ಸಾವುಕಾರ ಸೊಸಿ ಬಾರ ॥ನನ ತಂಗಿ॥*
*ಬಂಗಾರ ಬಾರ ಬಯಲೀಗಿ ॥*

ಮತ್ತು ಅಣ್ಣನಿಗೆ ಯಾವ ಹಬ್ಬಕ್ಕೆ ಕರೆಯಲಿಕ್ಕೆ ಬರಬೇಕು ಎನ್ನುವುದನ್ನು –

*ಕಾರ್ಹುಣವಿ ಹಬ್ಬಕ ಕರಿಲಾಕ ಬರಬ್ಯಾಡ*
*ಕಾಲ ಬಾಡೀಗಿ ಕೊಡಬ್ಯಾಡ ॥ನನ್ನಣ್ಣ॥*
*ಹೊನ್ನ ದೀವಳಿಗೆ ಮರೀಬ್ಯಾಡ ॥*

ಈ ಮೂರು ತ್ರಿಪದಿಗಳ ಮೂಲಕ ಸತ್ಯ-ಸೌಂದರ್ಯ ಸುಖವನ್ನು ಅರಿಯಲು ಸಾಧ್ಯವಿದೆ. ಜನಪದರ ಸಹಜ ಮಾತು ತ್ರಿಪದಿಯ ಸ್ವರೂಪ ಪಡೆದು, ಕಾವ್ಯಮಯಗೊಂಡಿರುವುದು ಸಹಜವೇ. ಬದುಕಲ್ಲದೆ ನಿಸರ್ಗದಲ್ಲಿ ಸಹಜವಾಗಿ ಕಂಡ ಚಲುವು.

*ಅಣ್ಣಾs ಹೊಲದಾಗ ಬೆಳ್ಳsನ ಬಿಳಿಜೋಳ ।*
*ಮೆಲ್ಲsಕ ಮೆಲಿಯೋ ಗಿಣಿರಾಮ ॥ನನ್ನಣ್ಣ॥*
*ಕಲ್ಲ ಬಂದಾವು ಕಡಿಗಾಗೋ ॥*

ಅಣ್ಣನ ಹೊಲ ಮೆಲುವ ಗಿಣಿರಾಮನಿಗೆ ಹೇಳುವ ಸಹಜಭಾವ, ಹಾಗೆ ಸಮಾಜದ ಪರಿಸರ ಗೆಳೆತನಕ್ಕಾಗಿ –

*ಮನಿಯ ಮುಂದಿನ ಗೆಳದಿ ದನಿಯ ಕೂಡಿಸಬಾರ*
*ದನಿ ಸುದ್ದ ನಿನ್ನ ಗುಣ ಸುದ್ದ ॥ಗೆಳೆದೆವ್ವ॥*
*ಗುಣಕ ಕಟ್ಟೇನಿ ಗೆಳುತಾನ ॥*

ಇಲ್ಲಿ ಅವಳ ಗುಣಗಾನವಾಗಿರುವುದು, ಹಾಗೆ ಅವಳ ರೂಪ

*ಎಳ್ಳು ಹೂವಿನ ಸೀರಿ ಬೆಳ್ಳಿ ಕಾಲುಂಗುರ*
*ಹಳ್ಳದ ನೀರು ತರತಾಳ ॥ನನ ಗೆಳದಿ॥*
*ಹಳ್ಳಿ ಗೌಡರ ಹಿರಿಮಗಳ ॥*

ಹೀಗೆ ಬದುಕಿನ ಅಂಗವಾಗಿ ಬಂದ ಕಾವ್ಯ ಸಹಜ.

ಇದನ್ನೇ ನಮ್ಮ ಶಿಷ್ಟ ಸಾಹಿತಿಗಳು 'ರಸಾನುಭವ' ಎಂದಿರುವರು. ಲೋಕಕವ್ಯವಹಾರದ ನೆಲೆಯಲ್ಲಿ ನಾವು ಪಡೆಯಲಾರದ ಮತ್ತು ಪಡೆಯಲಾಗದ, ಕಾವ್ಯ ಕಲೆಗಳಿಂದ ಮಾತ್ರವೇ ನಾವು ಪಡೆಯಬಹುದಾದ ಈ ವಿಶೇಷವನ್ನು ರಸಾನುಭವ ಅಥವಾ ಕಲಾನುಭವ ಎಂದಿರುವರು. ಈ ಅರಿವು ಮಾನವರಿಗೆ (ಶೂನ್ಯ) ನಿಷ್ಕ್ರಿಯದಿಂದ ಬರುವುದಲ್ಲ. ಅದಕ್ಕೆ ಒಂದು ಸೃಜಿಸುವ ಕಲಾ ಮಾಧ್ಯಮ ಬೇಕು. ಈ ಬಗೆಯ ಹದಗಾರಿಕೆಯ ನಿರ್ಮಿತಿಗೆ ಕವಿ ಲೋಕದ ಯಾವುದಾದರೂ ಒಂದು ವಸ್ತುವನ್ನು ಆಯ್ದುಕೊಳ್ಳುತ್ತಾನೆ. ಈ ವಸ್ತು ಆತ ಕಂಡ ಲೋಕದಲ್ಲಿನ ಯಾವುದೇ ಒಂದು ಸಂಗತಿಯಾಗಿರಬಹುದು ಅಥವಾ ಸಿದ್ಧ ಪ್ರಸಿದ್ಧವಾಗಿ ಬಳುವಳಿಯಾಗಿ ಬಂದದ್ದಿರಬಹುದು. ಇಲ್ಲವೆ ಆ ವ್ಯಕ್ತಿ ತಾನೆ ಕಲ್ಪಿಸಿಕೊಂಡಿದ್ದಾಗಿರಬಹುದು; ಅಂದರೆ ವಸ್ತು ಏನಾದರೂ ಆಗಿರಬಹುದು. ಇದನ್ನೇ ನಮ್ಮ ಆಲಂಕಾರಿಕರು ಕವಿಯ ಆಯ್ಕೆ, ವಸ್ತುವನ್ನು ಕುರಿತು ಕಾವ್ಯಕ್ಕೆ ಏನು ಬೇಕಾದರೂ ವಸ್ತುವಾಗಬಹುದು ಎಂದಿರುವರು. ''ವಸ್ತು ಯಾವುದೇ ಆಗಿರಲಿ, ಕಡೆಗೆ ವಸ್ತುವಲ್ಲದ್ದೇ ಆಗಿರಲಿ; ಕವಿ ಭಾವುಕರ ಭಾವನೆಗೆ ವಿಷಯವಾದ ಮೇಲೆ ರಸಮಯವಾಗದ್ದು ಲೋಕದಲ್ಲಿ ಏನೊಂದೂ ಇಲ್ಲ'' (ಪ್ರೊ॥ ತೀನಂಶ್ರೀ ಅವರ ಪುಸ್ತಕ). ಅಂದರೆ ಕವಿ ಆರಿಸಿಕೊಳ್ಳುವ ವಸ್ತು ಮುಖ್ಯವಲ್ಲ. ಆ ವಸ್ತುವಿನಿಂದ ಕವಿ ಏನನ್ನು ತಯಾರ ಮಾಡುವನೋ ಅದು ಮುಖ್ಯ. ಅಂದರೆ ಏನನ್ನು ಪಡೆದು, ಏನನ್ನು ಕೊಡುವನೋ ಅದು ಮುಖ್ಯ. ಕಾರಣ ಪಡೆದುದನ್ನು ರಸಮಯಗೊಳಿಸುವ ಅಥವಾ ಆಹ್ಲಾದಕರಗೊಳಿಸುವುದು, ಕವಿಯ (ಮಾನವನ) ಪ್ರತಿಭೆಗೆ ಅವಲಂಬಿಸಿದ್ದು. ಅಂದರೆ ವಾಸ್ತವ ಬದುಕೇ ಕಾವ್ಯವೆಂದಂತೆ. ಅದು ಮಾನವಲೋಕ, ನಿಸರ್ಗ, ಈ ಬಗೆಯ ಯಾವ ರೂಪವೇ ಆಗಿರಲಿ. ಆದರೆ ತನ್ನ ಮೂಸೆಯಲ್ಲಿ ತನ್ನ ರುಚಿಗನುಸಾರವಾಗಿ ಗ್ರಹಿಸಿ 'ಲೋಕೋತ್ತರವಾಗಿಸುವ' ಕಲೆ ಪ್ರಮುಖವಾದುದು. ಒಟ್ಟು ಗೋಚರಿಸುವ ವಸ್ತು ನಿಮಿತ್ತ ಮಾತ್ರ. ಇಲ್ಲಿ ಕಾವ್ಯ ಕಲೆಯು ಅತ್ಯಂತ ಆಕರ್ಷಕವೂ ಪರಿಣಾಮಕಾರಿಯೂ ಆದುದು. 'ನವನವತ್ವ'ವಾಗಿರುವಂತಹದ್ದು. ಇದು ಅಪೂರ್ವ ವಸ್ತುಗಳನ್ನು ನಿರ್ಮಾಣ ಮಾಡುವ ಶಕ್ತಿಯನ್ನು ಪಡೆದುಕೊಂಡಿರುವುದು. ಅಪೂರ್ವವೆಂದರೆ ಹಿಂದೆಂದೂ ಕಾಣದ ಒಂದು ಬಗೆ. ಅದನ್ನೆ ನಮ್ಮ ಆಲಂಕಾರಿಕರು 'ಪ್ರತಿಭೆ' ಎಂದು ಕರೆದಿರುವರು. ಪ್ರತಿಭಾ ಸಾಮರ್ಥ್ಯದಿಂದ ಪ್ರಜ್ಞೆಯತ್ತ ವಾಲುವುದು. ಲೋಕಾನುಭವಗಳು ತನಗೆ ಹೇಗೆ ರುಚಿಸುವವೋ ಹಾಗೆ. ಆದ್ದರಿಂದ ಈ ಪ್ರತಿಭೆಯ ವ್ಯಾಪಾರವು ಒಂದು 'ಸೃಷ್ಟಿ'ಯ ಮೂಲಕ ದರ್ಶನವಾಗುವುದು.

ಚಿರಪರಿಚಿತ ಬದುಕಿನಲ್ಲಿ ಹೊಸ ಹೊಸ ಅರ್ಥಗಳನ್ನು ಕಾಣುವುದು, ಕಂಡದ್ದನ್ನು ಹೊಸ ಹೊಸ ರೀತಿಯಲ್ಲಿ ಕಟ್ಟುವುದು. ಅದು ಆಗ ಅಂತರಂಗ, ಬಹಿರಂಗದ ಅಭಿವ್ಯಕ್ತಿಯಾಗಿ ಕವಿ ಮನಸ್ಸಿನ ವ್ಯಾಪಾರವಾಗುವುದು. ಈ ವ್ಯಾಪಾರ ಸಿದ್ಧಿಸುವುದು ಸೃಜನಾತ್ಮಕ ಮನಸ್ಸಿಗೆ ಮಾತ್ರ ಸಾಧ್ಯ. ಆ ಸೃಜನಾತ್ಮಕ ಮನಸ್ಸನ್ನು ವ್ಯವಸ್ಥಿತಗೊಳಿಸುವ ಕ್ರಿಯೆ ಬಹುಮುಖ್ಯ. ಅದು ಕವಿಯ ಸುಪ್ತಪ್ರಜ್ಞೆಯೊಂದಿಗೆ ಕಾವ್ಯವಾಗಿ ಹೊರಹೊಮ್ಮುವದು, ಅದೇ ಅನುಭವ.

ಅನುಭವಗಳನ್ನು ವ್ಯವಸ್ಥೆಗೊಳಿಸುವ ಪ್ರತಿಭಾ ವ್ಯಾಪಾರಕ್ಕೆ ಅಗತ್ಯವಾದ ಸಾಧನವೆಂದರೆ ಸ್ಮರಣೆ. ಯಾರಲ್ಲಿ ಈ ಸ್ಮೃತಿ ಅಥವಾ ಸ್ಮರಣ ಶಕ್ತಿ ವಿಶೇಷವಾಗಿದೆಯೋ ಅಂಥವನು, ಮನಸ್ಸಿನಲ್ಲಿರುವ ಸ್ಮರಣಾನುಭವಗಳನ್ನು ಸಮರ್ಪಕವಾಗಿ ವ್ಯವಸ್ಥೆಗೊಳಿಸಬಲ್ಲನು. ಪ್ರತಿಭೆಯಲ್ಲಿ ಈ ಸ್ಮರಣೆಯ ಕಾರ್ಯ ಮಹತ್ವದ್ದೆಂಬುದನ್ನು ಪ್ರಾಚೀನ ಗ್ರೀಕ್ ಲೇಖಕರು ಗುರುತಿಸಿ – 'ಕಾವ್ಯ ಎನ್ನುವುದು ನೆನಪಿನ ಮಗಳು' ಎಂದು ಕರೆದಿದ್ದಾರೆ. ಪ್ರತಿಭೆ ಪುಷ್ಟಿಗೊಳ್ಳುವುದು ಕವಿಯ ಸ್ಮೃತಿಯಲ್ಲಿ ತುಂಬಿದ ಪ್ರತಿಮೆಗಳಿಂದಲೇ. ಅಷ್ಟೇ ಅಲ್ಲ,




ಬಿಜಾಪುರದಲ್ಲಿ ೭-೧೧-೨೦೦೭ರಂದು, ಕರ್ನಾಟಕ ರಾಜ್ಯೋತ್ಸವ ಸಮಿತಿ ಮತ್ತು 'ಹೊಸತು' ಓದುಗರ ಬಳಗದ ಆಶ್ರಯದಲ್ಲಿ 'ಭಾರತೀಯ ಸಾರ್ವಭೌಮತ್ವಕ್ಕೆ ಜಾಗತಿಕ ಸವಾಲುಗಳು - ಪರಮಾಣು ಒಪ್ಪಂದದ ವಿಶ್ಲೇಷಣೆ' ಕುರಿತ 'ವಿಚಾರಗೋಷ್ಠಿ' ನಡೆಯಿತು. ಹೆಚ್ಚು ಸಂಖ್ಯೆಯ ಓದುಗರು ಭಾಗವಹಿಸಿದ್ದರು. (ಚಿತ್ರದಲ್ಲಿ ಎಡದಿಂದ ಬಲಕ್ಕೆ) ಡಾ॥ ಜಿ. ರಾಮಕೃಷ್ಣ, ಡಾ॥ ಸಂಪತ್ ಕುಮಾರ್ (ಅತಿಥಿ ಭಾಷಣಕಾರರು), ಡಾ॥ ಪಿ. ಬಿ. ಮಾಗನೂರ, ಡಾ॥ ಸಿದ್ದನಗೌಡ ಪಾಟೀಲ ಮತ್ತು ಶ್ರೀ ಸೂಗೂರು. ಡಾ॥ ರಾಜೇಂದ್ರ ಪೋದ್ದಾರ್ ಪ್ರಾಸ್ತಾವಿಕ ಮಾತುಗಳನ್ನಾಡಿದರು.

ಈ ಸ್ಮರಣೆ ಕವಿ ತಾನೊಬ್ಬ ತನ್ನ ಅನುಭವದಿಂದ ಪಡೆದದ್ದು ಮಾತ್ರವಲ್ಲ, ಅವನಲ್ಲಿ ತನ್ನ ಜನಾಂಗದ ಪರಂಪರಾಗತವಾದ ಸ್ಮೃತಿಗಳೂ ಸುಪ್ತವಾಗಿರುತ್ತವೆ. ಬಹುಶಃ ಸ್ಮರಣೆಯೇ ಕಾವ್ಯ ನಿರ್ಮಾಣ ಸಾಮರ್ಥ್ಯ' ಎಂಬ ಮಾತು ನಿಜವಿರಬೇಕು. ಏಕೆಂದರೆ ಪ್ರತಿಭೆ ಎನ್ನುವುದು ಸ್ಮರಣಾನುಭವಗಳನ್ನು ಸಂಘಟಿಸುವ ಕ್ರಿಯೆ. ನಮ್ಮ ನೆನಪಿನಲ್ಲಿ ಇಲ್ಲದ ಅಥವಾ ನಮಗೆ ಗೊತ್ತಿಲ್ಲದ ಯಾವುದನ್ನೂ ನಾವು ಕಲ್ಪಿಸಿಕೊಳ್ಳಲಾರೆವು. ನಾವು ಏನನ್ನಾದರೂ ಕಲ್ಪಿಸಿಕೊಳ್ಳುತ್ತಿದ್ದೇವೆ ಎಂದರೆ ನಾವು ಎಂದೋ ಪಡೆದ ಅನುಭವಗಳನ್ನು ಜ್ಞಾಪಿಸಿಕೊಂಡು ಅವುಗಳನ್ನು ಬೇರೊಂದು ಸಂದರ್ಭಕ್ಕೆ ಜೋಡಿಸಿಕೊಂಡು ನೋಡಬಲ್ಲ ಸಾಮರ್ಥ್ಯ ನಮಗಿದೆ ಎಂದರ್ಥ (ಕಾವ್ಯಾರ್ಥ ಚಿಂತನೆ, ಪುಟ ೨೨). ಇಂಥ ಅನುಭವ ಶರಣರಿಗಿತ್ತು, ಅವರು ಅಂದಿನ ಪರಿಸರಕ್ಕನ್ವಯಿಸಿ ಬದುಕುತ್ತಿದ್ದರಿಂದ ಅವರ ಮನಸ್ಸುಗಳು ಏನನ್ನು ಹುಡುಕಿದವೋ ಅದು ಅವರನ್ನು ಆವರಿಸಿತ್ತು. ಅಂತೆಯೇ ಕಾಯಕವನ್ನು ಹುಡುಕಿದರು, ಬದುಕು ಅದೇ ಆಯಿತು. ಸ್ಮೃತಿಯು ಅದೇ ಆಯಿತು, ಅನುಭವೂ ಅದೇ ಆಯಿತು. ಅದೇ ಮಾಧ್ಯಮವಾಯಿತು. ಅದಕ್ಕೆ ಅವರ ಅನುಭವ ಓದಿದರೆ ಗದ್ಯವಾಗುವುದು, ಹಾಡಿದರೆ ಹಾಡಾಗುವುದು. ಅದು ಒಂದು ವಿಶಿಷ್ಟ ಪ್ರಕಾರವಾಗಿ ಹೊರಹೊಮ್ಮಿತು. ೧೧೫ಕ್ಕೂ ಹೆಚ್ಚು ಶರಣರಿಗೆ ೪೫ಕ್ಕೂ ಹೆಚ್ಚು ವೈವಿಧ್ಯಮಯ ಕಾಯಕಗಳು ಪರಿಚಿತಗೊಂಡು ಬದುಕಿನ ಅನುಭವದ ಅಭಿವ್ಯಕ್ತಿ ವಿಪುಲವಾಯಿತು. ಹಾಗೆಯೇ ಸ್ವವಿಮರ್ಶೆಗೆ, ಸಮಾಜ ವಿಮರ್ಶೆಗೆ ಶಕ್ತಿ ಮಾಧ್ಯಮವಾಗಿ ಬೆಳೆಯಿತು. ಅಂತೆಯೇ ಅವರಿಂದ ಭಾಷೆ-ಪರಿಭಾಷೆಗೊಂಡು, ಅನ್ನ-ಪ್ರಸಾದವಾಯಿತು, ಜಡವಲ್ಲದ್ದು - ಜಂಗಮವಾಯಿತು.

*ತನುವ ತೋಂಟವ ಮಾಡಿ ಮನವ ಗುದ್ದಲಿ ಮಾಡಿ*
*ಅಗೆದು ಕಳೆದೆನಯ್ಯಾ ಭ್ರಾಂತಿಯ ಬೇರ,*
*ಒಡೆದು ಸಂಸಾರದ ಹೆಂಟೆ, ಬಗಿದು ಬಿತ್ತಿದೆನಯ್ಯಾ ಬ್ರಹ್ಮ ಬೀಜವ*

– ಅಲ್ಲಮ ಪ್ರಭು

ಎನ್ನುವುದರಲ್ಲಿ ಮೌಢ್ಯ ದೂರ ಓಡಬೇಕೆಂದಾದರೆ ನಾವು ಶ್ರಮವಹಿಸಲೇ ಬೇಕೆನ್ನುವುದು ಪ್ರಮುಖ. ಹಾಗೆ –

*ಮನೆಯೊಳಗೆ ಮನೆಯೊಡೆಯನಿದ್ದಾನೊ ಇಲ್ಲವೊ*
*ಹೊಸ್ತಿಲಲಿ ಹುಲ್ಲು ಹುಟ್ಟಿ ಮನೆಯೊಳಗೆ ರಜತುಂಬಿ*
*ಮನೆಯೊಳಗೆ ಮನೆಯೊಡೆಯನಿದ್ದಾನೊ ಇಲ್ಲವೊ*

– ಬಸವಣ್ಣ

ಮನಸ್ಸು ಯಾವುದನ್ನು ಗ್ರಹಿಸಬೇಕೆನ್ನುವುದು ಹಾಗೆ ಕಾವ್ಯ ಎನ್ನುವುದು ಕವಿ ಪ್ರತಿಭೆಯಿಂದ ನಿರ್ಮಾಣವಾದ ಒಂದು ವಿಶಿಷ್ಟ ಪ್ರಪಂಚ. ಅದರ ಮೂಲದ್ರವ್ಯ ನಮ್ಮ ವಾಸ್ತವಲೋಕದ ಅನುಭವಗಳೇ ಆದರೂ, ಪ್ರತಿಭಾ ವಶವಾದ ಅನುಭವಗಳು, ಅಲ್ಲಿ ತಾಳುವ ಪರಿವರ್ತಿತ ರೂಪಗಳು ಎಷ್ಟೋ ವೇಳೆ ಈ ವಾಸ್ತವ ಲೋಕದ ನಿಯತಿಯ ಗೆರೆಯನ್ನು ದಾಟಿದವುಗಳಾಗಿರುತ್ತವೆ. 'ಆಂಜನೇಯ ಸಾಗರವನ್ನು ಹಾರಿ ದಾಟುವದು, ನಾರದರು ನೀರದ ಮಾರ್ಗದಿಂದ ಅವತರಿಸುವುದು, ಯಕ್ಷನು ಮೋಡವೊಂದರ ಮೂಲಕ ನಲ್ಲೆಗೆ ಸಂದೇಶವನ್ನು ಕಳಿಸುವುದು, ಸೀತೆ ಅಗ್ನಿಪ್ರವೇಶ ಮಾಡಿ ಹೊಸ ತೇಜಸ್ಸಿನಿಂದ ಹೊರಕ್ಕೆ ಬರುವುದು, ವೈಶಂಪಾಯನ ಸರೋವರದಲ್ಲಿ ಅಡಗಿ ಕುಳಿತ ದುರ್ಯೋಧನ, ಭೀಮನ ಮೂದಲಿಕೆಯ ಮಾತು ಕೇಳಿ, ನೀರೊಳಗಿದ್ದು ಕೋಪದಿಂದ ಬೆವರುವುದು, ಭೀಮನ ಗದಾಘಾತಕ್ಕೆ ಕೂರ್ಮನ ಬೆನ್ನು ಕುಸಿಯುತ್ತದೆ.' ಈ ಬಗೆಯ ವರ್ಣನೆಗಳನ್ನೋದಿದರೆ, ಇವೆಲ್ಲ ಸುಳ್ಳು ಎಂದೋ ಅಸಂಭಾವ್ಯವೆಂದೋ ಮೇಲುನೋಟಕ್ಕೆ ತೋರಿದರೂ, ಶತಮಾನಗಳಿಂದ ಕವಿಗಳು ಇಂಥ ಸಂಗತಿಗಳನ್ನು ಕಲ್ಪಿಸುತ್ತಲೇ ಬಂದಿದ್ದಾರೆ. ಸಹೃದಯರು ಇವುಗಳನ್ನು ಒಪ್ಪಿಕೊಂಡು ಆಸ್ವಾದಿಸಿ ಆನಂದಿಸುತ್ತಾ ಬಂದಿದ್ದಾರೆ. ಆದ್ದರಿಂದ ಇವುಗಳನ್ನು ತಳ್ಳಿಹಾಕಲು ಸಾಧ್ಯವಿಲ್ಲ. ಅದಕ್ಕೇ ಮಮ್ಮಟನು 'ಕಾವ್ಯನಿರ್ಮಿತಿ'ಯನ್ನು 'ನಿಯತಿಕೃತಿ ನಿಯಮ ರಹಿತವಾದದ್ದು' ಎಂದಿರುವನು. ಹೀಗಾಗಿ ನಮ್ಮ ಕಾವ್ಯಕ್ಷೇತ್ರಕ್ಕೆ ಬರುವ ಯುವಕವಿ ಕಾವ್ಯದ ಸೆಲೆಯ ಸ್ತರಗಳನ್ನು ಅಧ್ಯಯಿಸುವುದು ಒಳಿತು.

**ಡಾ|| ಸಣ್ಣ ವೀರಣ್ಣ ಹಾಲಪ್ಪ ದೊಡ್ಡಮನಿ**
ಉಪನ್ಯಾಸಕರು, ಎಂ.ಇ.ಎಸ್. ಕಲಾ - ವಾಣಿಜ್ಯ ಮಹಾವಿದ್ಯಾಲಯ, ಮೂಡಲಗಿ - ೫೯೧೩೧೨
ಗೋಕಾಕ ತಾಲ್ಲೂಕು, ಬೆಳಗಾವಿ ಜಿಲ್ಲೆ

# ಬತ್ತಲಾಗಿ ಬಾ ನೀನು ನನ್ನಲ್ಲಿಗೆ



ನನ್ನ ಬಿಳಿ ಕೆನ್ನೆ, ಅಗಲದ ಕಣ್ಣು
ಮೊಲೆ, ತೊಡೆ, ಯೋನಿಗಳಲ್ಲಷ್ಟೇ
ನನ್ನನ್ನು ನೀನು ಕಾಣದೆ ಹೋಗಿದ್ದರೆ...

ನನ್ನ ಅಂತರಾತ್ಮದಲ್ಲಿ
ಚಿಕ್ಕಂದಿನಲ್ಲೇ ಮೂಡಿದ್ದ
ಪುಟ್ಟ ಗುಡಿಯ ಬಾಗಿಲನ್ನು
ನೀ ತೆರೆಯಬಲ್ಲವನಾಗಿದ್ದೆಯಾದರೆ...
ಮುಸ್ಸಂಜೆ ಹೊತ್ತುಗಳಲ್ಲಿ
ನನ್ನ ಕಿವಿಗೆ ಕೇಳುತ್ತಿದ್ದ
ಮೋಹನ ಮುರಳಿಯನ್ನು
ನಿನಗೆ ನಾ ಕೇಳಿಸಿದಾಗ
ನೀ ಕಿವಿದೆರೆದು ಕೇಳಿದ್ದೇ ಆದರೆ...
ನನ್ನ ಪ್ರೀತಿಯ ಬಟ್ಟಲನ್ನು
ನೀ ಹನಿಹನಿ ಕುಡಿಯಬಲ್ಲವನಾಗಿದ್ದರೆ...
ಆದರೆ... ಆದರೆ... ಆದರೆ...
ಆದರೆ ನೀ ಏನೂ ಆಗಲಿಲ್ಲ
ನನ್ನ ರಕ್ತ ಮಾಂಸಗಳಲ್ಲೇ
ನಿನ್ನ ಜೀವನದ ಅರ್ಥವ
ಹುಡುಕ ಹೊರಟೆ ನೀನು
ಅದಕೊಂದು ಮಿತಿಯುಂಟೇ ?

ನೀ ವಿಹ್ವಲನಾದೆ
ರೂಕ್ಷ ಗಂಡಾದೆ
ಜಗತ್ತು ಗಂಡಿಗೆ ಕೊಟ್ಟ
ಬಡಿಗೆ ಬಾರುಕೋಲನ್ನೆಲ್ಲ
ನನ್ನ ಮೇಲೆ ಪ್ರಯೋಗಿಸಿ
ನನ್ನ ಸೆರೆಯಲ್ಲಿಟ್ಟು
ವಿಜಯಿಯಾಗುವೆನೆಂದೆ...

ಬಿಟ್ಟು ಬಿಡು ನಿನ್ನೆಲ್ಲ ಕೋಪತಾಪ
ತೊರೆದು ಬಿಡು ನಿನ್ನೆಲ್ಲ ಹಿಂಸ್ರರೂಪ
ಬತ್ತಲಾಗಿ ಬಾ ನೀನು ನನ್ನಲ್ಲಿಗೆ
ನಾ ಅಪ್ಪಿ ಸಂತೈಸುತ್ತೇನೆ.

ಎಸ್. ಮಾಲತಿ
ಸಾಗರ - ೫೭೭೪೦೧, ಶಿವಮೊಗ್ಗ ಜಿಲ್ಲೆ



# ಸಂತೆಗಳು ಏನಾಗುತ್ತಿವೆ ?

'**ಸಂತೆ**' ಎಂದೊಡನೆ ನನ್ನ ಕಣ್ಣಿಗೆ ಕಟ್ಟುವುದು ಸಾಗರದ ಸಂತೆ. ವಾರಕ್ಕೊಂದು ದಿನ ಭೀಮನಕೋಣೆಯಿಂದ ಐದು ಮೈಲಿ ದೂರದ ಸಾಗರಕ್ಕೆ ಎತ್ತಿನ ಗಾಡಿಯಲ್ಲಿ ಸಾಮಾನು ತುಂಬಿಕೊಂಡು ಹೋಗುವವರನ್ನು ಹಿಂಬಾಲಿಸಿ ಹೋಗುತ್ತಿದ್ದ ಅಪ್ಪನ ಬೆನ್ನಿಗೆ 'ನನ್ನನ್ನೂ ಕರೆದುಕೊಂಡು ಹೋಗು' ಎಂದು ಹಟ ಮಾಡಿ ಅವರಿಂದ ಕೆಲವು ಸಾರಿ ಒಪ್ಪಿಗೆ ಪಡೆದು ಕುಣಿದಾಡುತ್ತಾ ಹೋಗುತ್ತಿದ್ದ ನನ್ನ ಬಾಲ್ಯದ ನೆನಪಾಗುತ್ತದೆ. ಮಿಡಲ್ ಸ್ಕೂಲ್ ಮೇಷ್ಟ್ರಾಗಿದ್ದ ನನ್ನ ಅಪ್ಪ ಸಂತೆಗೆ ಹೋಗುತ್ತಿದ್ದುದು ತಿಂಗಳಿಗೊಮ್ಮೆ, ಸಂಬಳ ಸಿಕ್ಕ ನಂತರ. ಅಕ್ಕಪಕ್ಕದಲ್ಲಿ ಅಂಗಡಿ ಇಲ್ಲದ್ದರಿಂದ ಮನೆಗೆ ಬೇಕಾದ ಸಾಮಾನನ್ನು ನಾವು ಸಂತೆಯಿಂದಲೇ ತಂದು ಇಟ್ಟುಕೊಳ್ಳಬೇಕಾಗುತ್ತಿತ್ತು. ಅಕ್ಕಿ, ಬೇಳೆ ಮುಂತಾದ ಆಹಾರ ಧಾನ್ಯಗಳನ್ನು ಗೋಣಿಚೀಲಗಳಲ್ಲಿ, ಎಣ್ಣೆಯನ್ನು, ಬೆಲ್ಲವನ್ನು ಡಬ್ಬಗಳಲ್ಲಿ ವರ್ಷಕ್ಕೊಮ್ಮೆ ತಂದು ಸ್ಟಾಕು ಮಾಡುತ್ತಿದ್ದುದುಂಟು. ತೆಂಗಿನಕಾಯಿ, ಕೊಬ್ಬರಿ, ಸಾಸಿವೆ, ಇಂಗು, ತರಕಾರಿ – ಇಂಥ ಪದಾರ್ಥಗಳನ್ನೂ ತರಲು ನಾವು ಸಂತೆಯನ್ನೇ ನೆಚ್ಚಿಕೊಳ್ಳುತ್ತಿದ್ದೆವು. ನನ್ನ ಪಾಲಿಗೆ ಸಂತೆ ಎಂದರೆ ಮಂಡಕ್ಕಿ, ಪುರಿ, ಬೆಂಡು, ಬತ್ತಾಸು, ಪೀಪಿ, ಬೆಲೂನು, ಗೋಬಿ, ಆಗೊಮ್ಮೆ ಈಗೊಮ್ಮೆ ನೋಟುಬುಕ್ಕು, ಪೆನ್ಸಿಲ್ಲು, ಲೇಖಣಿ, ಇಂಕು ಬಾಟ್ಲು, ನಿಬ್ಬು.

ಸಂತೆ ಎಂದರೆ ಸರಕುಗಳ ರಾಶಿ, ಮಾರುವವರ ಕೂಗು, ಜನ, ಗುಂಪು, ನೂಕುನುಗ್ಗಲು, ಗದ್ದಲ, ಚಿಕ್ಕಪುಟ್ಟ ಕಾರಣಗಳಿಗೆ ಜಗಳ, ಬೈಗಳು – ಇವುಗಳ ಮಧ್ಯೆ ಕೆಲವು ನಾಯಿಗಳು ಗೂಳಿಗಳ ನುಸುಳಾಟ, ಅವುಗಳನ್ನು ಓಡಿಸುವ ಭರದಲ್ಲಿ ಜನರ ಮೇಲೆ ಅವು ಎಗರುವ ಭೀತಿ, ಯಾವನೋ ಕಳ್ಳ ಸಿಕ್ಕುಬಿದ್ದು ಜನರಿಂದ ಗುದ್ದು ತಿನ್ನುತ್ತಿರುವುದು, ಸುಂಟರಗಾಳಿಯಿಂದ ಧೂಳಿನ ಚೆಲ್ಲಾಟ, ಬಿಸಿಬಿಸಿ ಕರಿದ ಬೋಂಡಾ ವಾಸನೆ – ಇದನ್ನೆಲ್ಲಾ ಅಪ್ಪನ ಹೆಗಲೇರಿ-ನಾನೇ ರಾಜ ಎನ್ನುವಂತೆ ನೋಡಿ ಆನಂದ ಪಡುತ್ತಿದ್ದೆ. ದೊಡ್ಡವರಿಗೆ ವ್ಯವಹಾರ, ನನ್ನಂಥ ಹುಡುಗರಿಗೆ ಮನರಂಜನೆ!

ನಾನು ದೊಡ್ಡವನಾಗಿ ಹೆಚ್ಚಿನ ವಿದ್ಯಾಭ್ಯಾಸಕ್ಕೆಂದು ಬೆಂಗಳೂರಿಗೆ ಬಂದನಂತರ ಆ ಬಗೆಯ ಸಂತೆಯ ಸಂತಸ ಮತ್ತು ಸಂಭ್ರಮ ಕಾಣದಾಗಿದೆ. ಇಲ್ಲಿ ಕಂಡುಬರುವುದು ಅಂಗಡಿಗಳ ಸಾಲು, ಷಾಪಿಂಗ್ ಕಾಂಪ್ಲೆಕ್ಸ್‌ಗಳು, ತರಕಾರಿ ಮತ್ತು ಹಣ್ಣಿನ ಮಾರ್ಕೆಟ್ಟುಗಳು, ಚೈನಾ ಬಜಾರುಗಳು – ಒಂದೇ ಕಡೆ ಕಚ್ಚಿಕೊಂಡು ನಿಂತ ಸ್ಥಾವರಗಳು. ಗ್ರಾಮೀಣ ಸಂತೆ ಜಂಗಮ ಜಾತಿಗೆ ಸೇರಿದ್ದು. ಯಾವುದೋ ಒಂದು ಗೊತ್ತಾದ ಜಾಗದಲ್ಲಿ, ಗೊತ್ತಾದ ದಿನ ಬಯಲಲ್ಲಿ ಡೇರೆಗಳು ಕಾಣಿಸಿಕೊಳ್ಳುತ್ತವೆ. ಹಲವಾರು ದಿಕ್ಕುಗಳಿಂದ ಹಲವಾರು ಹಳ್ಳಿಗಳಿಂದ ಸರಕುಗಳು ಬರುತ್ತವೆ. ಜನರು ಸೇರುತ್ತಾರೆ. ಬೆಳಗಿಂದ ಸಾಯಂಕಾಲದವರೆಗೆ ಗಿಜಿಬಿಜಿ, ಅನಂತರ ಎಲ್ಲರೂ ಅಲ್ಲಿಂದ ಕಾಲು ಕೀಳುತ್ತಾರೆ. ಬಣಬಣ, ಮೌನ – ಆ ಸ್ಥಳದಲ್ಲಿ ಆವರಿಸುತ್ತದೆ. ಬರೀ ಟೆಂಟು, ಯಾವುದೂ ಇಲ್ಲ ಇಲ್ಲಿ ಪರಮನೆಂಟು. ಅನಂತರ ಎಲ್ಲಾ ಸೈಲೆಂಟು. ಈ ದೃಷ್ಟಿಯಲ್ಲಿ ನೋಡಿದಾಗ ಸಂತೆ ನಮ್ಮ ಬದುಕನ್ನು ಪ್ರತಿಬಿಂಬಿಸುವಂತೆ ಕಾಣುತ್ತದೆ. ಪುರಂದರದಾಸರು ಸಂತೆಯನ್ನು ನೋಡೇ ತಮ್ಮ ಭಕ್ತಿಗೀತೆಗಳನ್ನು ಹಾಡಿದರೋ ಏನೋ! ಶ್ರೀಕೃಷ್ಣನಾಮವೆಂಬ ಕಲ್ಲುಸಕ್ಕರೆ ಕೊಳ್ಳಿರೋ ಎಂದು ಹೇಳುವಾಗ ಸಂತೆಯ ಭಾಷೆಯಲ್ಲೇ ಹೇಗೆ ಹೇಳುತ್ತಾರೆ:

ಎತ್ತು ಹೇರುಗಳಿಂದ ಹೊತ್ತು ಮಾರುವುದಲ್ಲ
ಒತ್ತೊತ್ತಿ ಗೋಣಿಯೊಳ್ತುಂಬುವುದಲ್ಲ
ಎತ್ತ ಹೋದರು ಬಾಡಿಗೆ ಸುಂಕವಿದಕಿಲ್ಲ
ಉತ್ತಮ ಸರಕಿದು ಅತಿಲಾಭ ಬರುವಂಥ!

ಅಕ್ಕಮಹಾದೇವಿ ಕೂಡ ತನ್ನ ವಚನವೊಂದರಲ್ಲಿ 'ಸಂತೆಯೊಳಗೊಂದು ಮನೆ ಮಾಡಿ ಶಬ್ದಕ್ಕೆ ನಾಚಿದೊಡೆಂತಯ್ಯ?' ಎಂದು ಪ್ರಶ್ನಿಸಿದ್ದಾರೆ. 'ಶಬ್ದ' ಎನ್ನುವುದು ಇಲ್ಲಿ ಬಾಧೆಯ ಸಂಕೇತವಾಗಿ ಬಳಸಲ್ಪಟ್ಟಿದೆ. ಬದುಕಲ್ಲಿ ಬಾಧೆಗಾಗಿ ಚಿಂತಿಸಿ ಫಲವಿಲ್ಲ. ಸಮಾಧಾನದಿಂದ ನಮ್ಮ ಕೊಡುವ, ಪಡೆಯುವ ಕಾರ್ಯ ಮುಗಿಸಿ ನಾವು ಇಲ್ಲಿಂದ ಮುಕ್ತರಾಗಬೇಕು.

ಶೇಕ್ಸ್‌ಪಿಯರ್ ಬದುಕನ್ನು ಒಂದು ನಾಟಕದ ಸ್ಟೇಜಿಗೆ ಹೋಲಿಸಿದರೆ ನಮ್ಮ ದಾಸರು, ವಚನಕಾರರು ಅದನ್ನು ಸಂತೆಗೆ ಹೋಲಿಸಿದ್ದಾರೆ.

ಸಂತೆ ಎನ್ನುವುದು 'ಸಂಸ್ಥಾ' ಎಂಬುದರ ತದ್ಭವವಾಗಿದ್ದು ಅದು ಗುಂಪು, ಸಮೂಹ ಎನ್ನುವುದನ್ನು ಸೂಚಿಸುತ್ತದೆ. ಗುಂಪು ಸೇರಿ ವ್ಯಾಪಾರ ಮಾಡುವ ಜಾಗಕ್ಕೆ ಸಂತೆ ಎನ್ನುತ್ತಾರೆ, ನಿಜ. ಆದರೆ ಸಂತೆಗೂ ಬಜಾರಿಗೂ ವ್ಯತ್ಯಾಸವಿದೆ ಎಂಬುದನ್ನು ನಾವೂ ಈಗಾಗಲೇ ಗುರುತಿಸಿದ್ದೇವೆ. ದೊಡ್ಡ ಬಂಡವಾಳ ಹಾಕಿ ವೈವಿಧ್ಯಮಯ ಸರಕುಗಳು ಕಣ್ಣಿಗೆ ಕುಕ್ಕುವಂತೆ, ಕೊಳ್ಳಲು ಪೀಡಿಸುವಂತೆ ಮಾಲ್‌ಗಳಲ್ಲಿ ಇವತ್ತು ಪ್ರದರ್ಶನ ಮಾಡುತ್ತಾರೆ. ಸರಕುಗಳು ನೀಟಾಗಿ ಪ್ಯಾಕ್ ಮಾಡಲಾಗಿರುವುದರಿಂದ ನಾವೇ ರ್‍ಯಾಕಿಂದ ಆರಿಸಿ ಎತ್ತಿಕೊಳ್ಳಬಹುದು. ಅದರ ಬೆಲೆ ಅಲ್ಲೇ ನಮೂದಿಸಿರುವುದರಿಂದ ವ್ಯಾಪಾರಿಯನ್ನು ಕೇಳಬೇಕಾಗಿಲ್ಲ. ನಾವೇ ದೂಡುಗಾಡಿಯಲ್ಲಿ ಹಾಕಿಕೊಂಡು ಬಾಗಿಲ ಬಳಿ ಬಂದರೆ ಕಂಪ್ಯೂಟರ್ ಬಿಲ್ಲು ಕೊಡುತ್ತದೆ. ಮೂಕದಂತೆ, ಮೂರ್ಖರಂತೆ ನಾವು ಹಣ ತೆತ್ತು ಬರುತ್ತೇವೆ. ಇಲ್ಲಿ ಚೌಕಾಶಿ ಮಾಡುವುದು ಇಲ್ಲ, ಎಂಥದೂ ಇಲ್ಲ, ಗದ್ದಲವಿಲ್ಲದಿರುವುದು ವ್ಯಾಪಾರಕ್ಕೆ ಶೋಭೆ ತರುವಂಥದ್ದು ಎಂದು ನನಗನಿಸುವುದಿಲ್ಲ. ಮೂಕಿ ಸಿನಿಮಾಕ್ಕೂ ಟಾಕಿ ಸಿನಿಮಾಕ್ಕೂ ಇರುವ ವ್ಯತ್ಯಾಸ ನಾನಿಲ್ಲಿ ನೆನೆಸಿಕೊಳ್ಳಬಹುದು. ಚೌಕಾಶಿ ಮಾಡಿ ನನ್ನ ಬುದ್ಧಿವಂತಿಕೆಯಿಂದ ನಾನು ಕಡಿಮೆ ಬೆಲೆಗೆ ಕೊಂಡಿದ್ದೇನೆ ಎಂದು ಸಂತೋಷಪಡುವ ಅವಕಾಶವನ್ನು ನನ್ನಿಂದ ಕಿತ್ತುಕೊಳ್ಳುವ ಆಧುನಿಕ ಶಾಪಿಂಗ್ ಸಂಸ್ಕೃತಿ ಒಂದು ಬಗೆಯ ಶಾಪವೆಂದೇ ನನಗನಿಸುತ್ತದೆ.

ಕೆಲವು ದಿನಗಳ ಹಿಂದೆ ನಾನು ಮೆಜೆಸ್ಟಿಕ್ ಬಸ್ ಸ್ಟ್ಯಾಂಡಿಂದ ಸುರಂಗಮಾರ್ಗವಾಗಿ ಹೊರಬೀಳಬೇಕಾದರೆ ಅದರ ಬಾಗಿಲಲ್ಲೇ ಅನೇಕ ವ್ಯಾಪಾರಿಗಳು ನಡೆದಾಡಲು ಕೂಡ ತೊಂದರೆಯಾಗುವಂತೆ ಸಾಲು ಸಾಲಾಗಿ ದಾರಿಯ ಇಕ್ಕೆಡೆಗಳಲ್ಲಿ ಸರಕುಗಳನ್ನಿಟ್ಟುಕೊಂಡು ಕೂಗುತ್ತಾ ಮಾರುವುದನ್ನು ಕಂಡು ನನಗೆ ತುಂಬಾ ಸಂತೋಷವಾಯ್ತು. ಸಂತೆಗೆ ಸಾವಿಲ್ಲ, ಅದು ರೂಪಾಂತರ ಪಡೆಯಬಹುದು. ಜನಸಾಮಾನ್ಯರು ಗದ್ದಲವಿಲ್ಲದೆ, ಗಮ್ಮತ್ತಿಲ್ಲದೆ ಬದುಕಲು ಇಚ್ಛಿಸುವುದಿಲ್ಲ. ಜಂಗಮಕ್ಕಳಿವಿಲ್ಲ!



**ಹಾಲಾಡಿ ಮಾರುತಿರಾವ್**
೧೮೦/೨೮, 'ಇಂಚರ'
೧೫ನೇ ಮುಖ್ಯರಸ್ತೆ, ಕುರುಬರಹಳ್ಳಿ
ಬೆಂಗಳೂರು - ೫೬೦೦೮೬

# ಕನ್ನಡ ವೈದ್ಯ ಲೇಖಕರು ಎದುರಿಸುತ್ತಿರುವ ಸಮಸ್ಯೆಗಳು !

**ಡಾ|| ವಸಂತ ಅ. ಕುಲಕರ್ಣಿ**

**ಜಾ**ಗತೀಕರಣ ಹಾಗೂ ಉದಾರೀಕರಣದ ದುರ್ಭರ ಸನ್ನಿವೇಶದಲ್ಲಿ ನಮ್ಮ ಸಾಮಾನ್ಯ ಸಿಕ್ಕಿಹಾಕಿಕೊಂಡಿದ್ದಾನೆ. ನಮ್ಮ ಸಂಪ್ರದಾಯದ ಮೌಲ್ಯಗಳು ಹಾಗೂ ಚಾರ ವಿಚಾರಗಳ ಸತ್ಯಾಸತ್ಯತೆಯಿಂದ ವಂಚಿತನಾಗುತ್ತಿದ್ದಾನೆ. ಈ ಸಂಕ್ರಮಣ ಸ್ಥಿತಿಯಲ್ಲಿ ತ ತನ್ನ ಆರೋಗ್ಯ ಭಾಗ್ಯವನ್ನು ಕಾಪಾಡಿಕೊಳ್ಳುವಲ್ಲಿ ಹೆಣಗಾಡುತ್ತಿದ್ದಾನೆ – ಆಹಾರ ಮಾದಿಗಳು, ದೂಷಿತ ಪರಿಸರ, ಒತ್ತಡಮಯ ಜೀವನಶೈಲಿ – ಹೀಗೆ ಮುಂತಾದವುಗಳ ರಿಣಾಮದಿಂದ ಅವನ ಆರೋಗ್ಯದ ಅರಿವು ಕೂಡ ಸಾಲದಾಗಿದೆ. ಆದ್ದರಿಂದ ರೋಗ್ಯ ಪ್ರಜ್ಞಾ ಹಾಗೂ ಸದೃಢ ಶರೀರ ಕುರಿತು ಜಾಗ್ರತೆ ನೀಡಲು ವೈದ್ಯ ಸಾಹಿತ್ಯವು ರವಿಗೆ ಬರಲು ಸಾಧ್ಯ. ಆದರೆ ಕನ್ನಡದಲ್ಲಿ ವೈದ್ಯ ಸಾಹಿತ್ಯ ನಿರ್ಮಾಣವು – ಸಮಸ್ಯೆಯ ವ್ರತೆಗೆ ಹಾಗೂ ಜನಸಂಖ್ಯೆಗೆ ಎಷ್ಟೂ ಸಾಲದು. ಇಲ್ಲಿಯವರೆಗೂ ೩೫೦೦ ವಿಜ್ಞಾನದ ಸ್ತಕಗಳು ಪ್ರಕಟಗೊಂಡು ಅದರಲ್ಲಿ ಕೇವಲ ೧೮೦೦ ಮಾತ್ರ ವಿವಿಧ ವೈದ್ಯ ಜ್ಞಾನಗಳಿಗೆ ಸಂಬಂಧಿಸಿದವು ಪ್ರಕಟಗೊಂಡಿವೆ. ಇದು ಯಾತಕ್ಕೂ ಸಾಲದು. ಸಾಕಷ್ಟು ದುಗರಲ್ಲಿ ಕುತೂಹಲವಿದೆ, ಜಿಜ್ಞಾಸೆಯಿದೆ ಹಾಗೂ ವೈಜ್ಞಾನಿಕ ಮನೋಭಾವ ದಟ್ಟವಾಗಿ ರಡಿದೆ. ಸಾಕ್ಷರತೆ ಪ್ರಮಾಣವೂ ಸಾಕಷ್ಟು ಬೆಳೆದಿದೆ.

ಶ್ರೀಸಾಮಾನ್ಯರು ತಮ್ಮ ದೇಹದಲ್ಲಿ ಉಂಟಾಗುವ ಆರೋಗ್ಯ ಸಮಸ್ಯೆಗಳನ್ನು ಳಿದುಕೊಳ್ಳಲು ಯತ್ನಿಸುತ್ತಿದ್ದಾರೆ. ವೈದ್ಯರಿಗೆ ಬಗೆ ಬಗೆಯ ಪ್ರಶ್ನೆಗಳನ್ನು ಕೇಳಿ ಪರಿಹಾರ ಂಡುಕೊಳ್ಳಲು ಪ್ರಯತ್ನಿಸುತ್ತಿದ್ದಾರೆ. ಆದ್ದರಿಂದ, ಕನ್ನಡದಲ್ಲಿ ವೈದ್ಯ ಸಾಹಿತ್ಯದ ಕೃಷಿ ಂಥವರ ನೆರವಿಗೆ ಬರುತ್ತದೆ. ಆದರೆ, ಕನ್ನಡ ನಾಡಿನ ಹಾಗೂ ದೇಶದ ಕನ್ನಡಿಗರ ಂಖ್ಯೆಯನ್ನು ಪರಿಗಣಿಸಿ ವೈದ್ಯ ಸಾಹಿತ್ಯ ನಿರ್ಮಾಣದಲ್ಲಿ ಕೆಲ ಸಮಸ್ಯೆಗಳು ಎದುರಾಗಿವೆ ಂಬ ಅಂಶ ತಿಳಿದುಬರುತ್ತದೆ. ವೈದ್ಯ ಲೇಖಕರನ್ನು ಕಾಡುತ್ತಿರುವ ಈ ಸಮಸ್ಯೆಗಳಾವವು ?

ವೈದ್ಯರು ತುಂಬ 'ಬಿಝಿ', ಅವರಿಗೆ ಸಮಯ ದೊರೆಯುವದೆ ಕಠಿಣ. ಅಂದ ಮೇಲೆ, ಕನ್ನಡದಲ್ಲಿ ಬರೆಯುವದೆಂದರೆ ಅದು ಅಸಾಧ್ಯದ ಮಾತು ಎಂದೂ ಹೇಳುವವರಿದ್ದಾರೆ. ಆದರೆ ಅಷ್ಟೇ ಮುತುವರ್ಜಿ ವಹಿಸಿ ಆಸಕ್ತಿಯಿಂದ ತಮ್ಮ ಅನುಭವಜನ್ಯ ವೈದ್ಯ ಸಾಹಿತ್ಯ ಬರೆಯುವವರಿದ್ದಾರೆ. ಇದಕ್ಕೆ ಕೆಲ ಅಗತ್ಯ ಸಂಗತಿಗಳು ಬೇಕಾಗುತ್ತವೆ. ತಾವು ದುಡಿಯುವ ಶಾಸ್ತ್ರದ ಪರಿಚಯ, ಅದರ ನಿಖರತೆ, ಹೇಳಬೇಕೆಂಬ ತುಡಿತ, ಇವು ಮುಖ್ಯ. ಅದಕ್ಕೆ ಸುಲಭ ಕನ್ನಡ ಭಾಷೆಯ ಅರಿವಿನ ಜೊತೆಗೆ ಜನತೆಯ ಆರೋಗ್ಯ ಸಮಸ್ಯೆಗಳನ್ನು ಗ್ರಹಿಸುವ ಶಕ್ತಿ ಹಾಗೂ ಅವು ಉಂಟುಮಾಡುವ ಪರಿಣಾಮಗಳ ಕುರಿತು ಪೂರ್ವಾಲೋಚನೆಯೂ ಇರಬೇಕು. ಬರೆಯುತ್ತ ಹೋದಂತೆ ವೈದ್ಯರಿಗೆ ಈ ವಿಷಯ ಮನವರಿಕೆಯಾಗುತ್ತದೆ. ಇದು ಪ್ರಯಾಸದ ಕೆಲಸವಲ್ಲ.

ವೈದ್ಯ ಲೇಖಕರು ಎದುರಿಸುವ ಇನ್ನೊಂದು ತೊಂದರೆ ಎಂದರೆ ಯಾರಿಗೆ ಬರೆಯಬೇಕು ಎಂಬುದು. ವಿದ್ಯಾರ್ಥಿಗಳಿಗೋ ? ಗೃಹಿಣಿಯರಿಗೋ ? ಹಿರಿಯರಿಗೋ ? ಅಥವಾ ಜನಸಾಮಾನ್ಯರಿಗೋ ? ಇಂಗ್ಲಿಷಿನಲ್ಲಿ ಈ ಸಮಸ್ಯೆ ಅಷ್ಟೊಂದು ಜಟಿಲವಲ್ಲ.

ರೀಡರ್ಸ್ ಡೈಜಸ್ಟ್‌ನಲ್ಲಿ ಡಾ|| ಜಾನ್ ರೆಟ್ಲಿ ಕ್ಲಿಫ್ ಎಂಬ ಲೇಖಕನು ದೇಹದ ಒಂದೊಂದು ಅಂಗಗಳನ್ನು ಇಟ್ಟುಕೊಂಡು ಅವುಗಳ ಆತ್ಮಕಥೆ_ಸರಣಿ ರೂಪದಲ್ಲಿ ಬರೆದ. ಇಂಗ್ಲಿಷ್ ಓದುಗರೇ ಬೇರೆ, ಕನ್ನಡ ಓದುಗರೇ ಬೇರೆ. ಓದುಗರ ಸ್ತರ ಬದಲಾದಂತೆ ಬರೆಯುವ ಜಾಡು ಮತ್ತು ಶೈಲಿಯೂ ಬದಲಾಗಬೇಕು. ಜನಪ್ರಿಯ ಮಾಧ್ಯಮದಲ್ಲಿ ವೈದ್ಯಕೀಯ ವಿಷಯ - ಸಮಸ್ಯೆಗಳಿಗೆ ಪರಿಹಾರ ದೊರಕಬೇಕೇ ವಿನಾ ಅದು ಸಂದಿಗ್ಧತೆ ತರಬಾರದು. ಮಕ್ಕಳಿಗೆ ಹೇಳುವಂತೆ ಬರೆಯುವುದು ಕಷ್ಟಸಾಧ್ಯ. ಕನ್ನಡದಲ್ಲಿ ಈ ಬಗ್ಗೆ ಮಾನದಂಡಗಳು ಹಾಗೂ ಆಕರಗ್ರಂಥಗಳು ಇಲ್ಲ.

ವಿಷಯದ ಆಯ್ಕೆ ಅನುಭವದಿಂದ ಬರುತ್ತದೆ. ಹಾಗೆ ಆಯ್ಕೆ ಮಾಡುವ ಕಲೆಯನ್ನು ಇನ್ನೊಬ್ಬರಿಂದ ಕೇಳಿ ಪಡೆಯಬಹುದು, ವಿವಿಧ ಗ್ರಂಥಗಳ ಟಿಪ್ಪಣಿಯಾಗಿರಬಹುದು, ಅದು ಪ್ರಚಲಿತ ಆರೋಗ್ಯ ಸಮಸ್ಯೆಯಾಗಿರಬಹುದು. ವೇದ್ಯಕೀಯ ಸಂಗತಿಯ ಅಪರೂಪದ ಉದಾಹರಣೆಯಾಗಿರಬಹುದು. ಒಟ್ಟಾರೆ ಅವು ಜನರಿಗೆ ತಿಳಿಯುವಂತಿರಬೇಕು. ಅದು ಜನಪ್ರಿಯ ವೈದ್ಯ ಲೇಖನವಾಗಬೇಕು. ಕೇವಲ ಅನುವಾದ ಅಥವಾ ಭಾಷಾಂತರ ಪ್ರಯೋಜನವಾಗಲಾರದು. ವಿಷಯಪ್ರಧಾನವಾಗಿದ್ದು ವಸ್ತುನಿಷ್ಠತೆಯಿಂದ ಕೂಡಿದ್ದರೆ ಲೇಖನ ಜನಪ್ರಿಯವಾಗುತ್ತದೆ. ವಿವರಣೆ ಜನರ ಹೃದಯ ತಟ್ಟಬೇಕು. ಬೋಧನೆ ಆಪ್ತವಾಗಿರಬೇಕು.

ಕೆಲ ದಶಕಗಳ ಹಿಂದೆ ವೈದ್ಯಕೀಯ ಸಾಹಿತ್ಯ ಕೇವಲ ಅನುವಾದ ಸಾಹಿತ್ಯವಾಗಿತ್ತು. ಆದರೆ ಈಗ ವೈದ್ಯ ಸಾಹಿತ್ಯ ವಿವಿಧ ಪ್ರಕಾರಗಳಲ್ಲಿ ಪ್ರಕಟಗೊಳ್ಳುತ್ತಿರುವುದು ಸಂತೋಷಕರ. ಟಿ.ವಿ. ಮಾಧ್ಯಮದ ವೈದ್ಯ ಸಂದರ್ಶನಗಳು ಕೂಡ ಸಾಕಷ್ಟು ಮಾಹಿತಿ

**ಕನ್ನಡದಲ್ಲಿ ಇನ್ನಿತರ ... ಕೆಗಳಿಗೆ ಇರುವ ಪ್ರಕಟಣಾ ಸೌಲಭ್ಯ ಹಾಗೂ ಮಾರ್ಕೆಟಿಂಗ್ ವ್ಯವಸ್ಥೆಗಳು ವೈದ್ಯಕೀಯ ಸಾಹಿತ್ಯಕ್ಕೆ ರೂಪಿತಗೊಂಡಿಲ್ಲ. ವೈದ್ಯ ಸಾಹಿತ್ಯಕ್ಕೆ ಸಾಕಷ್ಟು ಬೇಡಿಕೆಯಿದ್ದರೂ ಪ್ರಕಾಶನ ಸಂಸ್ಥೆಗಳು ಹಾಗೂ ಖಾಸಗಿ ಪ್ರಕಾಶಕರು ವೈದ್ಯಕೀಯ ಪ್ರಕಟಣೆಗೆ ಬಂಡವಾಳ ಹೂಡಲು ಮುಂದೆ ಬರುತ್ತಿಲ್ಲ. ಕಾರಣ ಓದುಗರಿಲ್ಲ ಹಾಗೂ ಬಂಡವಾಳ ಹೂಡಿದ ಹಣ ಮರಳಿ ಬರಲು ಹೆಚ್ಚು ಕಾಲ ಕಾಯಬೇಕು ಎಂದು. ಈ ನಿಟ್ಟಿನಲ್ಲಿ ವಿಶ್ವವಿದ್ಯಾಲಯಗಳು ಪ್ರಕಟನೆಗೆ ಮುಂದಾಗಬೇಕಲ್ಲವೆ ? ಹೀಗಾಗಿ ವೈದ್ಯ ಲೇಖಕರು ಬರೆಯಲು ಹಿಂಜರಿಯುತ್ತಾರೆ. ಇದಕ್ಕೆ ವೈದ್ಯ ಲೇಖಕರೇ ಕನ್ನಡ ವೈದ್ಯಕೀಯ ಸಾಹಿತ್ಯ ಪರಿಷತ್ತಿನ ಅಡಿಯಲ್ಲಿ ಪರಿಹಾರ ಕಂಡುಕೊಳ್ಳಬಹುದು. ಪ್ರತಿಯೊಂದು ವೈದ್ಯ ವಿಜ್ಞಾನದ ಕಾಲೇಜಿನಲ್ಲಿ ಕನ್ನಡ ವೈದ್ಯ ಸಾಹಿತ್ಯದ ಗ್ರಂಥ ಭಂಡಾರ ಇರಬೇಕು. ಪ್ರಸ್ತುತ ನಿಯತಕಾಲಿಕೆ ಪತ್ರಿಕೆಗಳಲ್ಲಿ ಪ್ರಾಶಸ್ತ್ಯ ನೀಡಬೇಕು.**



ನೀಡುತ್ತವೆ. ಅದರಂತೆ ಕಥೆ, ನಾಟಕ, ಪ್ರವಾಸ, ಕಥನ, ವಚನ, ಕಗ್ಗಗಳ ರೂಪ ಪಡೆದು ವೈದ್ಯಕೀಯ ವಿಷಯಗಳು ಸೃಜನಾತ್ಮಕವಾಗಿ ಪ್ರಕಟಗೊಳ್ಳುತ್ತಿವೆ. ಪತ್ರಿಕಾ ಅಂಕಣಗಳು, ಪ್ರಶ್ನೋತ್ತರ ಅಂಕಣಗಳು ಕೇವಲ ಲೈಂಗಿಕ ಮತ್ತು ಮಾನಸಿಕ ವ್ಯಾಧಿಗಳಿಗೆ ಸೀಮಿತವಾಗಿವೆ. ಈ ದಿಸೆಯಲ್ಲಿ ಇನ್ನಷ್ಟು ಸಾಕಷ್ಟು ವೈದ್ಯ ಸೃಜನಶೀಲ ಸಾಹಿತ್ಯ ಹೊರಬರಬೇಕಾಗಿದೆ. ಈ ದಿಸೆಯಲ್ಲಿ ಚಿಂತನೆ ನಡೆಯಬೇಕಾಗಿದೆ. ಮಲೆಯಾಳಿ ಮತ್ತು ಮರಾಠಿ ಭಾಷೆಗಳಲ್ಲಿಯೂ ಸೃಜನಶೀಲ ವೈದ್ಯಕೀಯ ಸಾಹಿತ್ಯ ವಿಪುಲವಾಗಿದೆ. ಅವುಗಳ ಮುಂದೆ ಕನ್ನಡ ಹೆಚ್ಚೇನಿಲ್ಲ. ವೈದ್ಯಕೀಯ ಸಂಶೋಧನೆಗಳು ಹಾಗೂ ಪತ್ರಿಕಾ ವರದಿಗಳಂತೂ ಇಲ್ಲವೇ ಇಲ್ಲ. ಪತ್ರಿಕೆಗಳಲ್ಲಿ ವೈದ್ಯಕೀಯ ವಿಷಯಗಳ ವರದಿ ಮಾಡುವ ವಿಶೇಷ ಕಲೆಯನ್ನು ಇಂಗ್ಲಿಷ್ ಪತ್ರಿಕೆಯಲ್ಲಿ ಕಾಣಬಹುದು.

ಯಾವ ರೀತಿಯಾಗಿ ವೈದ್ಯ ಸಾಹಿತ್ಯ ನಿರೂಪಿಸಬಹುದು ? ಸರಳ ಭಾಷೆಯ ಭಿತ್ತಿ ಪತ್ರಗಳು-ಕರಪತ್ರಗಳು, ಸಂದರ್ಶನಗಳು, ಸಂಶೋಧನಾ ಟಿಪ್ಪಣಿಗಳು, ಕವನ, ತ್ರಿಪದಿ ಮುಂತಾದವುಗಳಲ್ಲಿ ಪ್ರಸ್ತುತಪಡಿಸಬಹುದು. ಕನ್ನಡ ಭಾಷೆಯು ಯಾವದೇ ವಿಜ್ಞಾನ ವಿಷಯವನ್ನು ಸಮರ್ಥವಾಗಿ ಹೇಳಬಲ್ಲ ಭಾಷೆಯಾಗಿದೆ. ಕನ್ನಡದಲ್ಲಿ ಹೇಳಲು ಸಾಧ್ಯವೇ ಎಂದು ಮೂಗು ಮುರಿಯುವ ಜನರಿದ್ದಾರೆ. ಎಲ್ಲ ವೈಜ್ಞಾನಿಕ ಶಿಸ್ತುಗಳಲ್ಲಿ ಕನ್ನಡದಲ್ಲಿ ಕೃಷಿಯಾದರೇನೆ ಕನ್ನಡ ಇನ್ನಷ್ಟು ಸಮೃದ್ಧಗೊಳ್ಳುವದು. ಪತ್ರಿಕಾ ಅಂಕಣಗಳು ಇನ್ನಷ್ಟು ವ್ಯಾಪಕವಾಗಿ ಬರಬೇಕು. ಮುಖ್ಯವಾಗಿ ಸುಮಾರು ಮೂರು ದಶಕಗಳಿಂದಲೂ ವೈದ್ಯಕೀಯ ಸಾಹಿತ್ಯ ನಿರ್ಮಾಣದಲ್ಲಿ ಶ್ರಮಿಸುತ್ತಿರುವ ನನಗೆ ಎದುರಾದ ಪ್ರಮುಖ ಸಮಸ್ಯೆಯೆಂದರೆ, ಇಂಗ್ಲಿಷ್ ವೈದ್ಯಕೀಯ ಶಬ್ದಗಳಿಗೆ ಸಮಪದ ಕನ್ನಡದಲ್ಲಿ ಬಳಸುವ ಕುರಿತು ಅಥವಾ ಟಂಕಿಸುವ ಕುರಿತು. ಶಬ್ದ ಬ್ರಹ್ಮ ಡಾ|| ಡಿ. ಎಸ್. ಶಿವಪ್ಪನವರು ಅತ್ಯಂತ ಪರಿಶ್ರಮದಿಂದ ೩೫೦೦೦ ಶಬ್ದಗಳುಳ್ಳ ವೈದ್ಯಕೀಯ ಪದಕೋಶ ರಚಿಸಿದರು. ಅವರದು ಅಪೂರ್ವ ಸಾಹಸ. ಆದರೆ ಅದರಲ್ಲಿ ಒಂದು ನ್ಯೂನತೆ ಎಂದರೆ ಸಂಸ್ಕೃತ ಸಮಪದಗಳನ್ನು ಸಾಕಷ್ಟು ಸೇರಿಸದೇ ಇರುವದು. ಆಯುರ್ವೇದದಲ್ಲಿ ಸಾಕಷ್ಟು ಸಮಪದಗಳು ಲಭ್ಯವುಂಟು. ಡಾ|| ಸೊಂಡರ ಶ್ರೀನಿವಾಸಾಚಾರ್ಯ ಎಂಬವರು ಈ ದಿಸೆಯಲ್ಲಿ ಒಂದು ಚಿಕ್ಕ ನಿಘಂಟು ಹೊರತಂದಿದ್ದರು. ಅದರಂತೆ ರಾಜ್ಯ ವಿಜ್ಞಾನ ಪರಿಷತ್ತಿನ ಚಿಕ್ಕ ವಿಜ್ಞಾನಕೋಶ, ಕನ್ನಡ ವೈದ್ಯ ವಿಶ್ವಕೋಶ (ಕನ್ನಡ ವಿಶ್ವವಿದ್ಯಾಲಯ), ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ನಿಘಂಟುಗಳು ಮತ್ತು ವಿಶ್ವಕೋಶಗಳು ಕೆಲಮಟ್ಟಿಗೆ ನೆರವಿಗೆ ಬರಬಹುದು. ಈಗಲೂ ಸಮಪದಗಳ ಸಮಸ್ಯೆ ಪ್ರತಿಯೊಬ್ಬ ವೈದ್ಯಲೇಖಕನನ್ನು ಕಾಡುತ್ತವೆ. ಈ ದಿಸೆಯಲ್ಲಿ ಕರ್ನಾಟಕ ಸರಕಾರ ಅಥವಾ ಅಕಾಡೆಮಿ ಹಾಗೂ ವಿಶ್ವವಿದ್ಯಾಲಯಗಳು ವೈದ್ಯ ಪದಕೋಶದ ರಚನೆಗೆ ಈಗಾಗಲೇ ಯತ್ನಿಸಬೇಕಾಗಿತ್ತು. ಅಲ್ಲದೆ, ಸುವರ್ಣ ಕರ್ನಾಟಕ ವರ್ಷದ ಸಂದರ್ಭದಲ್ಲಿ ಸರಕಾರ ಅಲ್ಲೊಂದು ಇಲ್ಲೊಂದು ವೈದ್ಯಕೀಯ ಪುಸ್ತಕಗಳನ್ನು ಪ್ರಕಟಿಸಿದರೆ ಸಾಲದು. ಕನ್ನಡ ಸಾಹಿತ್ಯ ಪರಿಷತ್ತು ಸಹ ಈ ನಿಟ್ಟಿನಲ್ಲಿ ವಿಚಾರ ಮಾಡಿಲ್ಲ. ಆದರೆ, ಈ ಸಂದರ್ಭದಲ್ಲಿ ನವಕರ್ನಾಟಕ ಪ್ರಕಾಶನದ ಸಾಹಸವನ್ನು ಅಭಿನಂದಿಸಲೇಬೇಕು. ಈ ಸಂಸ್ಥೆ ವೈದ್ಯಕೀಯ ವಿವಿಧ ಪ್ರಕಾರಗಳ ನೂರಾರು ಪುಸ್ತಕಗಳನ್ನು ಪ್ರಕಟಿಸಿದೆ. ವೈದ್ಯಕೀಯ ವೃತ್ತಿಯಲ್ಲಿರುವ ಅನೇಕರಿಗೆ ಪ್ರೋತ್ಸಾಹಿಸಿ ಹೊಸ ಲೇಖಕರನ್ನು ಸೃಷ್ಟಿಸುತ್ತಿದೆ. ಕೆಲ ಪ್ರಕಟಣೆಗಳು ಮಾದರಿ ಪ್ರಕಟಣೆಗಳಾಗಿವೆ. ಸಮಪದಗಳ ಬಳಕೆಯಲ್ಲಿ ಈಗ ಪ್ರತಿಯೊಬ್ಬ ಲೇಖಕ ತನ್ನದೇ ಆದ ಸಮಪದಗಳ ಬಳಕೆಯಲ್ಲಿ ತೊಡಗಿದರೆ ಓದುಗ ಗೊಂದಲಕ್ಕೆ ಬೀಳುತ್ತಾನೆ. ಸಮಪದಗಳ ಬಳಕೆ ಏಕರೂಪವಾಗಬೇಕು. ಬಳಕೆ ಅಧಿಕೃತಗೊಳ್ಳಬೇಕಾದ್ದು ಅವಶ್ಯಕ. ಪದಗಳನ್ನು ಟಂಕಿಸುವ ಎಲ್ಲ ಮಾನದಂಡಗಳು ಬಳಕೆಯಾಗಬೇಕು. ಒಂದೆರಡು ಉದಾಹರಣೆಗಳು – stem cell ಇದಕ್ಕೆ ಕಾಂಡಕೋಶ ಎಂದೂ, ಇನ್ನು ಕೆಲವರು ಆಕರಕೋಶ ಎಂದೂ ಉಪಯೋಗಿಸುತ್ತಾರೆ. ಇನ್ನು ಕೆಲವರು ನೇರವಾಗಿ 'ಸ್ಟೆಮ್' ಕೋಶವೆಂದೂ ಪ್ರಯೋಗಿಸುತ್ತಾರೆ. ಅದರಂತೆ 'ಅನೆಸ್ಥೇಸಿಯಾ'ಕ್ಕೆ ಅರಿವಳಿಕೆ, ಅರವಳಿಕೆ, ಮೂರ್ಛಕ, ಅರೆಪ್ರಜ್ಞೆ ಹೀಗೆ ನೂರಾರು ಪದಗಳು. ಕೆಲ ನಿತ್ಯ ರೂಢಿಯಲ್ಲಿ ಇರುವ ಇಂಗ್ಲಿಷ್ ಪದಗಳನ್ನೇ ನೇರವಾಗಿ ಬಳಸಬಹುದು – ಕ್ಲಿನಿಕ್, ವಾರ್ಡ್, ಇತ್ಯಾದಿಗಳು.




ಸಮಪದಗಳನ್ನು ಉಪಯೋಗಿಸುವ ತಂತ್ರದಲ್ಲಿ ತೊಡಕುಗಳಿವೆ. ಈ ನಿಟ್ಟಿನಲ್ಲಿ ೧೯೯೬ರಲ್ಲಿ ಅಸ್ತಿತ್ವಕ್ಕೆ ಬಂದ ರಾಜೀವ ಗಾಂಧಿ ಆರೋಗ್ಯ ವಿಶ್ವವಿದ್ಯಾಲಯ ಈ ದಿಸೆಯಲ್ಲಿ ಚಿಂತಿಸಬೇಕಾಗಿತ್ತು.

ರಾಜೀವ ಗಾಂಧಿ ಆರೋಗ್ಯ ವಿಶ್ವವಿದ್ಯಾಲಯದ 'ಪ್ರಸಾರಾಂಗ'ವು ಕೆಲ ವರ್ಷಗಳ ಹಿಂದೆ ಕೆಲ ಆರೋಗ್ಯಕ್ಕೆ ಸಂಬಂಧಿಸಿದ ಪುಸ್ತಕಗಳನ್ನು ಹೊರತಂದಿತು. ಈಗ ಅದು ದೀರ್ಘನಿದ್ರೆಯಲ್ಲಿದೆ. 'ಕಸ್ತೂರಿ' ಮಾಸಪತ್ರಿಕೆಯ ಆರೋಗ್ಯದಂಗಳ, 'ಹೊಸತು'ವಿನ 'ಆಲೋಚನೆ', ಜೀವನಾಡಿ, ವೈದ್ಯಶ್ರೀ, ವೈದ್ಯಲೋಕ, ಆರೋಗ್ಯ ಅನುರಾಗ, ಆರೋಗ್ಯವಾಣಿ ಮುಂತಾದ ಆರೋಗ್ಯ ವಿಷಯಕ್ಕೆ ಮೀಸಲಾದ ಪತ್ರಿಕೆಗಳು ಅನೇಕ ಸಂಕಷ್ಟಗಳಲ್ಲಿ ಮುಳುಗಿದರೂ ತಲೆಯೆತ್ತಿ ನಿಲ್ಲಲು ಯತ್ನಿಸುತ್ತಿವೆ. ಇದಕ್ಕೆ ಸರಕಾರದ ಪ್ರೋತ್ಸಾಹ ಅಗತ್ಯ. ಈ ಸಮಸ್ಯೆಗಳೇ ಅಲ್ಲದೆ ಕೆಲ ಸಾಮಾನ್ಯ ಸಮಸ್ಯೆಗಳೂ ಉಂಟು. ಯಾವದೇ ವೈದ್ಯಕೀಯ 'ಶಿಸ್ತು' ಇರಲಿ, ಯಾವದನ್ನು ಎಷ್ಟು ಹೇಳಬೇಕು ಎಂಬುದು ಪ್ರಶ್ನೆ. ಉದಾಹರಣೆಗೆ, ಲೈಂಗಿಕ ವಿಷಯಗಳು. ಲೇಖನದ ಸಂಪಾದನೆಯನ್ನು ವೈದ್ಯಕೀಯೇತರ ಸಂಪಾದಕರು ಸಂಕಲಿಸಿದರೆ ಆಗುವ ಅವಘಡಗಳು ಅನೇಕ. ಆದರೆ ನಿಷ್ಣಾತ ಸಂಪಾದಕರೂ ವೈದ್ಯಕೀಯ ಜ್ಞಾನ ಬಲ್ಲ ಚಾಣಾಕ್ಷರಿರುತ್ತಾರೆ. ಪ್ರಕಟಿತ ಕೃತಿಯ ವಿಮರ್ಶೆಯನ್ನು ವೈದ್ಯಕೀಯ ವಿಷಯಗಳನ್ನು ಬಲ್ಲವನೇ ಮಾಡಬೇಕೆ? ಮುಖ್ಯವಾಗಿ, ವೈದ್ಯ ಲೇಖಕರಿಗೆ ಪ್ರಸ್ತುತ ಪರಿಸ್ಥಿತಿಯಲ್ಲಿ ಮಾರ್ಗದರ್ಶನ ನೀಡುವ ಕಾರ್ಯಾಗಾರಗಳು ನಡೆಯಬೇಕು. ಆ ದಿಸೆಯಲ್ಲಿ ಮಾರ್ಗಸೂಚಿಯ ಆವಶ್ಯಕತೆ ಇದೆ. ಲೇಖಕ ಯಾವದೇ ಲೇಖನ ಪ್ರಕಟವಾದ ನಂತರ ಯಕ್ಷಿಣಿ ಪರಿಹಾರ ಬಯಸುವದು ತಪ್ಪು. ಆದರೆ ಪ್ರತಿಯೊಬ್ಬ ವೈದ್ಯ ಲೇಖನದ ಮೌಲ್ಯ ಮಾಪನ, ಸಮೀಕ್ಷೆ ಹಾಗೂ ರಚನಾತ್ಮಕ ವಿಮರ್ಶೆ ಬಯಸುವುದರಲ್ಲಿ ತಪ್ಪೇನೂ ಇಲ್ಲ.

ಆದರೆ ಕನ್ನಡದಲ್ಲಿ ಇನ್ನಿತರ ಪ್ರಕಟಣೆಗಳಿಗೆ ಇರುವ ಪ್ರಕಟಣಾ ಸೌಲಭ್ಯ ಹಾಗೂ ಮಾರ್ಕೆಟಿಂಗ್ ವ್ಯವಸ್ಥೆಗಳು ಇದಕ್ಕೆ ರೂಪಿತಗೊಂಡಿಲ್ಲ. ವೈದ್ಯ ಸಾಹಿತ್ಯಕ್ಕೆ ಸಾಕಷ್ಟು ಬೇಡಿಕೆಯಿದ್ದರೂ ಪ್ರಕಾಶನ ಸಂಸ್ಥೆಗಳು ಹಾಗೂ ಖಾಸಗಿ ಪ್ರಕಾಶಕರು ವೈದ್ಯಕೀಯ ಪ್ರಕಟಣೆಗೆ ಬಂಡವಾಳ ಹೂಡಲು ಮುಂದೆ ಬರುತ್ತಿಲ್ಲ. ಕಾರಣ ಓದುಗರಿಲ್ಲ ಹಾಗೂ ಬಂಡವಾಳ ಹೂಡಿದ ಹಣ ಮರಳಿ ಬರಲು ಹೆಚ್ಚುಕಾಲ ಕಾಯಬೇಕು ಎಂದು. ಈ ನಿಟ್ಟಿನಲ್ಲಿ ವಿಶ್ವವಿದ್ಯಾಲಯಗಳು ಪ್ರಕಟನೆಗೆ ಮುಂದಾಗಬೇಕಲ್ಲವೆ ? ಹೀಗಾಗಿ ವೈದ್ಯ ಲೇಖಕರು ಬರೆಯಲು ಹಿಂಜರಿಯುತ್ತಾರೆ. ಇದಕ್ಕೆ ವೈದ್ಯ ಲೇಖಕರೇ ಕನ್ನಡ ವೈದ್ಯಕೀಯ ಸಾಹಿತ್ಯ ಪರಿಷತ್ತಿನ ಅಡಿಯಲ್ಲಿ ಪರಿಹಾರ ಕಂಡುಕೊಳ್ಳಬಹುದು. ಪ್ರತಿಯೊಂದು ವೈದ್ಯ ವಿಜ್ಞಾನದ ಕಾಲೇಜಿನಲ್ಲಿ ಕನ್ನಡ ವೈದ್ಯ ಸಾಹಿತ್ಯದ ಗ್ರಂಥ ಭಂಡಾರ ಇರಬೇಕು. ಪ್ರಸ್ತುತ ನಿಯತಕಾಲಿಕೆ ಪತ್ರಿಕೆಗಳಲ್ಲಿ ಪ್ರಾಶಸ್ತ್ಯ ನೀಡಬೇಕು. ಸೂಕ್ತವಾದ ಗೌರವಧನ ಬರಬೇಕು. ಕರ್ನಾಟಕ ಸರಕಾರವು ವೈದ್ಯ ಸಾಹಿತ್ಯವನ್ನು ಗ್ರಾಮ ಪಂಚಾಯಿತಿ ಮತ್ತು ಪ್ರಾಥಮಿಕ ಶಾಲೆಗಳ ಮಟ್ಟದಲ್ಲಿಯೂ ಕೊಳ್ಳುವ ವ್ಯವಸ್ಥೆಯಾಗಬೇಕು. ಮಕ್ಕಳ ಆರೋಗ್ಯ ಅಥವಾ ಪ್ರತಿಬಂಧಕ ಉಪಾಯಗಳ ಸಾಹಿತ್ಯ, ಪರಿಹಾರಗಳ ಕುರಿತು ಸರಕಾರದ ಕಾರ್ಯಕ್ರಮವಾಗಬೇಕು. ಹಾಗಾದರೆ ಉತ್ತಮ ವೈದ್ಯ ಬರಹದ ಗುಣಲಕ್ಷಣಗಳೇನು ?

೧. ನಿರ್ದೇಶಿತ ಸಮೂಹವನ್ನು ನೇರವಾಗಿ ತಲುಪಿ ಸತ್ಪರಿಣಾಮವನ್ನುಂಟುಮಾಡಬೇಕು. ವಿಷಯ ನಿಷ್ಠತೆಯ ಅಂಶಗಳು ಸಂಗ್ರಹವಾಗಬೇಕಾದರೆ ಆಕರ ಗ್ರಂಥ-ಜರ್ನಲ್‌ಗಳನ್ನು ಪಡೆಯಲು ಸೂಕ್ತ ಗ್ರಂಥಾಲಯ ಬೇಕು.

೨. ಆಸಕ್ತಿ ಕೆರಳಿಸಿ, ಆರೋಗ್ಯ ಪ್ರಜ್ಞೆ ಜಾಗ್ರತವಾಗಿಡಬೇಕು. ಆಲೋಚನಾ ಶಕ್ತಿ ಹಿಗ್ಗಬೇಕು. ಬೆಚ್ಚಿ ಬೀಳಿಸುವ, ಭಯ ಹುಟ್ಟಿಸುವ, ನಿರಾಶೆಯುಂಟುಮಾಡುವ ಅಂಶಗಳು ಇರಲೇಬಾರದು.

೩. ಎಲ್ಲವೂ ಆಧಾರಸಹಿತ ಅಧಿಕೃತವಾಗಿರಬೇಕು. ಅನುಮಾನ, ಸಂದಿಗ್ಧತೆ ಹುಟ್ಟಿಸುವ, ದ್ವಂದ್ವ ಕಲ್ಪನೆಗಳನ್ನು ಉಂಟುಮಾಡುವ ಚರ್ಚೆ ಇರಕೂಡದು. ಗೊಂದಲ ಹೇಳಿಕೆಗಳು ಕೆಟ್ಟ ಪರಿಣಾಮ ಉಂಟುಮಾಡುತ್ತವೆ. ವಿರೋಧಾಭಾಸದ ಹೇಳಿಕೆಗಳು ಇರಬಾರದು.

೫೨ನೇ ಪುಟಕ್ಕೆ

# ವೋಲ್ಟೇಜ್ ಸ್ಟೆಬಿಲೈಜರ್ ಅವಶ್ಯಕತೆ ಇದೆಯೆ ?



ಎಸ್. ಎಂ. ಗುಡದೂರು

**ಆಧುನಿಕ ಜೀವನದಲ್ಲಿ ನಾವು ಅನೇಕ ಉಪಯೋಗಿ ವಸ್ತುಗಳ ಜೊತೆಗೆ ಅನುಪಯೋಗಿ ವಸ್ತುಗಳನ್ನೂ ತುಂಬಿಕೊಂಡಿದ್ದೇವೆ. ಇವುಗಳ ಉಪಯುಕ್ತತೆಯ ಬಗ್ಗೆ ಅನೇಕ ಸುಳ್ಳುಗಳಿಂದ ಕೂಡಿದ ಪ್ರಚಾರ ಮಾಡಲಾಗುತ್ತದೆ. ಬಳಕೆದಾರರೂ ಸಹ ಸತ್ಯಾಸತ್ಯತೆಗಳನ್ನು ಯೋಚಿಸದೆ ಖರೀದಿಸಿಬಿಡುತ್ತಾರೆ. ಕೆಲವು ವಸ್ತುಗಳಂತೂ ಬಳಸದಿದ್ದರೆ ಅಪಾಯ ಕಾದಿದೆಯೆಂದು ಸಹ ಎಚ್ಚರಿಸುತ್ತಾರೆ. ಉದಾಹರಣೆಗೆ, ಫ್ಲೋರೈಡ್‌ಯುಕ್ತ ದಂತಮಂಜನ, ಐಯೋಡಿನ್‌ಯುಕ್ತ ಉಪ್ಪು ಇತ್ಯಾದಿ. ನಿಜವಾಗಿಯೂ ಇವುಗಳಲ್ಲಿ ಅನೇಕವು ಅನುಪಯುಕ್ತ ಹಾಗೂ ಅಪಾಯಕಾರಿ. ನಾವು ಬಳಸುವ ವೋಲ್ಟೇಜ್ ಸ್ಟೆಬಿಲೈಜರ್ (ವಿದ್ಯುತ್ ಒತ್ತಡ ನಿಯಂತ್ರಕ) ಇಂಥವುಗಳಲ್ಲಿ ಒಂದು.**

ಆಧುನಿಕ ಜೀವನದಲ್ಲಿ ನಾವು ಅನೇಕ ಉಪಯೋಗಿ ವಸ್ತುಗಳ ಜೊತೆಗೆ ಅನುಪಯೋಗಿ ವಸ್ತುಗಳನ್ನೂ ತುಂಬಿಕೊಂಡಿದ್ದೇವೆ. ಇವುಗಳ ಉಪಯುಕ್ತತೆಯ ಬಗ್ಗೆ ಅನೇಕ ಸುಳ್ಳುಗಳಿಂದ ಕೂಡಿದ ಪ್ರಚಾರ ಮಾಡಲಾಗುತ್ತದೆ. ಬಳಕೆದಾರರೂ ಸಹ ಸತ್ಯಾಸತ್ಯತೆಗಳನ್ನು ಯೋಚಿಸದೆ ಖರೀದಿಸಿಬಿಡುತ್ತಾರೆ. ಕೆಲವು ವಸ್ತುಗಳಂತೂ ಬಳಸದಿದ್ದರೆ ಅಪಾಯ ಕಾದಿದೆಯೆಂದು ಸಹ ಎಚ್ಚರಿಸುತ್ತಾರೆ. ಉದಾಹರಣೆಗೆ, ಫ್ಲೋರೈಡ್‌ಯುಕ್ತ ದಂತಮಂಜನ, ಐಯೋಡಿನ್‌ಯುಕ್ತ ಉಪ್ಪು ಇತ್ಯಾದಿ. ನಿಜವಾಗಿಯೂ ಇವುಗಳಲ್ಲಿ ಅನೇಕವು ಅನುಪಯುಕ್ತ ಹಾಗೂ ಅಪಾಯಕಾರಿ. ನಾವು ಬಳಸುವ ವೋಲ್ಟೇಜ್ ಸ್ಟೆಬಿಲೈಜರ್ (ವಿದ್ಯುತ್ ಒತ್ತಡ ನಿಯಂತ್ರಕ) ಇಂಥವುಗಳಲ್ಲಿ ಒಂದು. ಎಲ್ಲರ ಮನೆಯಲ್ಲೂ ಗಣೇಶನ ಮುಂದಿರುವ ಇಲಿಯಂತೆ ವೋಲ್ಟೇಜ್ ಸ್ಟೆಬಿಲೈಜರ್ ಟಿವಿ ಮತ್ತು ಫ್ರಿಜ್ ಮೇಲೆ ಕುಳಿತುಬಿಟ್ಟಿರುತ್ತದೆ. ಇದು ಇಲ್ಲದೆ ಉಪಕರಣವನ್ನು ಜೋಡಿಸಲು ಸಹ ಜನ ಹೆದರುತ್ತಾರೆ. ನಿಯಂತ್ರಕ ಇರದಿದ್ದರೆ ಉಪಕರಣಗಳು ಚಟ್ಟನೆ ಸುಟ್ಟೇ ಹೋಗುತ್ತವೆ ಎಂಬ (ಮೂಢ)ನಂಬಿಕೆಯನ್ನು ಮಾರಾಟಗಾರರು ಹುಟ್ಟಿಸಿಬಿಟ್ಟಿದ್ದಾರೆ. ನಿಜವಾಗಿಯೂ ವೋಲ್ಟೇಜ್ ಸ್ಟೆಬಿಲೈಜರ್ ಹಣದ ಮತ್ತು ವಿದ್ಯುತ್‌ನ ದುರುಪಯೋಗ.

ಭಾರತದಲ್ಲಿ ಸರಬರಾಜಾಗುವ ವಿದ್ಯುತ್‌ನ ಒತ್ತಡ 220V-240V (230+5% ಅತ್ಯಂತ ಸಮರ್ಪಕ) ಪ್ರಮಾಣದಲ್ಲಿ ಇರುತ್ತದೆ. ಆದ್ದರಿಂದ ನಮ್ಮಲ್ಲಿ ಬಿಕರಿಯಾಗುವ ಎಲ್ಲಾ ವಿದ್ಯುತ್ ಉಪಕರಣಗಳು ಇದೇ ಒತ್ತಡದಲ್ಲಿ ಕೆಲಸ ಮಾಡುವಂತೆ ವಿನ್ಯಾಸಗೊಂಡಿರುತ್ತವೆ. ಉದಾಹರಣೆಗೆ, ನಮ್ಮ ಮನೆಯಲ್ಲಿರುವ ಫ್ರಿಜ್‌ನ ವೋಲ್ಟೇಜ್ ದರ 140V-280V ಮತ್ತು ಟಿವಿಯ ವೋಲ್ಟೇಜ್ ದರ 90V-270V ಇದೆ. ಅಂದರೆ ಸಾಮಾನ್ಯ ಮಟ್ಟಕ್ಕಿಂತ ಅತಿ ಹೆಚ್ಚಿನ ವೋಲ್ಟೇಜ್ ಬದಲಾವಣೆಯನ್ನು ಈ ಉಪಕರಣಗಳು ತಡೆದುಕೊಳ್ಳುತ್ತವೆಂತಾಯಿತು ಮತ್ತು ವೋಲ್ಟೇಜ್ ನಿಯಂತ್ರಕದ ರೇಟಿಂಗ್ ಸಹ ಇದೇ ಅಳತೆಯಲ್ಲಿ ಇರುತ್ತದೆ. ಸಿಡಿಲು ಮುಂತಾದ ಅಸಾಮಾನ್ಯ ಘಟನೆಗಳನ್ನು ಹೊರತುಪಡಿಸಿದರೆ ಈ ಅಳತೆಯ ಹೊರಗೆ ವೋಲ್ಟೇಜ್ ಬರುವ ಸಾಧ್ಯತೆಯೇ ಇರುವದಿಲ್ಲ.

ವೋಲ್ಟೇಜ್ ನಿಯಂತ್ರಕವನ್ನು ಉಪಕರಣಕ್ಕೆ ಚಿತ್ರ (೧)ರಂತೆ ಜೋಡಿಸಿರುತ್ತಾರೆ. ಬಹು ಪ್ರಚಲಿತವಾದ ಕಂಪನಿಯ ಮೂರು ವೋಲ್ಟೇಜ್ ನಿಯಂತ್ರಕಗಳನ್ನು ಪ್ರಯೋಗಶಾಲೆಯಲ್ಲಿ ಪರೀಕ್ಷಿಸಲಾಯಿತು. ಫ್ರಿಜ್‌ನ ಜೊತೆ ಬಳಸುವ 500VA ರೇಟಿಂಗ್ ನಿಯಂತ್ರಕದ ದತ್ತವನ್ನು ಕೋಷ್ಟಕ ೧ರಲ್ಲಿ ತೋರಿಸಿದೆ. ಇದು ಹೊರ ಹರಿಯುವ ವಿದ್ಯುತ್ ವೋಲ್ಟೇಜ್‌ನ ಬದಲಾವಣೆಯನ್ನು ಒಳ ಹರಿಯುವ ವಿದ್ಯುತ್ ವೋಲ್ಟೇಜ್‌ನ ಬದಲಾವಣೆಯೊಂದಿಗೆ ತೋರಿಸುತ್ತದೆ. ಇದೇ ರೀತಿ ಟಿವಿಯ ಜೊತೆ ಬಳಸುವ 150VA ರೇಟಿಂಗ್ ನಿಯಂತ್ರಕದ ದತ್ತವನ್ನು ಕೋಷ್ಟಕ ೨ರಲ್ಲಿ ತೋರಿಸಿದೆ. ಕೋಷ್ಟಕ ೩ ನಿಯಂತ್ರಕವನ್ನು ಯಾವುದೇ ಉಪಕರಣಕ್ಕೆ ಜೋಡಿಸದೇ (No-load) ಪಡೆದ ದತ್ತಾಂಶ.

ಮೇಲಿನ ದತ್ತಗಳಿಂದ ತಿಳಿಯುವದೇನೆಂದರೆ ಹೊರ ಹರಿಯುವ ವಿದ್ಯುತ್ ವೋಲ್ಟೇಜ್ ಒಳ ಹರಿಯುವ ವಿದ್ಯುತ್ ವೋಲ್ಟೇಜ್ ಬದಲಾವಣೆಯಾದಂತೆ ಬದಲಿಯಾಗಿದೆ. ಆದರೆ ನಿಯಂತ್ರಕದ ಅರ್ಥವೇನು ? ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಒಳ ಹರಿಯುವ ವೋಲ್ಟೇಜ್ 220Vನ ಹತ್ತಿರ ಇದ್ದಾಗ ಹೊರ ಹರಿಯುವ ವೋಲ್ಟೇಜ್ 245V ವರೆಗೆ ಪರಿವರ್ತಿತವಾಗಿದೆ. ಅಂದರೆ ಒಳಹರಿಯುವ ವೋಲ್ಟೇಜ್ ಸಮರ್ಪಕವಾಗಿದ್ದಾಗ ಹೊರಹರಿಯುವ ವೋಲ್ಟೇಜ್ ಅಸಮರ್ಪಕವಾಗಿದೆ. ಒಂದು ವೇಳೆ ನಿಯಂತ್ರಕ ಇರದಿದ್ದರೆ ಉಪಕರಣ ಸರಿಯಾದ ವೋಲ್ಟೇಜ್‌ನಲ್ಲಿ ಕಾರ್ಯನಿರ್ವಹಿಸುತ್ತಿತ್ತು. ಆದ್ದರಿಂದ ನಿಯಂತ್ರಕದ ಬಳಕೆ ಅರ್ಥಪೂರ್ಣವಾಗಬೇಕಾದರೆ ಒಳ ಹರಿಯುವ ವಿದ್ಯುತ್ ವೋಲ್ಟೇಜ್ ಯಾವಾಗಲೂ ಹೆಚ್ಚು ಅಥವಾ ಕಡಿಮೆ ಇರಬೇಕು. ಆದರೆ ದಿನದ ಅಥವಾ ವರ್ಷದ ಸರಾಸರಿ ತೆಗೆದುಕೊಂಡರೆ ವೋಲ್ಟೇಜ್ ಸಮರ್ಪಕವಾದ ಪ್ರಮಾಣದಲ್ಲಿ ಇರುತ್ತದೆ. ನಿಯಂತ್ರಕದ ಬಳಕೆಯಿಂದ ನಮ್ಮ ಉಪಕರಣಗಳು ಸರಾಸರಿಯಾಗಿ ಅಸಮರ್ಪಕವಾದ ಸ್ಥಿತಿಯಲ್ಲಿ ಬಳಸಲ್ಪಡುತ್ತವೆಂದಾಯಿತು. ಇದರಿಂದ ಉಪಕರಣಗಳು ಬೇಗನೆ ಕೆಡುವ ಸಾಧ್ಯತೆಗಳಿವೆ.

ಇನ್ನು ಕೋಷ್ಟಕ ೩ರಿಂದ ತಿಳಿಯುವುದೇನೆಂದರೆ ನಿಯಂತ್ರಕವು 2W ರಿಂದ 5W ವರೆಗೆ ವಿದ್ಯುತ್ ಕಬಳಿಸುತ್ತದೆ. ನಾವು ಮುಟ್ಟಿದಾಗ ನಿಯಂತ್ರಕ ಬಿಸಿಯಾಗಿರುವದೇ ಇದಕ್ಕೆ ಸಾಕ್ಷಿ. ಟಿವಿ, ಫ್ರಿಜ್, ಹವಾನಿಯಂತ್ರಕ ಎಲ್ಲಾ ಸೇರಿ ಭಾರತದಲ್ಲಿ ೧೦ ಕೋಟಿ ನಿಯಂತ್ರಕಗಳಿದ್ದಿರಬಹುದು. ಪ್ರತಿ ನಿಯಂತ್ರಕ ಸರಾಸರಿ 2W ವಿದ್ಯುತ್ ಕಬಳಿಸುತ್ತದೆಂದರೆ ಒಟ್ಟು 200MW ಆಗುತ್ತದೆ. ಇದು ರಾಯಚೂರು ಥರ್ಮಲ್ ಕೇಂದ್ರದ ಒಂದು ಘಟಕಕ್ಕೆ ಸಮ. ಇದರ ಜೊತೆಗೆ ಪವರ್ ಫ್ಯಾಕ್ಟರ್[1] ಸಹ ಕಡಿಮೆಯಾಗಿದೆ. ಪವರ್ ಫ್ಯಾಕ್ಟರ್ ಕಡಿಮೆಯಾದಷ್ಟು ತಂತಿಗಳಲ್ಲಿ ವಿದ್ಯುತ್ ಸೋರಿಕೆಯನ್ನು ಹೆಚ್ಚಿಸುತ್ತದೆ. ಇದು ವಿದ್ಯುತ್‌ನ ವೃಥಾ ಪೋಲು.

ಮೇಲಿನ ಅಂಶಗಳು ತಾಂತ್ರಿಕ ವಿಷಯಕ್ಕೆ ಸಂಬಂಧಪಟ್ಟವು. ಇನ್ನು ವ್ಯಾವಹಾರಿಕವಾಗಿ ಯೋಚಿಸಿದರೂ ವೋಲ್ಟೇಜ್ ನಿಯಂತ್ರಕದ ಬಳಕೆ ಅರ್ಥಪೂರ್ಣ ಎನಿಸುವುದಿಲ್ಲ. ಮೊದಲನೆಯದಾಗಿ, ವಾರಂಟಿ ಕಾರ್ಡ್‌ನಲ್ಲಿ ನಿಯಂತ್ರಕ ಬಳಸುವ ಷರತ್ತು ಇರುವದಿಲ್ಲ, ಸಲಹೆ ಮಾತ್ರ ಇರಬಹುದು. ಆದ್ದರಿಂದ ವಾರಂಟಿ ಅವಧಿಯಲ್ಲಿ ನಿಯಂತ್ರಕದ ಅವಶ್ಯಕತೆಯೇ ಇಲ್ಲ. ಮತ್ತು ನಾವು ಖರೀದಿಸುವ ಉಪಕರಣಗಳ ಬೆಲೆ ಸುಮಾರು ರೂ. ೧೦,೦೦೦ ಇದ್ದರೆ ನಿಯಂತ್ರಕದ ಬೆಲೆ ಸುಮಾರು ರೂ. ೧,೦೦೦ ಇರುತ್ತದೆ. ಅಂದರೆ ಸುಮಾರು ಶೇಕಡ ೧೦ ಸುರಕ್ಷತೆಗಾಗಿ ವೆಚ್ಚವಾಯಿತು. ಇದು ವ್ಯಾವಹಾರಿಕವಾಗಿ ಜಾಣತನವಲ್ಲ. ಶೇಕಡಾ ೧೦ರಷ್ಟು ದೇಶದ ಸುರಕ್ಷತೆಗೂ ಬಳಸುವದಿಲ್ಲ. ಈ ಮಟ್ಟದ ವೆಚ್ಚ ಪ್ರಾಣಾಪಾಯವಿದ್ದಾಗ ಸರಿ. ನಮ್ಮ ಮನೆಗಿಂತ ಮನೆ ಕಾಯುವ ನಾಯಿಗೆ ಹೆಚ್ಚು ಬೆಲೆಯಾಗಬಾರದಲ್ಲವೆ ?

ಇನ್ನು ಸರಾಸರಿಯಾಗಿ ಸರಬರಾಜಾಗುವ ವೋಲ್ಟೇಜ್ ಸಮರ್ಪಕವಾಗಿಯೇ ಇರುತ್ತದೆ. ಆಗ ನಿಯಂತ್ರಕದ ಅವಶ್ಯಕತೆಯೇ ಇರುವದಿಲ್ಲ. ಅತಿ ಹೆಚ್ಚಿನ ವೋಲ್ಟೇಜ್ ಏರುಪೇರುಗಳಾದರೆ ವಿದ್ಯುತ್ ಕಂಪನಿಯನ್ನು ಬಳಕೆದಾರರ ನ್ಯಾಯಾಲಯದಲ್ಲಿ ಪ್ರಶ್ನಿಸಬಹುದು. ಗುಡುಗು ಸಿಡಿಲು

ಗೋಡೆಯ ಮೇಲಿರುವ ಸಾಕೆಟ್‌ನಿಂದ ನಿಯಂತ್ರಕದ ಒಳಗೆ




(ಚಿತ್ರ [೧])

ನಿಯಂತ್ರಕದ ಹೊರಗೆ

Fridge or T V ಉಪಕರಣ

(ಕೋಷ್ಟಕ [೧])

| Input Voltage | Output Voltage |
|---|---|
| 150 | 172 |
| 170 | 193 |
| 190 | 213 |
| 200 | 230 |
| 210 | 235 |
| 218 | 245 |
| 220 | 209 |
| 230 | 214 |
| 240 | 228 |
| 260 | 250 |
| 270 | 260 |

(ಕೋಷ್ಟಕ [೨])

| Input Voltage | Output Voltage |
|---|---|
| 60 | 75 |
| 90 | 110 |
| 120 | 140 |
| 150 | 180 |
| 180 | 205 |
| 200 | 225 |
| 220 | 225 |
| 240 | 240 |
| 250 | 230 |
| 260 | 240 |
| 290 | 252 |

(ಕೋಷ್ಟಕ [೩])

| Voltage | Current | Power | Power Factor |
|---|---|---|---|
| 160 V | 27 mA | 1.8 W | 0.42 |
| 230 V | 30 mA | 3.4 W | 0.49 |
| 260 V | 40 mA | 5.0 W | 0.48 |

ಮುಂತಾದ ಪರಿಸ್ಥಿತಿಯಲ್ಲಿ ಪ್ರಸರಿಸುವ ವಿದ್ಯುತ್‌ನಿಂದ ಯಾವುದೂ ಖಚಿತವಾಗಿ ರಕ್ಷಿಸುವದಿಲ್ಲ. ಆಗ ವಿದ್ಯುತ್ ಸರಬರಾಜನ್ನು ನಿಲ್ಲಿಸಿ ಕೇಬಲ್ ಜೋಡಣೆಯನ್ನು ತೆಗೆಯಬೇಕು. ಗುಡುಗು ಸಿಡಿಲು ಬಂದಾಗ ವೋಲ್ಟೇಜ್ ನಿಯಂತ್ರಕದ ಜೊತೆ ಉಪಕರಣಗಳೂ ಸುಟ್ಟ ಅನೇಕ ಘಟನೆಗಳನ್ನು ನಾನು ನೋಡಿದ್ದೇನೆ. ಆದರೆ ಇಂತಹ ಸಂಭವನೀಯತೆ (ಪ್ರೊಬ್ಯಾಬಿಲಿಟಿ)ಗಳು ತುಂಬಾ ವಿರಳ. ಒಂದು ವೇಳೆ ಉಪಕರಣಗಳು ಸುಟ್ಟರೆ ವೋಲ್ಟೇಜ್ ನಿಯಂತ್ರಕಕ್ಕ ಮಾತ್ರ ಗ್ಯಾರಂಟಿ ಕೊಡುತ್ತಾರೆಯೇ ಹೊರತು ಅದಕ್ಕೆ ಜೋಡಿಸಿರುವ ಉಪಕರಣಕ್ಕಲ್ಲ. ಅಂದರೆ ಗ್ಯಾರಂಟಿಯ ಅರ್ಥವೇನು ? ನಿಯಂತ್ರಕ ಖರೀದಿಸುವ ಬದಲು ಗೃಹ ಸುರಕ್ಷತ ವಿಮೆ ಮಾಡಿಸುವದು ಒಳ್ಳೆಯದು. ಅದು ವಿದ್ಯುತ್ ಏರುಪೇರು, ಗುಡುಗು-ಸಿಡಿಲು, ಬೆಂಕಿ ಅಪಘಾತ, ನೆರೆ ಹಾವಳಿ ಮತ್ತು ಕಳ್ಳತನ 'ದಿಂದಲೂ ರಕ್ಷಿಸುತ್ತದೆ.

ಮೇಲಿನ ಎಲ್ಲಾ ವಿಷಯವನ್ನು ಕ್ರೋಡೀಕರಿಸಿ ಹೇಳುವದಾದರೆ ನಿಯಂತ್ರಕದ ಬಳಕೆ ಅರ್ಥವೇ ಇಲ್ಲದ್ದು. ಕಳೆದ ೨೦ ವರ್ಷಗಳಿಂದ ವೋಲ್ಟೇಜ್ ನಿಯಂತ್ರಕವಿಲ್ಲದೆ ನಾನು ಎಲ್ಲಾ ಉಪಕರಣಗಳನ್ನು ಬಳಸುತ್ತಿದ್ದೇನೆ.


**ಎಸ್. ಎಂ. ಗುಡದೂರು**
ಮನೆ ನಂ. ಎಲ್ - ೬, ೬೩ ಸೆಕ್ಟರ್, ನವನಗರ, ಬಾಗಲಕೋಟೆ - ೫೮೭೧೦೩


*೫೦ನೇ ಪುಟದಿಂದ (ಕನ್ನಡ ವೈದ್ಯ ಲೇಖಕರು...)*

೪. ಅಲ್ಲಲ್ಲಿ ಚಿತ್ರ - ಸೋದಾಹರಣೆಯೊಂದಿಗೆ ಸ್ಪಷ್ಟತೆ ಇರಬೇಕು.

೫. ಔಷಧಪಟ್ಟಿ, ಸೇವಿಸುವ ಕ್ರಮಗಳು ಖಂಡಿತ ಇರಬಾರದು. ಅವು ಅವಾಂತರ ಗಳನ್ನು ಹುಟ್ಟಿಸುತ್ತವೆ. ಲೇಖಕರ ವಿಳಾಸ ನೀಡಿ ಅನುಮಾನ ಸಂದೇಹಗಳಿಗೆ ಸೂಕ್ತ ಉತ್ತರ ನೀಡಬೇಕು.

೬. ಲೇಖನದಲ್ಲಿ ಖಾಸಗಿ ವೈದ್ಯವೃತ್ತಿಯ ಪ್ರಚಾರವಿರಕೂಡದು.

ಮುಖ್ಯವಾಗಿ ವೈದ್ಯ ಲೇಖಕನಿಗೆ ಬೇಕಾದದ್ದು ಪ್ರತಿಸ್ಪಂದನದ ವ್ಯವಸ್ಥೆ. ಓದುಗನಿಂದ ಪ್ರತಿಕ್ರಿಯೆಗಳು, ಇದೊಂದು ಬೆಳವಣಿಗೆಗೆ ಸಹಾಯಕವಾಗುವ ಪ್ರಕ್ರಿಯೆ. ಪ್ರತಿಕ್ರಿಯೆ ಹಾಗೂ ಅಭಿಪ್ರಾಯಗಳು ಗೌರವ ನೀಡುವ ಮನೋವೃತ್ತಿಯ ಸಂಕೇತ. ಇದರಲ್ಲಿ ಸಂಪಾದಕರ ಸಂವಹನ ಪಾತ್ರ ಮಹತ್ವದ್ದು. ಮುಕ್ತಚರ್ಚೆಗೆ ಅವಕಾಶ ಕಲ್ಪಿಸುವ ವೇದಿಕೆಗಳಲ್ಲಿ ಮಾರ್ಗದರ್ಶನ ಖಂಡಿತ ದೊರಕುತ್ತದೆ. ಇದು ವೈದ್ಯಕೀಯ ಮಹಾ ವಿದ್ಯಾಲಯಗಳಲ್ಲಿ ವ್ಯವಸ್ಥೆಯಾಗಬೇಕು.

ಶ್ರೀ ಬರಗೂರು ರಾಮಚಂದ್ರಪ್ಪನವರು ಅಧ್ಯಕ್ಷರಾಗಿದ್ದಾಗ ಕನ್ನಡ ಅಭಿವೃದ್ಧಿ ಪ್ರಾಧಿಕಾರವು ನಾಡಿನ ವೈದ್ಯಕೀಯ ಮಹಾವಿದ್ಯಾಲಯದಲ್ಲಿ ಕನ್ನಡ ಬಲ್ಲ ವಿದ್ಯಾರ್ಥಿಗಳಿಗೆ ಕನ್ನಡ ಸಂಸ್ಕೃತಿಯ ಬೋಧನೆ, ಕನ್ನಡೇತರ ವಿದ್ಯಾರ್ಥಿಗಳ ಕನ್ನಡ ಕಲಿಕೆಗೆ ಯೋಜನೆಯನ್ನು ಆರಂಭಿಸಲು ಸೂಚಿಸಿದರು. ಅದನ್ನು ಕಡ್ಡಾಯವಾಗಿ ಮಾಡಲು ರಾಜೀವ ಗಾಂಧಿ ಆರೋಗ್ಯ ವಿಶ್ವವಿದ್ಯಾಲಯವು ಅನುಷ್ಠಾನಕ್ಕೆ ಎಲ್ಲ ವೈದ್ಯಕೀಯ ಕಾಲೇಜುಗಳಿಗೆ ನಿರ್ದೇಶಿಸಿದ ಒಂದೆರಡು ವೈದ್ಯ ಕಾಲೇಜುಗಳನ್ನು ಬಿಟ್ಟರೆ ಎಲ್ಲಿಯೂ ಅನುಷ್ಠಾನಗೊಳ್ಳಲಿಲ್ಲ. ಈ ಲೇಖಕನು ಕನ್ನಡ ವಿಭಾಗವನ್ನು ಸ್ಥಾಪಿಸಿದಾಗ ಕನ್ನಡ ಕಲಿಕೆಗೆ ಬಂದ ಪ್ರೋತ್ಸಾಹ ಅಷ್ಟಿಷ್ಟಲ್ಲ. ವೈದ್ಯ ವಿದ್ಯಾರ್ಥಿಗಳೇ ಕನ್ನಡದಲ್ಲಿ ಹಲವಾರು ವೈದ್ಯಕೀಯ ವಿಷಯಗಳನ್ನು ಬರೆದರು.

ಆದರೆ ಎಲ್ಲ ಶಿಸ್ತುಗಳ ವೈದ್ಯಕೀಯ ಕಾಲೇಜುಗಳಲ್ಲಿ ಕನ್ನಡ ಕಲಿಕೆಯ ಅನುಷ್ಠಾನ ಜಾರಿಗೆ ಬಂದದ್ದೇ ಆದರೆ ವೈದ್ಯ ಸಾಹಿತ್ಯಕ್ಕೆ ಆನೆ ಬಲ ಬರುತ್ತಿತ್ತು. ದುರ್ದೈವದಿಂದ ಅದು ಆಗಲಿಲ್ಲ. ಆಲೋಪತಿ - ಆಯುರ್ವೇದ - ಹೋಮಿಯೋಪತಿ ಹಾಗೂ ಯುನಾನಿ ವೈದ್ಯರುಗಳು ಕೂಡಿಯೇ ಸಮನ್ವಯ ದೃಷ್ಟಿಯಲ್ಲಿ ಪ್ರಸ್ತುತ ವೈದ್ಯ ಲೇಖಕರು, ಪ್ರಕಾಶಕರು ಎದುರಿಸುತ್ತಿರುವ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳಬೇಕಾಗಿದೆ.

ಈಗಂತೂ ಇಂದಿನ ಸಂಕ್ರಮಣ ಕಾಲದಲ್ಲಿ ಜನಸಾಮಾನ್ಯರಿಗೆ ವೈದ್ಯಕೀಯ ವಿಷಯಗಳನ್ನು ತಿಳಿದುಕೊಳ್ಳುವ ಹಕ್ಕಿದೆ. ಅವರವರ ಭಾಷೆಯಲ್ಲಿ ಕೆಲ ಪ್ರಾಥಮಿಕ ತಿಳುವಳಿಕೆಯನ್ನು ಜನರಿಗೆ ನೀಡುವದು ವೈದ್ಯರ ಆದ್ಯ ಕರ್ತವ್ಯ. ಗ್ರಾಹಕ ರಕ್ಷಣಾ ಕಾಯಿದೆ ಗ್ರಾಹಕನನ್ನು ರಕ್ಷಿಸುತ್ತಿದೆ. ಅಂದ ಮೇಲೆ ಸರಕಾರ, ಅಕಾಡೆಮಿಗಳು, ಸ್ವಯಂ ಸೇವಾಸಂಸ್ಥೆಗಳು ಜನಜೀವನಕ್ಕೆ ಅಗತ್ಯವಾದ ವೈದ್ಯಕೀಯ ಸಾಹಿತ್ಯ ಪ್ರಕಟಿಸುವಲ್ಲಿ ಮುಂದೆ ಬಂದರೆ – ಜಾಗೃತಿ ಉಂಟಾಗಿ ತಾವಾಗಿಯೇ ಆರೋಗ್ಯ ಸಮಸ್ಯೆಗಳು ಸಾಕಷ್ಟು ನಿವಾರಣೆಯಾಗುವವು. ವೈದ್ಯ (ಲೇಖಕ) ಸಾಹಿತ್ಯ ಕನ್ನಡದಲ್ಲಿ ಬದುಕಬೇಕಾದರೆ ವೈದ್ಯಕೀಯ ಸಾಹಿತ್ಯ ಕೃಷಿ ಸಮೃದ್ಧಗೊಳ್ಳುವದು ಅಗತ್ಯ.


**ಡಾ|| ವಸಂತ ಅ. ಕುಲಕರ್ಣಿ**
ಪ್ರಾಧ್ಯಾಪಕರು ಹಾಗೂ ಮುಖ್ಯಸ್ಥರು, ರಾಜರಾಜೇಶ್ವರಿ ಮೆಡಿಕಲ್ ಕಾಲೇಜ್
೧೯೯೮, ಒಂದನೇ ಮಹಡಿ, ೬ನೇ 'ಬಿ' ಕ್ರಾಸ್, ೧ನೇ 'ಬಿ' ಮೈನ್, ಕೆಂಗೇರಿ ಉಪನಗರ, ಬೆಂಗಳೂರು - ೬೦

# ವಾಸ್ತುಶಾಸ್ತ್ರ ಕೃತಿಗಳಲ್ಲಿ ಪರಿಸರ ಪ್ರಜ್ಞೆ

ವಾಸ್ತುಶಾಸ್ತ್ರವೆಂದರೆ ದೇಹ ಮತ್ತು ಬುದ್ಧಿಯನ್ನು ಸಂಘಟನಾತ್ಮಕ ನೆಲೆಯಲ್ಲಿ ಸರ್ಗ ಸಹಜವಾದ ವಾತಾವರಣಕ್ಕೆ ಹೊಂದಿಸಿಕೊಳ್ಳುವುದು ಎಂದರ್ಥ. ಮನುಷ್ಯ ೀಹದ ಜೈವಿಕ ರಚನೆ, ಆರೋಗ್ಯ, ವಿಜ್ಞಾನ, ಜ್ಯೋತಿಷ್ಯ, ಮನಶ್ಶಾಸ್ತ್ರ, ೂ-ಜೀವಶಾಸ್ತ್ರ ಮತ್ತು ವಾಸ್ತು ಶಾಸ್ತ್ರಗಳು ಪರಸ್ಪರ ಅಂತಃಸಂಬಂಧವುಳ್ಳಂಥವು. ಈ ನ್ನೆಲೆಯಲ್ಲಿ ವಾಸ್ತುಶಾಸ್ತ್ರ ಎಂದರೆ ಅದೊಂದು ಬಹುಶಿಸ್ತೀಯ ಜ್ಞಾನ ಸಂವೇದನೆಗಳುಳ್ಳ ೇತ್ರ ಎಂದು ಹೇಳಬಹುದು. ಏನೂ ಇಲ್ಲದ ಬಯಲಲ್ಲಿ ದಿಕ್ಕುಗಳನ್ನು ಒಳಹೊರಗು ಳನ್ನು ಮೇಲು ಕೆಳಗುಗಳನ್ನು ಗುರುತಿಸಿ ಮನೆ ಕಟ್ಟುತ್ತೇವೆ. ಈ ಕಟ್ಟುವ ಕೆಲಸವೇ ನಮ್ಮ ಾಗರಿಕತೆಯ ಪ್ರಥಮ ಹೆಜ್ಜೆಯಾಗುತ್ತದೆ. ಮನೆ ನಾಗರಿಕತೆಯ ಒಂದು ಸಜೀವ ೂಪ. ಈ ಸಜೀವ ರೂಪ ಉಸಿರಾಡಬೇಕಾದರೆ ಅದಕ್ಕೆ ಕಿಟಕಿ ಬಾಗಿಲುಗಳ ಗತ್ಯವಿರುವಂತೆ ವಾಸಯೋಗ್ಯವಾದ ಮನಃಸ್ಥಿತಿಯೂ ಬಹುಮುಖ್ಯ. ಚರಿತ್ರೆಯಲ್ಲಿ ುಹಿಳೆಯರು ಉತ್ಪಾದನಾಶೀಲರೂ ಸೃಜನಶೀಲರೂ ಆಗಿದ್ದ ಬಗ್ಗೆ ಢಾಳಾದ ಮಾಹಿತಿ ಗುತ್ತವೆ. ಸಂಸ್ಕೃತಿಯಲ್ಲಿ ಮನೆ ಕಟ್ಟುವ ಕೆಲಸ ಗೃಹಿಣಿಯರದ್ದಾಗಿತ್ತು ಎನ್ನುವುದು ಾಸ್ತುಶಾಸ್ತ್ರಕ್ಕೆ ಹೊಸ ಆಯಾಮವನ್ನು ನೀಡುವಂಥದ್ದು. ಕಾರಣ ವಾಸ್ತು ನಿರ್ಮಾಣಕ್ಕೆ ೇಕಾದ ಮೂಲ ಪರಿಕರವೇ ಭೂಮಿ. ಭೂಮಿ ನಮ್ಮ ಸಂಸ್ಕೃತಿಯಲ್ಲಿ ತಾಯಿಯ ್ರೀರೂಪವನ್ನು ತಾಳಿರುವುದು ಗಮನಾರ್ಹ. ಇಂಥ ಭೂಮಿಯನ್ನು ಗೃಹನಿರ್ಮಾಣದ ೊತ್ತಿನಲ್ಲಿ ವಾಸ್ತುಪುರುಷ ಎಂದು ಪುರುಷಪ್ರಧಾನವಾಗಿ ವ್ಯಾಖ್ಯಾನಿಸಿದ ನೆಲೆಗಳು ಚರ್ಚಾರ್ಹ ಸಂಗತಿಗಳು. ಏನೇ ಇರಲಿ ಆಧುನಿಕ ಆವಿಷ್ಕಾರಗಳ ಮಧ್ಯೆ ದುಕುತ್ತಿರುವ ನಾವು ಚರಿತ್ರೆಯ ಒಮ್ಮುಖಿ ಚಿಂತನೆಗಳಿಗಿಂತ ಸಂಸ್ಕೃತಿಯೊಳಗಿರುವ ಹುಮುಖಿಯಾದ ಸಂವೇದನೆಗಳನ್ನು ಅರಿಯುವುದು ಮುಖ್ಯವಾಗಿದೆ.

ಭಾರತೀಯ ವಾಸ್ತುಶಾಸ್ತ್ರದ ಪ್ರಮುಖ ಗ್ರಂಥಗಳನ್ನು ಮತ್ತು ದ್ರಷ್ಟಾರರ ಮಾತುಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದಾಗ ಅವು ಗೃಹವಾಸ್ತುವನ್ನು ಒಂದು ್ರಿಯಾಶೀಲ ಮತ್ತು ನಿಸರ್ಗಮುಖಿಯಾದ ನೆಲೆಗಳಿಂದ ಗ್ರಹಿಸಿದ್ದು ಸ್ಪಷ್ಟವಾಗುತ್ತದೆ. ಅಂದರೆ ವಾಸ್ತುವನ್ನು ಒಂದು ಜಡ ಪರಿಕಲ್ಪನೆಯನ್ನಾಗಿ ಗ್ರಹಿಸದೆ ಸಂಚಲನಾತ್ಮಕ ಪರಿಕಲ್ಪನೆಯನ್ನಾಗಿ ಗ್ರಹಿಸಿದ್ದು ಎದ್ದುಕಾಣುತ್ತದೆ. ವಿಚಿತ್ರವೆಂದರೆ ಆಧುನಿಕ ಸಂದರ್ಭದಲ್ಲಿನ ವಾಸ್ತುಶಾಸ್ತ್ರೀಯ ಅಧ್ಯಯನಗಳು ಮತ್ತು ಆಲೋಚನೆಗಳು ಮನೆಯನ್ನು ಒಂದು ಶುಷ್ಕ ತಾಂತ್ರಿಕವಾದ ಜಡ ಪರಿಕಲ್ಪನೆಯನ್ನಾಗಿ ಪರಿಭಾವಿಸಿದ್ದು ಎದ್ದುಕಾಣುತ್ತದೆ. ಇಲ್ಲಿನ ಮನೆ ಕೇವಲ ನಾಲ್ಕು ಗೋಡೆಗಳ ಆಡಂಬರವಾಗಿ, ಒಂದು ಫ್ಯಾಷನ್ ಆಗಿ ಕಾಣುತ್ತದೆ. ರಾಜಕೀಯ ಅಸ್ಥಿರತೆ, ವೈಚಾರಿಕತೆಯ ಅಭಾವ, ಜೀವಪರ ಮೌಲ್ಯಗಳ ಪತನ, ಆತ್ಮವಿಶ್ವಾಸದ ಕೊರತೆ, ದಿಢೀರ್ ಶ್ರೀಮಂತಿಕೆ, ಮಾನಸಿಕ ತೊಳಲಾಟಗಳಂತಹ ಸಂಗತಿಗಳು ನವ ಶ್ರೀಮಂತವರ್ಗದಲ್ಲಿ ಈ ಶಾಸ್ತ್ರವನ್ನು

ವಾಸ್ತುಶಾಸ್ತ್ರದ ಹಲವು ಸಂಗತಿಗಳು ತುಂಬ ವೈಚಾರಿಕವಾದಂಥವು. ಪೂರ್ವದಿಕ್ಕಿನಲ್ಲಿ ಅರಳಿ, ಆಲ, ಬಸರಿ ಇಂಥ ಮರಗಳಿರಬೇಕು; ವಾಯವ್ಯ ಮತ್ತು ಈಶಾನ್ಯದಲ್ಲಿ ಹಲಸು-ಮಾವು ತೆಂಗುಗಳಂಥ ಫಲವಂತಿಕೆ ಮರಗಳಿರಬೇಕು ; ದಕ್ಷಿಣ-ಪಶ್ಚಿಮ ಹಾಗೂ ನೈಋತ್ಯದಲ್ಲಿ ಮುಳ್ಳುಗಳಿಂದ ಕೂಡಿದ ಪೊದೆಗಳಂಥ ಮರಗಳಿರಬೇಕು ಎಂದು ವಾಸ್ತುಗ್ರಂಥಗಳು ಹೇಳುತ್ತವೆ. ಕಾರಣ ಪೂರ್ವದಲ್ಲಿರುವ ಹಾಲು ಪ್ರಧಾನವಾದ ಅರಳಿ, ಆಲ, ಬಸರಿಗಳಂಥ ಮೃದುವಾದ ಬೃಹತ್ ಸ್ವರೂಪದ ಮರಗಳು ಸೂರ್ಯನಿಂದ ಹೊರಸೂಸುವ ಅಲ್ಟ್ರಾವಯಲೆಟ್ ಕಿರಣಗಳ ಪ್ರಯೋಜನಕ್ಕೆ ಕಾರಣವಾಗುತ್ತವೆ. ಹಾಗೆ ವಾಯವ್ಯ ಮತ್ತು ಈಶಾನ್ಯದಲ್ಲಿ ಫಲಭರಿತ ಮರಗಳಿರಬೇಕು ಎನ್ನುವ ವಿಷಯ ಸೂರ್ಯನ ಪ್ರಖರ ಬೆಳಕಿನಿಂದ, ಪ್ರಚಂಡ ಮಾರುತಗಳಿಂದ ರಕ್ಷಣೆ ದೊರೆಯುತ್ತದೆಂಬ ಚಿಂತನೆಯಿಂದ ಕೂಡಿದೆ. ಕಾರಣ ಭೂಮಿಯ ಕಾಂತರೇಖೆಗಳು ದಕ್ಷಿಣೋತ್ತರವಾಗಿರುವುದರಿಂದ ಭೂಮಿಯು ದಕ್ಷಿಣ ಗೋಳದಲ್ಲಿ ೨೩ ಡಿಗ್ರಿ ವಾಲಿಕೊಂಡು ತಿರುಗುವುದರಿಂದ ಈಶಾನ್ಯ ದಿಕ್ಕು ಸ್ಥಿರದಿಕ್ಕು ಎನಿಸಿಕೊಂಡು ಮಹತ್ವ ಪಡೆದಿದೆ. ಉತ್ತರಗೋಳಾರ್ಧದಲ್ಲಿರುವ ನಮಗೆ ನೈಋತ್ಯ ಮಾನ್ಸೂನುಗಳ ಅಬ್ಬರದಿಂದ ಸಂರಕ್ಷಿಸಿಕೊಳ್ಳಲು ಮಧ್ಯಾಹ್ನದ ತಾಪಮಾನವನ್ನು ನಿಯಂತ್ರಿಸಲು ಎತ್ತರವಾದ ಮತ್ತು ಪೊದೆ ಸ್ವರೂಪದ ಗಿಡಮರಗಳನ್ನು ಬೆಳೆಸಲು ವಾಸ್ತು ಹೇಳುತ್ತದೆ. ಇದರಿಂದ ಮನೆ ಮತ್ತು ಮನೆಯ ಬೇರೆ ಭಾಗಗಳಲ್ಲಿರುವ ಫಲಭರಿತ ಮರಗಳಿಗೆ ರಕ್ಷಣೆ ಕೂಡ ದೊರೆಯುತ್ತದೆ ಎನ್ನುವ ಸದಾಶಯವನ್ನು ಇಲ್ಲಿ ಕಾಣಬಹುದಾಗಿದೆ.



ಡಾ|| ವೀರೇಶ ಬಡಿಗೇರ



ಜನಪ್ರಿಯಗೊಳಿಸುತ್ತಿವೆ. ಅದೇ ರೀತಿ ನಾಯಿಕೊಡೆಗಳಂತೆ ವಾಸ್ತು ಪ್ರವೀಣರೆನ್ನುವ ಖೋಟಾ ಶಾಸ್ತ್ರಜ್ಞರನ್ನು ಪೋಷಿಸಿ ಬೆಳೆಸುತ್ತಿವೆ. ಗಳಿಕೆಯ ಮಾಧ್ಯಮವಾಗಿ ಹಿಂದೆಂದೂ ಕಾಣದ ಜನಪ್ರಿಯತೆಯನ್ನು ವಾಸ್ತುಶಾಸ್ತ್ರ ಗಳಿಸುತ್ತಿದೆ. ಜೀವಪರವಾದ ದೇಸೀ ಜ್ಞಾನ ಪರಂಪರೆಯೊಂದನ್ನು ಜೀವ ವಿರೋಧಿ ನೆಲೆಯಾಗಿ ಹಾಗೂ ಶೋಷಣೆಯ ಮಾಧ್ಯಮವಾಗಿ ಬಳಸಲಾಗುತ್ತಿದೆ.

ಇಂಥ ವಾಸ್ತುಶಾಸ್ತ್ರ ಕೃತಿಗಳಲ್ಲಿ ಮೂಡಿಬಂದ ಪರಿಸರ ಕಾಳಜಿಯ ನೆಲೆಗಳನ್ನು ವಿಶ್ಲೇಷಿಸಿಕೊಳ್ಳುವುದು ಈ ಲೇಖನದ ಮುಖ್ಯ ಉದ್ದೇಶವಾಗಿದೆ.

ವಿಶಾಲ ಭೂ ಭಾಗವನ್ನು ಹೊಂದಿರುವ ಭಾರತದ ಭೌಗೋಳಿಕ ಪರಿಸರದಲ್ಲಿನ ಚಿತ್ತಾರಯುತವಾದ ಪರ್ವತ ಶ್ರೇಣಿಗಳು ವೈವಿಧ್ಯಮಯ ಗಿಡಮರಗಳಿಂದ ತುಂಬಿವೆ. ಪ್ರಾಚೀನ ಕಾಲದ ವಾಸ್ತುಶಿಲ್ಪಕ್ಕೆ ಕಟ್ಟಿಗೆಯೇ ಪ್ರಮುಖ ಆಕರವಾಗಿದ್ದನ್ನು ಕಾಣುತ್ತೇವೆ. ಹೀಗಾಗಿ ದಾರುಪ್ರತಿಮಾಶಾಸ್ತ್ರವೆಂಬ ಶಾಖೆಯೇ ನಮ್ಮಲ್ಲಿ ಬೆಳೆದುಬಂದಿದೆ. ಪ್ರಾಚೀನ ಮಾನವನಿಗೂ ನಿಸರ್ಗದ ಜೀವ ವೈವಿಧ್ಯಕ್ಕೂ ಒಂದು ನಿಕಟ ಸಂಬಂಧವಿದ್ದ ಸಂದರ್ಭಗಳನ್ನು ಕಾಣುತ್ತೇವೆ. ನಿಸರ್ಗ ಮತ್ತು ಅದರ ಫಲಿತಗಳು ಮನುಷ್ಯ ಅಹಂಕಾರದ ಉಪಭೋಗದ ವಸ್ತುಗಳಾಗದೆ ಪ್ರತ್ಯುತ್ಪನ್ನ ಹಾಗೂ ಜೀವ ವಿಕಾಸ ಕ್ರಿಯೆಯ ಭಾಗಗಳಾಗಿ ಬೆಳೆದುಬಂದವು. ಮಾನವನ ವಿವೇಕ ಹಾಗೂ ಜೈವಿಕ ವಿಕಾಸಗಳು ಒಂದಕ್ಕೊಂದು ಪೂರಕವಾಗಿ ಬೆಳೆದುಬಂದವು. ಇಂಥ ನಡವಳಿಕೆಗಳು ಮನುಷ್ಯನಿಂದ ರೂಪಗೊಂಡ ಶಾಸ್ತ್ರಗ್ರಂಥಗಳಲ್ಲೂ ನೆಲೆ ಪಡೆದವು. ಆದರೆ ಕಾಲಾಂತರದಲ್ಲಿ ಅವು ತನ್ನ ಸಹಜ ಸ್ವಭಾವದಿಂದ ವಿಕೃತಗೊಂಡು ಶೋಷಣೆಯ ಮಾಧ್ಯಮಗಳಾಗಿ ನಿಷೇಧಾತ್ಮಕ ಸಂಗತಿಗಳಾಗಿ ಸ್ಥಾಯಿಯಾದವು. ಇದಕ್ಕೆ ವಾಸ್ತುಶಾಸ್ತ್ರದಲ್ಲಿ ಗಿಡಮರಗಳ ಬಳಕೆ ಬಗ್ಗೆ ಇರುವ ಉಲ್ಲೇಖಗಳನ್ನು ನಿದರ್ಶನವಾಗಿ ನೀಡಬಹುದು.

**ಮರ ಕಡಿವ ವಿಧಾನಗಳು**

ಸನತ್ಕುಮಾರ ಮತ್ತು ವಿಶ್ವಕರ್ಮ ಸಂಪ್ರದಾಯದ ವಾಸ್ತುಶಾಸ್ತ್ರ ಕೃತಿಗಳಲ್ಲಿ 'ಮನೆಗೆ ಮರಕಡಿವ ಲಕ್ಷಣ' ಎನ್ನುವ ಅಧ್ಯಾಯವಿದೆ. ಇದರಲ್ಲಿ ಮನೆಗೆ ಯಾವ ಜಾತಿಯ ಮರ ಬಳಸಬೇಕು, ಎಂಥ ಮರಗಳನ್ನು ಕಡಿಯಬೇಕು ಎನ್ನುವ ಸಂಗತಿಗಳನ್ನು ತುಂಬ ಸೊಗಸಾಗಿ ವಿವರಿಸಲಾಗಿದೆ.

*ನಕ್ಷತ್ರ ಭೃತ್ಯವರ್ಗಂ ಚ ಪೂಜಯಿತ್ವಾ ಯಥಾವಿಧಿಂ*
*ಇಷ್ಟದೈವಂ ಪಿತೃದೇವಾನ್ ಗಣಪತಿರವಿಂ*
*ಚಂದ್ರಮುಖ್ಯಶ್ಚನಂಗಂ। ಧೈಃ। ಪುಷ್ಪಂನೈವೇದ್ಯರಕ್ಷಿಪಂ।*

ಮರವ ಕಡಿವ ಮೊದಲು ಮನೆ ನಿರ್ಮಿತಿಯಲ್ಲಿ ಪ್ರಧಾನ ಪಾತ್ರಧಾರಿಯಾದ ಬಡಗಿಯನ್ನು, ಜೋಯಿಷರನ್ನು, ಇಷ್ಟದೇವರುಗಳನ್ನು, ನಾಗರನ್ನು, ಗಣಪತಿ





ಯನ್ನು, ಸೂರ್ಯ-ಚಂದ್ರರನ್ನು, ಪುಷ್ಪ ದೀಪ ಧೂಪ ನೈವೇದ್ಯಗಳಿಂದ ಆರಾಧಿಸುವುದು, ಪೂಜೆಯನ್ನು ಮಾಡುವುದು, ನಂತರ ಪಡುವ ಜಾವದ ಹೊತ್ತಿಗೆ ಮನೆಯ ಯಜಮಾನನನ್ನು ಮರಕಡಿಯಲು ಕಳಿಸಬೇಕು ಎಂದು ಹೇಳಲಾಗಿದೆ.

ಮೇಲ್ಕಾಣಿಸಿದ ಪದ್ಯದಲ್ಲಿ ಉಲ್ಲೇಖಗೊಂಡ ದೇವತೆಗಳೆಲ್ಲರೂ ನಿಸರ್ಗಸಮ್ಮಿತ ವಾದಂಥ ದೇವತೆಗಳು. ನಿಸರ್ಗದ ಚಲನವಲನಗಳಿಗೆ ಒಂದಿಲ್ಲೊಂದು ರೀತಿ ಸಂಬಂಧಿಸಿದವರು. ಇವರ್ಯಾರು ನಾಡದೇವತೆಗಳಲ್ಲ. ಇನ್ನು ಬಡಗಿ ಮತ್ತು ಜೋಯಿಷರು ಮನೆಯ ತಾಂತ್ರಿಕ ಕೆಲಸಗಳಿಗೆ ನಿಯಾಮಕರು. ನಿಸರ್ಗದ ಕ್ರಿಯಾಶೀಲ ಮಗ್ಗಲುಗಳನ್ನು ಇಲ್ಲಿನ ಪ್ರತಿಯೊಂದು ವಸ್ತುವು ಸಂಕೇತಿಸುತ್ತದೆ. ಇನ್ನು ಮನೆಯ ಯಜಮಾನನೇ ಗಿಡ ಕಡಿಯಲು ಹೋಗಬೇಕೆನ್ನುವ ಮಾತನ್ನು ಗಮನಿಸಬೇಕು. ವಾಸ್ತುಶಾಸ್ತ್ರದ ಪ್ರಧಾನ ಕಾಳಜಿ ಮನೆ ನಿರ್ಮಾಣದಲ್ಲಿ ಅಲ್ಲಿ ಬದುಕುವ ವ್ಯಕ್ತಿಯನ್ನು ಅಂದರೆ ಮನೆ ಯಜಮಾನನನ್ನು ಕೇಂದ್ರವಾಗಿಸ ಬೇಕೆನ್ನುವುದಾಗಿದೆ. ಮನೆಯ ಆಯವ್ಯಯವನ್ನು ಮಾಲಿಕನ ಬಲಗೈ ಅಳತೆಯಿಂದ ನಿರ್ಧರಿಸಲಾಗುತ್ತದೆ. 'ಹಾಸಿಗೆ ಇದ್ದಷ್ಟು ಕಾಲು ಚಾಚಬೇಕು' ಎನ್ನುವ ಜನಪದ ಗಾದೆಯಂತೆ ಮಾಲಿಕನ ಶಕ್ತ್ಯಾನುಸಾರ ಆತನ ವಾಸದ ಮನೆಯನ್ನು ನಿರ್ಮಿಸಬೇಕೆಂದು ವಾಸ್ತುಶಾಸ್ತ್ರ ಹೇಳುತ್ತದೆ. ಅಂದರೆ ಮನೆ ನಿರ್ಮಾಣ ಎನ್ನುವುದು ಯಾರೋ ಹೇಗೋ ಕಟ್ಟಿ ನಿಲ್ಲಿಸುವ ನಿರ್ಭಾವುಕ ಬೃಹತ್ ಸೌಧವಲ್ಲ. ಅದು ಆ ಯಜಮಾನನ ಆರ್ಥಿಕ ಹಾಗೂ ಕೌಟುಂಬಿಕ ಸ್ಥಿತಿಗಳ ಮೇಲೆ ನಿರ್ಮಾಣವಾಗುವ ಭಾವನಾತ್ಮಕ ಹಾಗೂ ಜೀವಂತ ಸದನ ಎನ್ನುವ ಅರ್ಥ ಗಮನಾರ್ಹವಾದುದು.

**ಆಯುಧಗಳ ಬಳಕೆಯ ರೀತಿ**

ಹೀಗೆ ಪೂಜೆಗೊಂಡ ಮರ ಕಡಿಯುವ ರೀತಿಯು ಇಂದಿನ ನಾಗರಿಕ ಬದುಕಿಗೆ ಒಳ್ಳೆಯ ನೀತಿಪಾಠಗಳಾಗಿವೆ.

*ಪ್ರಾತರುತ್ಥಾಯ ತಂ ರುಕ್ಷಂ ಜಲಸಂಪ್ರೋಕ್ಷ್ಯ ಪೂರ್ವಕಾಃ।*

ಇತ್ಯಾದಿ ಇನ್ನೂ ಮೂರು ಪಾದಗಳಲ್ಲಿ ಗ್ರಂಥವು ಈ ವಿಷಯವನ್ನು ವಿಶದವಾಗಿ ಮತ್ತು ಸಮಗ್ರವಾಗಿ ನಿರ್ದೇಶಿಸಿದೆ.

ಕಡಿಯಲು ನಿರ್ಧರಿಸಿದ ಮರನ ಉದಯದಲೆದ್ದು ಆ ಮರದ ಮೂಡಲು ಬಡಗಲು ಹರಿದ ಬೇರುಗಳಿಗೆ ಉದಕವಂ ತಳೆದು ಜೇನುತುಪ್ಪವನ್ನು ತೊಡೆಯಬೇಕು. ನಂತರ ಮರ ಕಡಿವ ಕೊಡಲಿ ಬಾಚಿಗಳನ್ನು ಉದಕದಿಂದ ತೊಳೆದು ಜೇನುತುಪ್ಪವನ್ನು ತೊಡೆದು ಅವುಗಳ ಸಮೇತ ಮರಕ್ಕೆ ಪ್ರದಕ್ಷಿಣವನ್ನು ಹಾಕಬೇಕು. ನಂತರ ಮನಸ್ಸು ಬಂದ ಕಡೆ ಹೋಗಬೇಕು. ಆಮೇಲೆ ಕೃಷ್ಣಪಕ್ಷದ ತಿಥಿಯಲ್ಲಿ ಪಂಚಮಿಯಲ್ಲಿ ನವಮಿಯಲ್ಲಿ ರೋಹಿಣಿ ನಕ್ಷತ್ರದಲ್ಲಿ ಕಡಿದ ಹೂ ಬಳ್ಳಿ ಮರ ಹುಳಿಯಲಾರದು ಎಂದು ಶಾಸ್ತ್ರ ಹೇಳುತ್ತದೆ.

ಇಲ್ಲಿ ಗಮನಿಸಬೇಕಾದ ಸಂಗತಿಯೆಂದರೆ ಇಡೀ ನಾಗರಿಕ ಮನುಷ್ಯ ತನ್ನ ಅಹಂಕಾರದಿಂದ ತನ್ನ ಉಪಭೋಗಕ್ಕಾಗಿ ಕಾಡನ್ನೇ ಸರ್ವನಾಶ ಮಾಡುತ್ತಿರುವ ಎಲ್ಲೆಂದರಲ್ಲಿ ನಿಸರ್ಗದ ಮೇಲೆ ಹಲ್ಲೆಗೈದು ಜೀವವೈವಿಧ್ಯಕ್ಕೆ ಸಂಚಕಾರ ತಂದಿರುವ ಸ್ವಾರ್ಥತನದ ಪರಮಾವಧಿಗೂ ಬಳಕೆಯ ಯೋಗ್ಯಮರವನ್ನು ಅನುನಯದಿಂದ ಬಳಸಿಕೊಳ್ಳುವ ಒಲವುಗಳಿಗೂ ಇರುವ ಸಂಗತಿಗಳನ್ನು ಇಲ್ಲಿ ಕಾಣಬಹುದು.

ನಿಸರ್ಗವನ್ನು ಪೂಜಿಸಿ, ಆರಾಧಿಸಿ ಆದರ್ಶೀಕರಿಸಿ ಒಲಿಸಿಕೊಂಡು ಬದುಕುವ ದೇಸೀ ಬದುಕಿನ ವಿನ್ಯಾಸಗಳಿಗೂ ದರ್ಪಪ್ರಧಾನವಾದ ಪ್ರವೃತ್ತಿಯಿಂದ ನಿಸರ್ಗವನ್ನು ಒತ್ತಾಯವಾಗಿ ವಶಪಡಿಸಿಕೊಳ್ಳುವ ಮಾನವ ಪ್ರವೃತ್ತಿಯ ರಾಕ್ಷಸಿತನಗಳಿಗೂ ಇರುವ ವ್ಯತ್ಯಾಸವನ್ನು ಇಂಥಲ್ಲಿ ಕಾಣಬಹುದು.

ಕಡಿವ ಆಯುಧಗಳಿಗೆ ಹಾಲು, ತುಪ್ಪ, ಜೇನು ಸವರುವ ವಿಧಾನಗಳು ತುಂಬಾ ವೈಜ್ಞಾನಿಕವಾದಂಥವು. ಮನೆಗೆ ಮರವ ಕಡಿಯಬೇಕಾದರೆ ಮೊದಲು ಮರದ ಹತ್ತಿರ ಹೋಗಿ ಹಾಲು ಜೇನುತುಪ್ಪವ ಎರೆದು ಆಹ್ವಾನ ನೀಡಿ ಸಕಲ ದೇವತೆಗಳನ್ನು ನೆನೆದು ''ಮರದ ಕ್ಷಮೆ ಕೋರಿ'' ಬರಬೇಕು. ಹಾಗೆ ಮರ ಕಡಿಯುವ ಕೊಡಲಿ ಮತ್ತು ಬಾಚಿಗಳಿಗೆ ಉದಕವ ತಳೆದು ಜೇನುತುಪ್ಪವ ತೊಡೆದು ಕಡಿದರೆ ಮರ ಹದವಾಗಿ ಹರಿಯುವುದಲ್ಲದೆ ಅದು ಹುಳಿಯದು ಮತ್ತು ಹುಳಹತ್ತದು. ಈ ವಿವರ ನಿಸರ್ಗಕ್ಕೂ ಜೀವವಿದೆ, ಅದರ ಬಳಕೆ ಮಾನವೀಯತೆಯಿಂದ ನಡೆಯಬೇಕು ಎನ್ನುವ ಜೀವಪರ ನಿಲುವನ್ನು ತೋರುತ್ತದೆ. ಬಯೋಲಾಜಿಕಲ್ ಮತ್ತು ಬೊಟ್ಯಾನಿಕಲ್ ಆದಂಥ ಇಂಥ ಸಂಗತಿಗಳು ನಮ್ಮ ವಾಸ್ತುಶಾಸ್ತ್ರದಂಥ ಪಾರಂಪರಿಕ ಶಾಸ್ತ್ರಗ್ರಂಥಗಳಲ್ಲಿ ಅಡಗಿರುವುದು ವಿಶೇಷವಾಗಿದೆ.

ಇಂದಿಗೂ ಉತ್ತರ ಕರ್ನಾಟಕದ ಭಾಗಗಳಲ್ಲಿ ಇಂಥ ಸಂಗತಿಗಳು ಚಾಲ್ತಿಯಲ್ಲಿವೆ. ಹಿಂಗಾರಿ ಬೆಳೆಗಳನ್ನು ಕೊಯ್ಲು ಮಾಡುವಾಗ ಬೆಳೆ ಕೊಯ್ಯಲು ಬಳಸುವ ಕುಡುಗೋಲುಗಳನ್ನು ಚೆನ್ನಾಗಿ ಮಸೆದು ಅವುಗಳಿಗೆ ಬೆಣ್ಣೆ, ತುಪ್ಪ, ಜೇನು ಸವರಿ ಇಟ್ಟು ನಂತರ ಅವನ್ನು ಕೊಯ್ಯಲು ಬಳಸುತ್ತಾರೆ. ವರ್ಷದುದ್ದಕ್ಕೂ ಬಳಕೆಯಾಗದೆ ತುಕ್ಕುಹಿಡಿದಿದ್ದ ಆಯುಧಗಳಿಂದ ಬೆಳೆ ಕೊಯ್ದರೆ ಬೆಳೆಗೆ ನಂಜೇರುವುದಲ್ಲದೆ ಅದನ್ನು 'ಹೊಟ್ಟು', 'ಕಣಿಕಿ' ರೂಪದಲ್ಲಿ ತಿನ್ನುವ ದನಗಳಿಗೆ ಅನಾರೋಗ್ಯದಂಥ ಅಪಾಯಗಳು ಬರುತ್ತವೆಂದು ನಂಬಿಕೆಯಿದೆ.

ಬೆಳೆ, ದನ, ಮನುಷ್ಯ, ಪರಿಸರದ ಪರಸ್ಪರ ಅವಲಂಬನೆ ಮತ್ತು ಅನ್ಯೋನ್ಯತೆಗಳನ್ನು ಇಲ್ಲಿ ಕಾಣಬಹುದು. ಬೆಳೆಗೆ ಅಥವಾ ಮರಕ್ಕೆ ''ನಂಜೇರುತ್ತದೆ'' ಎನ್ನುವ ಅವರ ಪ್ರತ್ಯಕ್ಷಾನುಭವವೇ ಎಷ್ಟೊಂದು ವೈಜ್ಞಾನಿಕವಾದದ್ದು. ಇಂದಿನ ಜೀವಶಾಸ್ತ್ರೀಯ, ಸಸ್ಯಶಾಸ್ತ್ರೀಯ ಹಾಗೂ ಪ್ರಾಣಿಶಾಸ್ತ್ರೀಯ ಅಧ್ಯಯನಗಳು ಮಂಡಿಸುವ ಪ್ರಮೇಯಗಳನ್ನು ವಾಸ್ತುಶಾಸ್ತ್ರದ ಈ ಕೃತಿಗಳು ನೂರಾರು ವರ್ಷಗಳ ಹಿಂದೆಯೇ ಗುಣಾತ್ಮಕವಾಗಿ ಕಟ್ಟಿಕೊಟ್ಟಿವೆ. ಇಂಥ ಸಂಗತಿಗಳು ವೈಜ್ಞಾನಿಕ ಅಧ್ಯಯನಗಳ ಮೊದಲ ಪ್ರಮೇಯಗಳಾಗಬೇಕಾಗಿದೆ. ಶುಷ್ಕ ವೈಜ್ಞಾನಿಕತೆಯ ನೆಪದಲ್ಲಿ ಬ್ರಿಟಿಷ್ ಪ್ರಣೀತ ನಿರ್ಭಾವುಕ ಶೋಧಗಳ ಅವಲಂಬನೆಯಲ್ಲಿ ಸ್ಥಳೀಯ ಜೀವ ವೈವಿಧ್ಯತೆಗಳನ್ನು ಅಧ್ಯಯನಿಸುವ ನಮ್ಮ ಅಕಾಡೆಮಿಕ್ ಪ್ರಜ್ಞೆಗಳಿಗೆ ಇಂಥ ಜೈವಿಕ ಸತ್ಯಗಳು ಸವಾಲುಗಳಾಗಿವೆ.

**ಹಾದಿ**

ನದಿಗಳು ಮಾರ್ಗ
ಬದಲಿಸುತ್ತವಂತೆ!
ನಮ್ಮದಾದರೂ ಒಂದೇ.
ಕೊರಕಲು ಹಾದಿ –
ಅನಾದಿ!

ಪಿ. ಪಿ. ಕೆ.
ಮೈಸೂರು

**ಮರದ ಆಯ್ಕೆ ವಿಧಾನಗಳು**

ಇಲ್ಲಂತೂ ನಮ್ಮ ದೇಸೀ ಜೀಶಾಸ್ತ್ರದ ಪರಮೋಚ್ಚ ಪ್ರಜ್ಞೆಯನ್ನು ಕಾಣಬಹುದು.

*ದೂತಿವೃತ್ತೇ ಭೂತಚೇಷ್ಟೆಮಧುರಂ ಗಜ ಬಂಧನಂ।*
*ಜನಾಶ್ರಯಕ್ಕುಲಾಲೋಕಂ ಶಪಣಂ ತಪನಾಶ್ರಯಂ।*

ಬಳ್ಳಿ ಸುತ್ತಿಕೊಂಡ ಮರ, ಕಲ್ಲನೊಡೆದು ಹುಟ್ಟಿಬಂದ ಮರ, ಭೂತಗಳಿದ್ದ ಮರ, ಇಪ್ಪೆಮರ, ಮಂದಿ ಕುಳಿತುಕೊಳ್ಳುವ ಮರ, ತಪಸ್ವಿಗಳಿಗೆ ಆಶ್ರಯ ನೀಡಿದ್ದ ಮರ, ಹಕ್ಕಿಗೂಡು ಕಟ್ಟಿದ್ದ ಮರ ಇಂಥ ಮರಗಳನ್ನು ಮನೆಕಟ್ಟಲು ಕಡಿಯಬಾರದು ಬಳಸಬಾರದು ಎಂದು ಅರ್ಥ. ಶ್ಲೋಕದಲ್ಲಿ ಕಾಣುವ ನಿಷೇಧಾತ್ಮಕ ಪ್ರವೃತ್ತಿ ಪರೋಪಕಾರ ನೆಲೆಯದ್ದು ಹೊರತು ಅಪಾಯಕಾರಿ ನೆಲೆಯದ್ದಲ್ಲವೆನ್ನುವುದನ್ನು ಮೊದಲು ಮನಗಾಣಬೇಕು. ಶಾಸ್ತ್ರಗಳು ಸೂಚಿಸುವ ಇಂಥ ಗುಣಾತ್ಮಕ ನಿಷೇಧಗಳೇ ಇಂದು ನಮ್ಮ ಅಜ್ಞಾನದ ಮತ್ತು ಶೋಷಣೆಯ ಪ್ರಮುಖ ಸರಕಾಗಿರುವುದನ್ನು ಇಂದಿನ ವಾಸ್ತುಶಾಸ್ತ್ರೀಯ ಕ್ರಮಗಳಲ್ಲಿ ಹುಲುಸಾಗಿ ನೋಡಬಹುದು. ಇದೂ ಅಲ್ಲದೆ ಹಣ್ಣಿನ ಮರಗಳಾದ ಮಾವು, ಹುಣಸಿ, ಹಲಸಿನ ಮರ, ನೆರಳಿಗೆ ಪ್ರಧಾನವಾದ ಬೇವಿನಮರ, ತಾಳೆಯ ಮರಗಳನ್ನು ಕಡಿಯಬಾರದು ಎಂದು ವಾಸ್ತುಶಾಸ್ತ್ರ ಹೇಳುತ್ತದೆ.

ಒಂದೊಂದು ಮರ ಒಂದೊಂದು ಜೀವರಾಶಿಗೆ ಆಶ್ರಯ ನೀಡಿರುತ್ತದೆ. ಪರಸ್ಪರ ಬದುಕು ಮತ್ತು ಬೆಳವಣಿಗೆಗೆ ಕಾರಣವಾದ ಮರಗಳನ್ನು ಕಡಿಯುವುದರಿಂದ ಅವಲಂಬಿತವಾದ ಜೀವರಾಶಿಗಳ ಬದುಕುವ ಹಕ್ಕನ್ನು ನಾಶಮಾಡಿದಂತಾಗುತ್ತದೆ.

## ಗಳಿಗೆಬಟ್ಟಲು

ಇದೇ ಮೊದಲಲ್ಲ
ಈ ಇಂಥ ಆಕೃತಿಯ ನೋಡಿದ್ದು,
ಗೊಂದಲವನನುಭವಿಸಿದ್ದು
ಮೊದಲಾವುದೊ ಕೊನೆಯಾವುದೊ
ಕೆಳಗಾವುದೊ ಮೇಲಾವುದೊ
ಕಾಲನಿರ್ಣಯದಂತೆ ಹರಿಯುವ ಮರಳು
ಕಾಲ ನೋಡಲು ಹೋದವ ಮರಳು
ಆ ನವಿರು ನೇಯ್ಗೆಯಾಕಾರ, ಬಂಧವಿಲ್ಲದ್ದು

ಪಡೆದೆನೆಂಬ ಗರ್ವ
ಕಳೆದೆನೆಂಬ ಕೊರಗು
ಕ್ಷಣ ಮಾತ್ರದಲಿ ತಲೆಕೆಳಗು
ಕಾಲ ಮಹಿಮೆಗೆ ಬಾಗುವ, ಬೀಗುವ –
ದರಲದೆಂತದೋ ಹಿತ! ಕಾದು ನಿಂದರೂ ಅನಾಹತ.

ಮುಳ್ಳು ಬೆಳೆಯದ ದಾರಿ, ಪಿಸುಗುಡುವ ಮೌನ
ಕಣ್ಣೀರು ಹರಿದಷ್ಟು
ನಿಶ್ಶಬ್ದದ ಸಾಂತ್ವನ
ಗಂಟೆಯೊ ಗಳಿಗೆಯೊ ಇರುವದಷ್ಟೇ ಸಮಯ
ನಿಮಿಷದ ಹರುಷವಿಲ್ಲ ಅಯೋಮಯ

ಹುಡುಕುತಿದೆಯೊಂದು ದೃಶ್ಯ
ಎಲ್ಲ ಇದ್ದೂ - 'ಇರುವದೆಲ್ಲ ಬಿಟ್ಟು'
ಅಲ್ಲ
ತ್ರಿವಲಿಯೊಂದೇ ಅದೃಶ್ಯ

ಜಾರುವಿನಲ್ಲಿರುವವರೆಗೂ ಹದವಿತ್ತು
ಜಾರುವಾಟಕೆ ಒಂದಷ್ಟು ಮುದವಿತ್ತು
ತಟಿಯ ಮೋಹಕೆ ಕೆಳಬಂದರೆ
ಸೆಟವಿಯ ಚೂಪು ಲೇಖನಿಯ ತಿವಿತ
ಕಾಲ ನಿಯಮವ ಹೇಳುವ ತುಡಿತ
ಇಕ್ಕಟ್ಟದಾರಿಯಲಿ ಸಿಕ್ಕಿಕೊಂಡಾಗಲೇ ತಿಳಿದದ್ದು –
ಮೇಲಾವುದೊ ಕೆಳಗಾವುದೊ ?



ತಾನೂ ಬದುಕಿ ಮತ್ತೊಬ್ಬರೂ ಬಾಳಬೇಕೆನ್ನುವ ಇಲ್ಲಿನ ಸಾಮುದಾಯಿಕ ಜೀವನ ಸಿದ್ಧಾಂತ ನಮಗೆಷ್ಟು ಅರ್ಥವಾಗಿದೆ ? ನೆರೆಹೊರೆಯವರನ್ನು ಹೊಡೆದು ಬಡಿದು ಸುಲಿದು ಬದುಕುವ ನಮ್ಮ ಸ್ವಯಂ ಸ್ವಾರ್ಥ ಬದುಕಿನ ನೆಲೆಗಳು ಒಮ್ಮುಖ ಪ್ರಜ್ಞೆಗಳು ಇಂಥ ಜೈವಿಕ ನೆಲೆಗಳಿಂದ ಗುಣಾತ್ಮಕ ಪ್ರೇರಣೆ ಪಡೆಯಬೇಕಾಗಿದೆ. ಬರೀ ಘೋಷಣೆಯ ರೂಪದಲ್ಲಿ ಯೋಜನೆಯ ರೂಪದಲ್ಲಿರುವ ರೇಖಾತ್ಮಕವಾದಂಥ ಪರಿಸರ ಮತ್ತು ಜೈವಿಕ ಅಭಿವೃದ್ಧಿ ನೀತಿಗಳು ಹಾಗೂ ಸುಧಾರಣೆಗಳು ಇಂಥ ಅಂತಃಕರಣಯುಕ್ತ ಜೀವಪರ ನೆಲೆಗಳಿಂದ ಪ್ರೇರಿತವಾಗಬೇಕಾಗಿದೆ. ಅಪಾರ ಜೀವ ವೈವಿಧ್ಯತೆಯ ಒಡಲನ್ನು ದರ್ಶಿಸದೆ, ಪುಸ್ತಕೀಯವಾದಂಥ ಅಕ್ಷರ ರೂಪದ ತಿಳುವಳಿಕೆಯಿಂದ ಬರುವ ಜ್ಞಾನದ ಅಪಾಯಕಾರಿ ಅನರ್ಥಗಳನ್ನು ಇಂಥಲ್ಲಿ ಕಾಣುತ್ತೇವೆ. ವಾಸ್ತುಶಾಸ್ತ್ರವಾಗಲಿ ಶಿಲ್ಪಶಾಸ್ತ್ರವಾಗಲಿ ಯಾವುದೇ ಶಾಸ್ತ್ರಗಳು ಹೇಳುವುದು ಸಾಮುದಾಯಿಕ ಸೃಷ್ಟಿಯ ನಡತೆಗಳನ್ನೇ ಹೊರತು ಬೇರೇನೂ ಅಲ್ಲ. ಆದರೆ ಸ್ವಾರ್ಥಪರ ಹಿತಾಸಕ್ತಿಗಳು, ಇಂಥ ಶಾಸ್ತ್ರಗಳನ್ನು ತಿರುಚಿ ಶೋಷಣೆಯ ಮಾಧ್ಯಮಗಳನ್ನಾಗಿ ಮಾಡಿಕೊಂಡಿರುವುದನ್ನು ಇಂದು ಕಾಣುತ್ತೇವೆ.



ಇದೂ ಅಲ್ಲದೆ ಒಂದೊಂದು ಋತುಮಾನದಲ್ಲಿ ಒಂದೊಂದು ರೀತಿಯ ಮರಗಳನ್ನು ಕಡಿಯಬಾರದು ಎಂದು ಇಲ್ಲೇ ಹೇಳಲಾಗಿದೆ. ಉದಾಹರಣೆಗೆ, ವಸಂತ ಮತ್ತು ಗ್ರೀಷ್ಮ ಋತುಗಳಲ್ಲಿ ಮಾವು-ಬೇವು ಕಡಿಯಬಾರದು ಎನ್ನುವ ಮಾತು. ಈ ಋತುಮಾನಗಳಲ್ಲಿ ಮಾವು-ಬೇವು ಸಮೃದ್ಧ ಫಲ ಹೊತ್ತು ನಿಂತಿರುತ್ತವೆ. ಕಡಿದಾಗ ಆ ಫಲ ಮಣ್ಣುಗೂಡಿ ಹೋಗುತ್ತದೆ. ದಿನ ತುಂಬದ ಪ್ರಸವದ ಪ್ರಯೋಜನ ಹೇಗೆ ಅಪ್ರಯೋಜಕವೋ ಹಾಗೆ ಆಯಾ ಋತುಮಾನಗತಿಗಳಿಗೆ ಹೊಂದಿಕೊಂಡಂತೆ ಮರದ ಬಳಕೆಯನ್ನು ಮಾಡುವ ವಿಧಾನಗಳನ್ನು ವಾಸ್ತುಶಾಸ್ತ್ರ ತಿಳಿಸುತ್ತದೆಯೇ ಹೊರತು ಅದು ಯೋಗ್ಯವಲ್ಲ, ಅದು ಮನುಷ್ಯನಿಗೆ ಕೆಡಕನ್ನುಂಟುಮಾಡುತ್ತದೆ, ಆತನ ಎಲ್ಲ ಸಂಕಟಗಳಿಗೆ ಇಂಥ ಮರಗಳು ಕಾರಣವಾಗುತ್ತವೆನ್ನುವ ಹಿನ್ನೆಲೆಯಲ್ಲಿ ಅಲ್ಲ ಎನ್ನುವುದು ಗಮನಿಸಬೇಕು.

**ಮನೆಗಳ ಸಮೀಪ ಮರಗಳಿರುವ ಲಕ್ಷಣ**

ಪೂರ್ವಭಾಗೇ ವಟಂ ಪ್ರೋಕ್ತಂ ಅಪರಿಘ್ನಂ ಗದಂ ಫಲಂ
ಪುತ್ರಪೌತ್ರಶ್ರೇಯಾಂಸ್ಯಾಚೌಬೀಯ ಲಾಭಂ ಭವೇನ್ನರಃ ॥

ಮನೆಗೆ ಪೂರ್ವದಲ್ಲಿ ಆಲದ ಮರವು ಫಲದಿಂದ ಸಮೃದ್ಧಿಯಾಗಿರಲು ಆ ಮನೆಯಲ್ಲಿ ಪುತ್ರಪೌತ್ರಶೋಭಾನಭಿವೃದ್ಧಿಯಾಗಿ ಬಾಳುವರು. ಹೀಗೆ ಈಶಾನ್ಯ ದಿಕ್ಕಿನಲ್ಲಿ ಹಲಸಿನ ಮರ ಇದ್ದರೆ ಸಂತಾನ ವೃದ್ಧಿ. ಆ ಮರದಲ್ಲಿ ಫಲವಿಲ್ಲದಿದ್ದರೆ ಧನನಾಶ, ಫಲವಿಲ್ಲದೆ ಬರೀ ಎಲೆಗಳಿಂದ ಕೋಮಲವಾಗಿದ್ದರೆ ಸ್ತ್ರೀನಾಶವಾಗುವುದು.

ವಾಸ್ತುಶಾಸ್ತ್ರದ ಈ ಸಂಗತಿಗಳು ತುಂಬ ವೈಚಾರಿಕವಾದಂಥವು. ಪೂರ್ವದಿಕ್ಕಿನಲ್ಲಿ ಅರಳಿ, ಆಲ, ಬಸರಿ ಇಂಥ ಮರಗಳಿರಬೇಕು; ವಾಯವ್ಯ ಮತ್ತು ಈಶಾನ್ಯದಲ್ಲಿ ಹಲಸು-ಮಾವು ತೆಂಗುಗಳಂಥ ಫಲವಂತಿಕೆ ಮರಗಳಿರಬೇಕು; ದಕ್ಷಿಣ-ಪಶ್ಚಿಮ ಹಾಗೂ ನೈಋತ್ಯದಲ್ಲಿ ಮುಳ್ಳುಗಳಿಂದ ಕೂಡಿದ ಪೊದೆಗಳಂಥ ಮರಗಳಿರಬೇಕು ಎಂದು ವಾಸ್ತುಗ್ರಂಥಗಳು ಹೇಳುತ್ತವೆ. ಕಾರಣ ಪೂರ್ವದಲ್ಲಿರುವ ಹಾಲು ಪ್ರಧಾನವಾದ ಅರಳಿ, ಆಲ, ಬಸರಿಗಳಂಥ ಮೃದುವಾದ ಬೃಹತ್ ಸ್ವರೂಪದ ಮರಗಳು ಸೂರ್ಯನಿಂದ ಹೊರಸೂಸುವ ಅಲ್ಟ್ರಾವಯಲೆಟ್ ಕಿರಣಗಳ ಪ್ರಯೋಜನಕ್ಕೆ ಕಾರಣವಾಗುತ್ತವೆ. ಹಾಗೆ ವಾಯವ್ಯ ಮತ್ತು ಈಶಾನ್ಯದಲ್ಲಿ ಫಲಭರಿತ ಮರಗಳಿರಬೇಕು ಎನ್ನುವ ವಿಷಯ ಸೂರ್ಯನ ಪ್ರಖರ ಬೆಳಕಿನಿಂದ, ಪ್ರಚಂಡ ಮಾರುತಗಳಿಂದ ರಕ್ಷಣೆ ದೊರೆಯುತ್ತದೆಂಬ ಚಿಂತನೆಯಿಂದ ಕೂಡಿದೆ. ಕಾರಣ ಭೂಮಿಯ ಕಾಂತರೇಖೆಗಳು ದಕ್ಷಿಣೋತ್ತರವಾಗಿರುವುದರಿಂದ ಭೂಮಿಯು ದಕ್ಷಿಣ ಗೋಳದಲ್ಲಿ ೨೩. ಡಿಗ್ರಿ ವಾಲಿಕೊಂಡು ತಿರುಗುವುದರಿಂದ ಈಶಾನ್ಯ ದಿಕ್ಕು ಸ್ಥಿರದಿಕ್ಕು ಎನಿಸಿಕೊಂಡು ಮಹತ್ವ ಪಡೆದಿದೆ. ಉತ್ತರ ಗೋಳಾರ್ಧದಲ್ಲಿರುವ ನಮಗೆ ನೈಋತ್ಯ ಮಾನ್ಸೂನುಗಳ ಅಬ್ಬರದಿಂದ ಸಂರಕ್ಷಿಸಿಕೊಳ್ಳಲು ಮಧ್ಯಾಹ್ನದ ತಾಪಮಾನವನ್ನು ನಿಯಂತ್ರಿಸಲು ಎತ್ತರವಾದ ಮತ್ತು ಪೊದೆ ಸ್ವರೂಪದ ಗಿಡಮರಗಳನ್ನು ಬೆಳೆಸಲು ವಾಸ್ತು ಹೇಳುತ್ತದೆ. ಇದರಿಂದ ಮನೆ ಮತ್ತು ಮನೆಯ ಬೇರೆ ಭಾಗಗಳಲ್ಲಿರುವ ಫಲಭರಿತ ಮರಗಳಿಗೆ ರಕ್ಷಣೆ ಕೂಡ ದೊರೆಯುತ್ತದೆ ಎನ್ನುವ ಸದಾಶಯವನ್ನು ಇಲ್ಲಿ ಕಾಣಬಹುದಾಗಿದೆ.

ಇನ್ನು ಸಂತಾನದ ಸಂಗತಿಗಳತ್ತ ಗಮನಹರಿಸಿದಾಗ ವಿಸ್ಮಯವಾಗುತ್ತದೆ. ಜಾನಪದ ಬದುಕಲ್ಲಿ ಒಂದು ವಾಡಿಕೆ ಇದೆ. ಋತುಮತಿಯಾದ ಹುಡುಗಿಯನ್ನು ಅವರೆ ಮರ (ತಂಗಟೆ) ಹಾಗೂ ಹಾಲುಯುಕ್ತವಾದ ಮರಗಳನ್ನು ಮುಟ್ಟಿಸುವ ಪದ್ಧತಿಯಿದೆ. ಹಾಗೆ ಹಸುಗಳ ಬೆದೆ ನಿಂತಾಗ ಅಂದರೆ ಗರ್ಭ ಧರಿಸುವ ಸಂದರ್ಭದಲ್ಲಿ ಅವುಗಳನ್ನು ಬಿಳಿ ದನಗಳ ಮತ್ತು ಜಾತಿ ದನಗಳ ಪಕ್ಕದಲ್ಲಿ ಕಟ್ಟುತ್ತಾರೆ. ಇದರಿಂದ ಪಕ್ಕದ ದನದ ಗುಣ ಸ್ವರೂಪಗಳು ಮುಂದೆ ಹುಟ್ಟಲಿರುವ ಕರುವಿಗೆ ಬರ ಬೇಕೆನ್ನುವುದು ಅವರ ಸದಾಶಯವಾಗಿರುತ್ತದೆ. ಮನೆಯಂಗಳದಲ್ಲಿ ಹೂ-ಫಲ ಬಿಡುವ ಸಸ್ಯಗಳಿದ್ದರೆ ಅಂಥ ವಾತಾವರಣ ಸಂತಾನ ಸಮೃದ್ಧಿ ಕಾರಣವಾಗುತ್ತದೆನ್ನುವ ಕಲ್ಪನೆಯನ್ನು ಇಂಥಲ್ಲಿ ಕಾಣುತ್ತೇವೆ.

**ಮರದ ಸ್ವರೂಪ**

*ಮೂಲಸ್ಥೂಲಭವೇನ್ನಾರೀ ಅಗ್ರಸ್ಥೂಲೋ ನಪುಂಸಕಃ ।*
*ಮೂಲಮಗ್ರಸಮಂ ಚೈವ ಸೋ ವೃಕ್ಷಪುರುಷ ಲಕ್ಷಣಂ ॥*
*ಪುರುಷಾಣಾಂ ಕುಲವೃದ್ಧಿ ಸರ್ವಸೌಭಾಗ್ಯ ವರ್ಧನಂ ।*
*ನಪುಂಸಕ ಕುಲನಾಶಂ ಚ ವೃಕ್ಷಾಣಾಂ ಗೃಹತತ್ಫಲಂ ॥*
(ಇದರ ಸರಿಯಾದ ಪಾಠ ದೊರಕಿಲ್ಲ)

ಮೊದಲು ತೋರವಾಗಿ ತುದಿ ಅಸ್ತಾಗಿದ್ದಂಥ ಮರ ಅದು ಹೆಣ್ಣು ಮರವೆಂದೂ ಮೊದಲು ಅಸ್ತಾಗಿ ತುದಿ ತೋರವಾಗಿದ್ದಂಥ ಮರ ಅದು ಶಿಖಂಡಿ ಮರವೆಂದೂ ಮೊದಲು ಮತ್ತು ತುದಿಯು ಸಮನಾಗಿ ಇದ್ದಂಥ ಮರ ಗಂಡು ಮರವೆಂದೂ ಹೇಳಲಾಗಿದೆ. ಅದರ ಸ್ವರೂಪ ಲಕ್ಷಣವನ್ನು ಹೇಳುವ ಈ ಮಾತುಗಳು ಅದರ ಸ್ವರೂಪಕ್ಕೆ ಅನುಗುಣವಾಗಿ ಬಳಸಿಕೊಳ್ಳಲು ಸೂಚಿಸುತ್ತದೆ. ಗಂಡು ಸ್ವರೂಪದ ಅಂದರೆ ಬೊಡ್ಡೆಯಿಂದ ತುದಿಯವರೆಗೆ ಒಂದೇ ಗಾತ್ರದಲ್ಲಿರುವ ಮರ ದಷ್ಟಪುಷ್ಟವಾಗಿದ್ದು ಅದು ಭಾರವನ್ನು ಸಮನಾಗಿ ಹೊತ್ತು ನಿಲ್ಲಲು ಸಶಕ್ತವಾಗಿರುತ್ತದೆ. ತುದಿ ಅಥವಾ ಬೊಡ್ಡೆ ಸಣ್ಣದಾಗಿರುವ ಮರ ಇಂಥ ಭಾರವನ್ನು ಸಹಿಸಲಾರದು. ಅಂಥ ಮನೆ ಮುರಿದು ಬೀಳಬಹುದು. ಹೀಗಾಗಿ ಇಲ್ಲಿ ಗಂಡು-ಹೆಣ್ಣು-ಶಿಖಂಡಿ ಎನ್ನುವ ಶಬ್ದಗಳಿಗಿಂತ ಮರದ ಬಾಳಿಕೆಯ ಗುಣವನ್ನು ಆಧರಿಸಿ ಮನೆ ಕಟ್ಟಬೇಕೆನ್ನುವ ಸತ್ಯವನ್ನು ಅರಿಯಬೇಕಾಗಿದೆ. ಆರೋಗ್ಯಪೂರ್ಣ ಮರವಿದ್ದರೆ ಅಷ್ಟೆ ಅಂದಚೆಂದವಾದ ಆರೋಗ್ಯಪೂರ್ಣ ಮನೆಯನ್ನು ಬಹುಕಾಲ ಬಾಳುವ ಇಮಾರತಿಯನ್ನು ನಿರ್ಮಿಸಬಹುದು.

ಹೀಗೆ ವಾಸ್ತುಶಾಸ್ತ್ರ ಕೃತಿಗಳಲ್ಲಿ ಕಾಣುವ ಪರಿಸರ ಸ್ನೇಹಿ ಸಂಗತಿಗಳ ಕುರಿತು ವೈಜ್ಞಾನಿಕ ರೀತಿಯ ಗಂಭೀರ ಅಧ್ಯಯನ ನಡೆಯಬೇಕಿದೆ. ನಿಸರ್ಗ ಸಮ್ಮುಖ ಕ್ರಿಯೆಗಳಿಂದ ದೊರೆಯುವ ಗಾಳಿ, ಬೆಳಕುಗಳಂಥ ಪ್ರಯೋಜನಗಳನ್ನು ಪಡೆದುಕೊಂಡು ಆರೋಗ್ಯಪೂರ್ಣ ಬದುಕನ್ನು ನಡೆಸಬೇಕೆನ್ನುವ ಪಂಚಭೂತಾತ್ಮಕ ಪರಿಕಲ್ಪನೆ ಇಲ್ಲಿದೆ. ಯಾಕೆಂದರೆ ದೇಸೀ ಜ್ಞಾನ ಪರಂಪರೆಯಲ್ಲಿ ವಾಸ್ತು ಎಂದರೆ ಕೇವಲ ಗೋಡೆ ಕಿಟಕಿ ಬಾಗಿಲುಗಳಂಥ ಘನವಸ್ತುಗಳ ಅಧ್ಯಯನವಲ್ಲ. ಅದು ಆ ಭೌಗೋಳಿಕ ಪರಿಸರದಲ್ಲಿ ಬದುಕಿದ ಜನಸಮುದಾಯಗಳ ಜೀವ ಸಂಕುಲಗಳ ಸಾಂಸ್ಕೃತಿಕ ಪರಂಪರೆಯನ್ನು ಅರ್ಥಮಾಡಿಕೊಳ್ಳುವುದಾಗಿದೆ. ವ್ಯಕ್ತಿಯ ಆಗುಹೋಗು ಆರೋಗ್ಯಗಳನ್ನು ನಿರ್ಧರಿಸುವ ಈ ಶಾಸ್ತ್ರ ಇದೊಂದು ಭೂ ಜೀವಶಾಸ್ತ್ರವಾಗಿದೆ ಎಂಬುದರಲ್ಲಿ ಎರಡು ಮಾತಿಲ್ಲ.

ಡಾ॥ ವೀರೇಶ ಬಡಿಗೇರ
ಪ್ರಾಧ್ಯಾಪಕರು, ಹಸ್ತಪ್ರತಿಶಾಸ್ತ್ರ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

# ಮಧ್ಯಕಾಲೀನ ಕನ್ನಡ ಸಾಹಿತ್ಯ : ಪ್ರಜಾತಾಂತ್ರಿಕ ಮೌಲ್ಯಗಳು

**ಚಂ**ಪೂ ಸಾಹಿತ್ಯದ ಮಹಾಪೂರದ ಬಳಿಕ ಮಧ್ಯಕಾಲೀನ ಸಾಹಿತ್ಯ ಚರಿತ್ರೆಯಲ್ಲಿ ಇನ್ನೊಂದು ಮಹಾನದಿ ಹರಿದು ಬಂದುದು ಮಹತ್ವದ ದಾಖಲೆಗಳಲ್ಲಿ ಒಂದು. ಅರಸೊತ್ತಿಗೆಯ ಕಪಿಮುಷ್ಟಿಯಿಂದ ಹೊರಬಂದ ಸಾಹಿತ್ಯ ವಾಹಿನಿಯು ರಚನಕಾರರ ಸ್ವತಂತ್ರ ಮನೋಭೂಮಿಯಲ್ಲಿ ಸ್ವಚ್ಛಂದವಾಗಿ ವಿಹರಿಸಿತು. ವಸ್ತು, ರೂಪ, ಭಾಷೆ ಮತ್ತು ವಿಚಾರಗಳಲ್ಲಿ ನಾವೀನ್ಯತೆಯನ್ನು ಅದು ಕಂಡುಕೊಂಡಿತು. ಹಾಗೆ ನೋಡಿದರೆ ಮಧ್ಯಕಾಲೀನ ಕನ್ನಡ ಸಾಹಿತ್ಯ ಚರಿತ್ರೆಯು ಚಳುವಳಿಯ ಸಂಘರ್ಷದ ಮತ್ತು ಹೊಸತನದ ಹುಡುಕಾಟದ ಚರಿತ್ರೆಯಾಗಿದೆ. ವ್ಯಷ್ಟಿ ಸಮಷ್ಟಿಯ ಸುಖಕ್ಕಾಗಿ ಪರಿತಪಿಸುವ ಶಿಷ್ಟಕಾರ್ಯ ನಡೆದದ್ದು ಹೆಚ್ಚಾಗಿ ಮಧ್ಯಕಾಲದಲ್ಲಿಯೇ.

ಇಂದು ಪ್ರಜಾಪ್ರಭುತ್ವವು ಅತ್ಯಂತ ಜನಪ್ರಿಯ ಸರಕಾರದ ಪದ್ಧತಿಯಾಗಿದೆ. ವಿಶ್ವವೇ ಪ್ರಜಾತಂತ್ರದ ಮೋಹಕ್ಕೆ ಒಳಗಾಗಿದೆ. ವ್ಯಕ್ತಿಯ ಸರ್ವಾಂಗೀಣ ಪ್ರಗತಿಗೆ ಪ್ರಜಾತಂತ್ರವೇ ಸೂಕ್ತವಾದುದು. ಇಲ್ಲಿ 'ಪ್ರಜೆ' ರಾಜ. ತನ್ನ ಸುಖವನ್ನನುಲಕ್ಷಿಸಿ ಯಾರನ್ನೂ ಆಯ್ಕೆ ಮಾಡುವ ಮತದಾನದ ಹಕ್ಕು ಅವನಿಗಿರುವಂತೆ ಅಭಿಪ್ರಾಯ ಸ್ವಾತಂತ್ರ್ಯ, ಧಾರ್ಮಿಕ ಸ್ವಾತಂತ್ರ್ಯ, ರಾಜಕೀಯ ಸ್ವಾತಂತ್ರ್ಯ ಹಾಗೂ ಸಾಮಾಜಿಕ ಸಮಾನತೆಯ ಹಕ್ಕು ಅವನಿಗೆ ಲಭ್ಯವಾಗುತ್ತದೆ. ಮಧ್ಯಕಾಲೀನ ಭಾರತದಲ್ಲಿ ಅರಸೊತ್ತಿಗೆ ಜಾರಿಯಲ್ಲಿದ್ದರೂ ಸ್ವತಂತ್ರ ಮನೋಭಾವದ ಶರಣರು, ಕವಿಗಳು ನೆಮ್ಮದಿಯ ಬದುಕಿಗಾಗಿ ಪ್ರಯತ್ನಿಸು ತ್ತಿದ್ದರು. ಪ್ರಜಾತಂತ್ರದಲ್ಲಿ ನೆಮ್ಮದಿಯಿದೆಯೆಂಬ ಅರಿವೂ ಅವರಿಗಿದ್ದುದು ಅವರ ಕೃತಿಗಳಿಂದ ನಮಗೆ ತಿಳಿದುಬರುತ್ತದೆ.

ಪ್ರಜಾತಾಂತ್ರಿಕ ಮೌಲ್ಯಗಳು ಹರಳುಗಟ್ಟಿದ್ದು ೧೨ನೆಯ ಶತಮಾನದಲ್ಲಿ. ವಚನಕಾರರು ಅಭಿವ್ಯಕ್ತಿ ಸ್ವಾತಂತ್ರ್ಯದ ಗಾಳಿಯನ್ನು ಉಸಿರಾಡಿಸಿದರು, ಸಮಾನತೆಯ ಸುಖ ಅನುಭವಿಸಿದರು, ಕಾಯಕ ಸ್ವಾತಂತ್ರ್ಯವನ್ನು ಎತ್ತಿ ಹಿಡಿದರು. ಆಳರಸರನ್ನು ಮೆಚ್ಚಿ ಕಾವ್ಯ ಬರೆಯುವ ಗೋಜಿಗೆ ಹೋಗದೆ ವಸ್ತು, ಭಾಷೆ, ರೂಪಗಳಲ್ಲಿ ಸ್ವಾತಂತ್ರ್ಯವನ್ನು ಹೊಂದಿದರು. 'ಆನು ಒಲಿದಂತೆ ಹಾಡುವೆನು' – ಎಂದು ಬಸವಣ್ಣ ಹೇಳುವಲ್ಲಿ ಅವನ ಅಭಿಪ್ರಾಯ ಸ್ವಾತಂತ್ರ್ಯ ವ್ಯಕ್ತವಾಗುತ್ತದೆ.

ಪ್ರಜಾತಂತ್ರವು ಸರ್ವಾಧಿಕಾರವನ್ನು ಧಿಕ್ಕರಿಸುತ್ತದೆ. ವ್ಯಕ್ತಿ ಸ್ವಾತಂತ್ರ್ಯಕ್ಕೆ ಅವನ ಸ್ವಾಭಿಮಾನಕ್ಕೆ ಧಕ್ಕೆಯುಂಟಾದಾಗ ಆತ ಪ್ರತಿಭಟಿಸುತ್ತಾನೆ. ''ಪ್ರಜಾತಂತ್ರದಲ್ಲಿ ಅನ್ಯಾಯವನ್ನು ಸಹಿಸುವುದೂ ಕೂಡ ಒಂದು ದೊಡ್ಡ ಪಾಪ'' ಎಂದು ಗಾಂಧೀಜಿ ಹೇಳುತ್ತಾರೆ.

''ಅರಸ ಮುನಿದರೆ ಊರೊಳಗಿರಬಾರದೆಂದು'' ಹೇಳುತ್ತ ಅರಸನ ಹಂಗ ಹರಿದ ಬಳಿಕ 'ಆರು ಮುನಿದು ನಮಗೇನು ಮಾಡುವರು' ಎನ್ನುವ ಮೂಲಕ ಪ್ರಜಾಭಿಪ್ರಾಯವನ್ನು ಬಸವಣ್ಣ ವ್ಯಕ್ತಮಾಡುತ್ತಾನೆ. ಜನರ ಸುಖ-ದುಃಖದತ್ತ ಗಮನ ಹರಿಸದೆ ಜನತೆಗೆ ಸ್ಪಂದಿಸದ ಅರಸನಿಗೆ ಅವನ ಅರಸೊತ್ತಿಗೆಗೆ ಕವಡೆ ಕಿಮ್ಮತ್ತೂ ಇಲ್ಲವೆಂಬುದನ್ನು ಶರಣರು ಹೇಳುತ್ತಾರೆ :

'ವ್ಯಾಧನೊಂದು ಮೊಲವ ತಂದರೆ ಸಲುವ ಹಾಗಕ್ಕೆ ಒಲಿವರಯ್ಯಾ ನೆಲನಾಳ್ದನ ಹೆಣನೆಂದರೆ ಒಂದಡಕೆಗೆಕೊಂಬವರಿಲ್ಲ ನೋಡಯ್ಯಾ' ಎಂಬ ಮಾತು ಇದಕ್ಕೆ ಪುಷ್ಟಿಯನ್ನೀಯುತ್ತದೆ.

– ಪ್ರಜಾತಂತ್ರದಲ್ಲಿ ವರ್ಗ-ವರ್ಣಗಳ ತಾರತಮ್ಯವಿಲ್ಲ. ಮಧ್ಯಕಾಲೀನ ಶರಣರು ಕಟ್ಟಬಯಸಿದ ಹೊಸ ಸಮಾಜವು ವರ್ಗ ಹಾಗೂ ವರ್ಣರಹಿತವಾದುದು. ಇಲ್ಲಿ ಎಲ್ಲರೂ ಸಮಾನರು. 'ಬಸವಣ್ಣ ಅಂಗದ ಮೇಲೆ ಲಿಂಗವುಳ್ಳವನನ್ನು ಜಂಗಮನೆಂಬೆ' ಎಂದು ಹೇಳುತ್ತಾನೆ. ಬಸವಣ್ಣನ ಜಂಗಮದ ಪರಿಕಲ್ಪನೆ ಭಿನ್ನವಾದುದು. ಜಂಗಮವೆನ್ನುವದು ಒಂದು ಸಮಾಜ, ಇದು ಚಲನಶೀಲವಾದುದು. ಅನ್ಯಾಯ ಹೊಡೆದೋಡಿಸಿ ನ್ಯಾಯ ಪ್ರತಿಷ್ಠಾಪಿಸಲು ಪ್ರಯತ್ನಿಸುವಂಥದ್ದು.

– ಪ್ರಜಾತಂತ್ರದ ಇನ್ನೊಂದು ಮೌಲ್ಯ ಸಮಾನ ಹಂಚಿಕೆ. ಕೂಡಿಹಾಕುವಿಕೆ ಪ್ರಭುತ್ವ ಪದ್ಧತಿಯಾದರೆ ಹಂಚುವಿಕೆಯು ಪ್ರಜಾತಂತ್ರ ಪದ್ಧತಿಯಾಗಿದೆ. ಧನ ಸಂಗ್ರಹ ಪ್ರವೃತ್ತಿಯನ್ನು ಶರಣರು ಅಲ್ಲಗಳೆದರು. ಸಂಪತ್ತು ಕ್ರೋಡೀಕರಣಗೊಂಡು ಸರಿಯಾಗಿ ವಿತರಣೆಯಾಗದಿದ್ದರೆ ಸಂಘರ್ಷಕ್ಕೆ ಅದು ಕಾರಣೀಭೂತವಾಗುತ್ತದೆ. ಶರಣರು ಕಾಯಕ ಮತ್ತು ದಾಸೋಹ ಸಂಸ್ಕೃತಿಗಳನ್ನು ಹುಟ್ಟುಹಾಕಿ ಜನತೆಯ ಆದಾಯವನ್ನು ಹೆಚ್ಚಿಸಲು ಪ್ರಯತ್ನ ಮಾಡಿದರು. 'ಹೊನ್ನಿನೊಳಗೊಂದೊರೆಯ ಸೀರೆಯೊಳಗೊಂದೆಳೆಯ ಇಂದಿಂಗೆ ನಾಳಿಂಗೆ ಬೇಕೆಂದೆನಾದರೆ ನಿಮ್ಮಾಣೆ' ಎಂದು ಹೇಳುವುದರ ಮೂಲಕ ಬಸವಣ್ಣ ಸಂಪತ್ತನ್ನು ಸಾಮಾಜೀಕರಣಗೊಳಿಸುತ್ತಾನೆ.

ಸುಖೀರಾಜ್ಯ ನಿರ್ಮಾಣವಾಗಬೇಕಾದರೆ ಅದರ ಉತ್ಪಾದನಾ ಸಾಮರ್ಥ್ಯ ಹೆಚ್ಚಬೇಕು. ವಸ್ತು ಉತ್ಪಾದನೆಯ ಮೇಲಿನ ಕಂದಾಯವನ್ನು ಜನ ಸರಕಾರಕ್ಕೆ ಸರಿಯಾಗಿ ಸಲ್ಲಿಸಬೇಕು. ಸುಂಕ ಕಟ್ಟದೆ ಗಳಿಸಿದ ಹಣವು ಕಪ್ಪು ಹಣ. ಇದರಿಂದ ಹಣದುಬ್ಬರವಾಗಿ ಆರ್ಥಿಕ ವ್ಯವಸ್ಥೆಯು ಹದ ಗೆಡುತ್ತದೆ. ಆದ್ದರಿಂದ 'ಭಂಡವ ತುಂಬಿದ ಬಳಿಕ ಸುಂಕವ ತೆತ್ತಲ್ಲದೆ ಹೋಗಬಾರದು' ಎಂದು ಬಸವಣ್ಣ ಹೇಳುತ್ತಾನೆ.

ಬಸವಣ್ಣ ಪ್ರಜಾಶಕ್ತಿಯ ಬಲವನ್ನು ಅರಿತವನಾಗಿದ್ದ. ಜನಶಕ್ತಿಯ ಮುಂದೆ ರಾಜಶಕ್ತಿ ನಿಲ್ಲಲಾರದೆಂಬುದು ಅವನಿಗೆ ಗೊತ್ತಿತ್ತು. ಪ್ರತಿಯೊಬ್ಬ ಕಾಯಕ ಮಾಡಬೇಕು. ಮೋಳಿಗೆ ಮಾರಯ್ಯನಂಥ ಅರಸನೂ ಕಟ್ಟಿಗೆ ಮಾರುವ ಕಾಯಕ ಮಾಡಿ ಬದುಕುತ್ತಿರುವುದು ಅವರ ಕಾಯಕ ಸಮಾನತೆ ಸಿದ್ಧಾಂತಕ್ಕೊಂದು ಉದಾಹರಣೆಯಾಗಿದೆ.

'ಊರ ಮುಂದೆ ಹಾಲ ಹಳ್ಳ ಹರಿಯುತ್ತಿರಲು ಬಿಜ್ಜಳನ ಭಾಂಡಾರವೆನಗೇಕಯ್ಯ ?' ಊರ ಮುಂದೆ ಹರಿಯುವ ಹಾಲಹಳ್ಳವೆಂದರೆ ಬಸವಣ್ಣ ನಚ್ಚಿದ ಜನರು, ಪ್ರಜರು. ಪ್ರಜಾಬಲ, ಹಾಲಹಳ್ಳದಂತೆ ಹರಿಯುತ್ತಿದೆ. ಈ ಬಲದಿಂದ ಬೇಕಾದ ಕಲ್ಯಾಣ ರಾಜ್ಯವನ್ನು ಕಟ್ಟಬಹುದು. ಪ್ರಭುಶಕ್ತಿಯ ಉಪ್ಪುನೀರಿನ ಗೊಡವೆ ತನಗಿಲ್ಲವೆಂಬುದನ್ನು ಸೊಗಸಾಗಿ

ಅಭಿವ್ಯಕ್ತಿ ಸ್ವಾತಂತ್ರ್ಯ, ಧಾರ್ಮಿಕ ಸ್ವಾತಂತ್ರ್ಯ, ಆರ್ಥಿಕ ಸ್ವಾತಂತ್ರ್ಯ, ವೃತ್ತಿ ಸ್ವಾತಂತ್ರ್ಯ, ಶೋಷಣೆ ವಿರುದ್ಧ ಹಕ್ಕು, ಶೈಕ್ಷಣಿಕ ಮತ್ತು ಸಾಂಸ್ಕೃತಿಕ ಹಕ್ಕು – ಈ ಮುಂತಾದ ಹಕ್ಕುಗಳನ್ನು ಶರಣರು ಪಡೆದುಕೊಂಡಿದ್ದರು. ಇದಲ್ಲದೆ ಡಾಂಭಿಕತೆ, ಶೋಷಣೆ, ಮೂಢನಂಬಿಕೆಗಳ ಬಗ್ಗೆಯೂ ಚಿಂತಿಸುತ್ತಿದ್ದರು. ಶರಣರು ತಮ್ಮದೇ ಸಂವಿಧಾನವನ್ನು ನಿರ್ಮಾಣಮಾಡಿಕೊಂಡಿದ್ದರು. ಅಲಿಖಿತ ಸಂವಿಧಾನದ ಪ್ರಧಾನ ವ್ಯಕ್ತಿ ಅಲ್ಲಮ, ಅನುಭವ ಮಂಟಪವೇ ಆ ಸಂವಿಧಾನ. ಪ್ರಜರು ಮಾಡಬೇಕಾದ ಕರ್ತವ್ಯಗಳೇನು ? ಸುಶಿಕ್ಷಿತ ಸುಸಂಸ್ಕೃತ ಪ್ರಜನಿಂದ ಮಾತ್ರ ಕಲ್ಯಾಣ ರಾಜ್ಯ ಕಟ್ಟುವುದು ಸಾಧ್ಯವಾಗುತ್ತದೆಂಬುದನ್ನು ಅವರು ಅರಿತಿದ್ದರು.

ಡಾ|| ಎಂ. ಬಿ. ಹೂಗಾರ

ಈತ ಹೇಳುತ್ತಾನೆ. ಇದು ಬಸವಣ್ಣನ ಪ್ರಜಾಪ್ರಭುತ್ವವಾದಿ ನಿಲುವು.

ಈ ಪೂರ್ವದ ಜನರೆಲ್ಲ ತಮ್ಮ ಹಿತಕ್ಕೆ ದುಡಿದವರು. ಆದರೆ ಸಿದ್ಧರಾಮ ಹೇಳುವುದು ತನ್ನ ಹಿತ ಬಿಟ್ಟು ಅನ್ಯ ಹಿತ ನೋಡಬೇಕೆಂದು. ಈ ಅನ್ಯ ಹಿತವೇ ಜನತೆಯ ಹಿತ. ರಾಜಸತ್ತೆಯಲ್ಲಿ ಅರಸ ಪ್ರಜಾಪಾಲನ ಮಾಡುತ್ತಿದ್ದರೂ ಪ್ರಜೆಗೆ ಅರಸನ ವಿರುದ್ಧ ಅಥವಾ ಅನ್ಯಾಯದ ವಿರುದ್ಧ ಮಾತನಾಡುವ ಸ್ವಾತಂತ್ರ್ಯವಿರಲಿಲ್ಲ. ಸಮಗ್ರ ಜನತೆಯ ಅಭಿವೃದ್ಧಿಗಾಗಿ ಸಿದ್ಧರಾಮನ ದುಡಿಮೆ ದೊಡ್ಡದು. ಕೆರೆಗಳನ್ನು ನಿರ್ಮಾಣಮಾಡುವುದರ ಮೂಲಕ ಜನಪರ ಕಾಳಜಿಯನ್ನು ತೋರುತ್ತಾನೆ. ಇದರಿಂದ ಕೃಷಿ ಬೆಳವಣಿಗೆ ಸಾಂಪತ್ತಿಕ ಅಭಿವೃದ್ಧಿಯಾಗುವುದು. ಜನ ನೆಮ್ಮದಿಯಿಂದ ಬಾಳಲೆಂಬ ಉದಾತ್ತ ಭಾವನೆ ಅವನಲ್ಲಿತ್ತು.

ಸಮಾಜಕ್ಕೆ ಮಾಡದವರನ್ನು ಕುರಿತು ಸಿದ್ಧರಾಮನು ಹೀಗೆ ಹೇಳಿದ್ದಾನೆ :

*ಮಾಡಿದರು ಮಾಡಿದರು ತಮ್ಮ ಹಿತಕ್ಕಲ್ಲದೆ*
*ಮತ್ತಾರ ಹಿತಕ್ಕಲ್ಲ ನೋಡಯ್ಯಾ*
*ತನ್ನ ಬಿಟ್ಟನ್ಯ ಹಿತವ ನೋಡಿದಡೆ*
*ಕೂಡಿಕೊಂಬ ನಮ್ಮ ಕಪಿಲಸಿದ್ಧ ಮಲ್ಲಯ್ಯ.*

ಅನ್ಯ ಹಿತವೇ ಸಮಾಜ ಹಿತ. ಸಮಾಜ ಹಿತದಲ್ಲಿ ದೊರೆಯುವ ಆನಂದ ಪರಮಾನಂದ. ಸಮಾಜದ ಎಲ್ಲ ಜನತೆಯು ಸಂತೃಪ್ತಿಯಿಂದ ಬದುಕಬೇಕೆಂಬ ಧೋರಣೆ ಇಲ್ಲಿದೆ.

**ಧಾರ್ಮಿಕ ಸ್ವಾತಂತ್ರ್ಯ :** ಪ್ರಜಾತಂತ್ರದಲ್ಲಿ ಧಾರ್ಮಿಕ ಸ್ವಾತಂತ್ರ್ಯವಿದೆ. ವ್ಯಕ್ತಿ ಯಾವುದೇ ಧರ್ಮವನ್ನು ಸ್ವೀಕರಿಸಬಹುದು. ಎಲ್ಲ ಧರ್ಮೀಯರನ್ನು ಸಮಾನವಾಗಿ ಕಾಣುವುದು. ಸ್ತ್ರೀ-ಪುರುಷ, ಉಚ್ಚ-ನೀಚವೆಂಬ ಭೇದ-ಭಾವ ಇಲ್ಲಿಲ್ಲ. ಹನ್ನೆರಡನೆಯ ಶತಮಾನದಲ್ಲಿ ಬಸವಣ್ಣನವರು ಧಾರ್ಮಿಕ ಸ್ವಾತಂತ್ರ್ಯವನ್ನು ನೀಡಿದರು. ಬ್ರಾಹ್ಮಣ ಮೊದಲು ಅಂತ್ಯಜ ಕಡೆಯಾಗಿ ಎಲ್ಲರನ್ನೂ ಸಮಾನವಾಗಿ ಕಾಣುತ್ತಿದ್ದರು. ಅಂಗದ ಮೇಲೆ ಲಿಂಗವುಳ್ಳವರೆಲ್ಲ ಅವರಿಗೆ ಸಂಗಮನಾಥನೇ. ಭಕ್ತ ಮತ್ತು ಭಗವಂತರ ನಡುವೆ ಅಡ್ಡಗೋಡೆಯಂತೆ ನಿರ್ಮಾಣಗೊಂಡ ಪುರೋಹಿತಶಾಹಿ ಗೋಡೆಯನ್ನು ನಿರ್ನಾಮಗೊಳಿಸಿ ಜಡವಾದ ಗುಡಿ ಸಂಸ್ಕೃತಿಯನ್ನು ತೊಡೆದು ಹಾಕಿದರು. ಜನರು ತಮ್ಮ ಹೃದಯದಲ್ಲಿಯೇ ಭಗವಂತನನ್ನು ಕಾಣಬಹುದೆಂದು ದೇವಾಲಯಗಳಲ್ಲಿ ಬಂಧಿತನಾದ ಭಗವಂತನನ್ನು ಬಯಲಗೊಳಿಸಿದರು. ಜನರ ಕೈಗಳಿಗೆ ಇಷ್ಟಲಿಂಗವನ್ನು ನೀಡುವುದರ ಮೂಲಕ ಜನತಾ ಧರ್ಮವನ್ನು ಹುಟ್ಟು ಹಾಕಿದರು. ಅಂತರಂಗ-ಬಹಿರಂಗ ಶುದ್ಧಿಯಿಂದ ತನುವ ಸಂತೈಸಿಕೊಳ್ಳಲು ಹೇಳಿದರು.

*ಅಂತರಂಗದೊಳಗಿರ್ದ ನಿರವಯ ಲಿಂಗವನು*
*ಸಾವಯ ಲಿಂಗವ ಮಾಡಿ ॥*
*ಶ್ರೀ ಗುರುಸ್ವಾಮಿ ಕರಸ್ಥಲಕ್ಕೆ ತಂದು ಕೊಟ್ಟವನಾಗಿ*
*ಆ ಇಷ್ಟಲಿಂಗವೇ ಅಂತರಂಗವನಾವರಿಸಿ*
*ಅಂತರಂಗದ ಕರಣಂಗಳೆ ಕಿರಣಂಗಳಾಗಿ*
*ಬೆಳಗುವ ಚಿದಂಶವೇ ಪ್ರಾಣಲಿಂಗ*
*ಆ ಮೂಲ ಚೈತನ್ಯವೇ ಭಾವ*
*ಇದನರಿದು ನೋಡುವ ನೋಟ ಭಾವ*
*ಪರಿಪೂರ್ಣವಾಗಿ*
*ತಾನು ತಾನಾದಲ್ಲದೆ ಇದಿರಿಟ್ಟು ತೋರುವುದಿಲ್ಲವಾಗಿ*
*ಅಖಂಡ ಪರಿಪೂರ್ಣವಪ್ಪ ನಿಜವು ತಾನೆ*
*ಕೂಡಲಸಂಗಮದೇವ*

ಅಂತರಂಗದ ನಿರಾಕಾರ ಲಿಂಗ ಇಷ್ಟಲಿಂಗದ ಕುರುಹಾಗಿ ಕರಸ್ಥಲಕ್ಕೆ ಬಂದು ಅರಿವು ಮೂಡಿಸುವುದೆಂದು ಹೇಳುತ್ತ ಕುರುಹಿನ ಮೂಲಕ ಅರಿವು ನೋಡುವ ವಿಧಾನ ಹೇಳುತ್ತಾನೆ. ಆತ್ಮಜ್ಞಾನದಿಂದ ವಂಚಿತರಾದ, ಅಪಮಾನಿತ ಬದುಕನ್ನು ಬದುಕುತ್ತಿರುವ ಎಲ್ಲ ಜನರ ಉದ್ಧಾರವನ್ನು ಇಷ್ಟಲಿಂಗದ ಸಾರ್ವತ್ರೀಕರಣದಿಂದ ಮಾಡಿದ್ದಾನೆ. ಅವರಲ್ಲಿ ಆತ್ಮವಿಶ್ವಾಸ ತುಂಬಿದ್ದಾನೆ.

ಲಿಂಗಧರ್ಮದಲ್ಲಿ ಎಲ್ಲರೂ ಸಮಾನರು. ಬಸವಣ್ಣನವರು ಲಿಂಗದಲ್ಲಿ ಜಂಗಮನನ್ನು ಕಾಣುತ್ತಾರೆ. ಜಂಗಮವೆಂದರೆ ಅವರ ದೃಷ್ಟಿಯಲ್ಲಿ ಸಮಾಜ, ಚಲನಶೀಲವುಳ್ಳ ಸುಸಂಸ್ಕೃತ ಜನಸಮುದಾಯ. ಆದ್ದರಿಂದ ಜನಮುಖಿಯಾದ ಜಂಗಮಕ್ಕೆ ಅಂದರೆ ಲಾಂಛನಕ್ಕೆ ಶರಣೆನ್ನುತ್ತಾರೆ.



ಸಾರ್, ಇದು ತೀರ ಅತಿಯಾಯಿತೇನೋ ?

ಲಾಂಛನಕ್ಕೆ ಶರಣೆಂದರೂ ಆಚರಣೆಗೆ ಇವರು ಮಹತ್ವ ಕೊಡುತ್ತಾರೆ. ನಡೆ-ನುಡಿಗಳಲ್ಲಿ ಸಾವಯವ ಸಂಬಂಧವನ್ನು ಕಂಡ ಶರಣರು ಆಚರಣೆ ಸರಿಯಿರದಿದ್ದರೆ ಅಂತಹವರನ್ನು ದಾರಿಗೆ ತರಲು ಯತ್ನಿಸುತ್ತಾರೆ. 'ಲಾಂಛನಕ್ಕೆ ಶರಣೆಂದರೂ ಲಾಂಛನಕ್ಕೆ ತಕ್ಕ ಆಚರಣೆ ಇಲ್ಲದಿದ್ದರೆ ಕೂಡಲಸಂಗಮದೇವ ನೀ ಸಾಕ್ಷಿಯಾಗಿ ಛೀ ಎಂಬೆನು' ಎಂದು ಬಸವಣ್ಣ ಹೇಳುತ್ತಾರೆ.

ಕಲ್ಯಾಣ ರಾಜ್ಯ ನಿರ್ಮಿಸುವ ಕನಸು ಬಸವಣ್ಣನವರದು. ಆ ರಾಜ್ಯದ ಪ್ರಜರು ಸಾಮಾಜಿಕ, ಧಾರ್ಮಿಕ, ಆರ್ಥಿಕ ಸ್ವಾತಂತ್ರ್ಯವನ್ನು ಪಡೆಯಬೇಕು. ಜಾತಿ ಶೋಷಣೆಯ ಬಗ್ಗೆ ತಿಳಿದುಕೊಳ್ಳುವುದಕ್ಕಿಂತ ಅದರೊಳಗಿಳಿದು ಅವರೊಂದಿಗೆ ಬದುಕಿ ಅನುಭವಿಸಿದ ಅನುಭವ ಗಟ್ಟಿಯಾಗಿರುತ್ತದೆ. ಅಸ್ಪೃಶ್ಯತೆಯ ಕೂಪದಲ್ಲಿ ಬಿದ್ದವರನ್ನು ಎತ್ತಬೇಕೆಂದು ಬಸವಣ್ಣ ಅವರತ್ತ ಹೋಗಿ ಅವರೊಳಗೊಂದಾಗಿ ಅವರೊಂದಿಗೆ ಮೇಳೈಸಿ ಬಂದ. ಮಾದಾರ ಚೆನ್ನಯ್ಯನ ಮನೆಯ ಮಗನಾದಾಗ ಅವನಿಗೆ ಮನುಸಂಸ್ಕೃತಿಯ ಭೀಕರತೆಯ ಅರಿವಾಗುತ್ತದೆ.

*ಹೊಕ್ಕಳ ಹೊಕ್ಕು ನಿಮ್ಮೊಕ್ಕುದನುಂಬುವನ*
*ಕುಲವೇನೋ!*
*ದೇವಾ ನೀನೊಲಿದವನ ಸ್ವಾಮಿ ನೀ ಹಿಡಿದವನ*
*ಕುಲವೇನೋ!*
*ಕುಲಕ್ಕೆ ತಿಲಕ ನಮ್ಮ ಮಾದಾರ ಚನ್ನಯ್ಯ*
*ನಿಮ್ಮಿಂದಧಿಕ ಕೂಡಲಸಂಗಮದೇವಾ.*

ಮಹೋನ್ನತ ವ್ಯಕ್ತಿತ್ವದ ಮಾದಾರ ಚನ್ನಯ್ಯ ಬಸವಣ್ಣನವರ ದೃಷ್ಟಿಯಲ್ಲಿ ಕೂಡಲಸಂಗಮದೇವನಿಗಿಂತಲೂ ಹೆಚ್ಚಾಗಿದ್ದಾರೆ.

ಆದ್ದರಿಂದ ಬಸವಣ್ಣ ಸ್ಥಾವರಕ್ಕಳಿವುಂಟು ಜಂಗಮಕ್ಕಳಿವಿಲ್ಲ ಎಂದಿದ್ದಾರೆ.

ಗುಡಿಸಂಸ್ಕೃತಿಯಿಂದಾಗಿ ಜನ, ವಿಶೇಷವಾಗಿ ಶೂದ್ರರು ಉಪಾಸನಾ ಸ್ವಾತಂತ್ರ್ಯದಿಂದ ವಂಚಿತರಾಗಿದ್ದರು. ಸಮಾಜದ ಪ್ರಮುಖ ವಾಹಿನಿಯಿಂದ ಒಂದು ವರ್ಗದ ಜನ ಹೊರಗೇ ಉಳಿದಿದ್ದರು. ಬದುಕಿನಲ್ಲಿ ಭರವಸೆಯನ್ನೇ ಕಳೆದುಕೊಂಡವರ ಅದಮ್ಯ ಮಾನವ ಸಂಪತ್ತು ವ್ಯರ್ಥವಾಗುವುದನ್ನು, ಅವರ ಬದುಕು ದುರ್ಭರವಾದುದನ್ನು, ಕಂಡು ಬಸವಣ್ಣ ಮರುಗಿದ. ಉಪಾಸನೆಗಾಗಿ ದೇವಾಲಯಕ್ಕೆ ಹೋಗಿ ಒಳಗೆ ಪ್ರವೇಶಕ್ಕೆ ನಿಷೇಧಿತರಾಗಿ ಅಪಮಾನಗೊಳ್ಳುವುದಕ್ಕಿಂತ ನಿಮ್ಮ ದೇಹ ದೇವಾಲಯದಲ್ಲಿ ಭಗವಂತನನ್ನು ಕಂಡುಕೊಳ್ಳಿರೆಂದು ಹೇಳಿದರು.

*ಉಳ್ಳವರು ಶಿವಾಲಯ ಮಾಡುವರು*
*ನಾನೇನು ಮಾಡುವೆ ಬಡವನಯ್ಯಾ*
*ಎನ್ನ ಕಾಲೇ ಕಂಭ, ದೇಹವೇ ದೇಗುಲ, ಶಿರ ಹೊನ್ನ*
*ಕಲಶವಯ್ಯಾ*
*ಕೂಡಲಸಂಗಮದೇವಾ, ಕೇಳಯ್ಯಾ*
*ಸ್ಥಾವರಕ್ಕಳಿವುಂಟು ಜಂಗಮಕ್ಕಳಿವಿಲ್ಲ*

ಎಂದು ಹೇಳುತ್ತ ವ್ಯಷ್ಟಿ-ಸಮಷ್ಟಿಯ ಅಭಿನ್ನತೆ ತಿಳಿಸುತ್ತಾರೆ.

**ದುಡಿಮೆ ಸ್ವಾತಂತ್ರ್ಯ**

ವಚನಕಾಲದಲ್ಲಿ ದುಡಿಮೆ ಸ್ವಾತಂತ್ರ್ಯವಿತ್ತು. ಯಾರು ಯಾವುದೇ ವೃತ್ತಿಯನ್ನು ಮಾಡಬಹುದು. 'ಕಾಸಿ ಕಮ್ಮಾರನಾದ ಬೀಸಿ ಮಡಿವಾಳನಾದ ಹಾಸನಿಕ್ಕಿ ಸಾಲಿಗನಾದ' – ಎಂಬ ಮಾತು ಅವರವರ ಇಷ್ಟದ ಕಾಯಕವನ್ನು ತಿಳಿಸುತ್ತದೆ. ದುಡಿಮೆ ಮನುಷ್ಯನನ್ನು ಕ್ರಿಯಾಶೀಲಮಾಡುತ್ತದೆಯಲ್ಲದೆ ಜೀವಿಸುವ ಹಕ್ಕನ್ನು ಅದು ಕೊಡುತ್ತದೆ. ಈ ದುಡಿಮೆ ವ್ಯಕ್ತಿ ಹಿತ ಮತ್ತು ಸಮಾಜ ಹಿತಕ್ಕೆ ಪೂರಕ. ದುಡಿಮೆ ಕೇವಲ ಉಪಜೀವನದ ಮಾರ್ಗವಾಗದೆ ಕೈಲಾಸಕ್ಕೂ ದಾರಿಯಾಗಿತ್ತು. ಕಾಯಕದಲ್ಲಿಯೇ ಕೈಲಾಸ ಕಂಡ ಶರಣರು ಸುಖಿ ರಾಜ್ಯಕ್ಕೆ ಆದಾಯ ಹೆಚ್ಚಿಸಿದ್ದು ತಮ್ಮ ಸತ್ಯಶುದ್ಧಕಾಯಕದಿಂದ.

ಮಧ್ಯಕಾಲೀನ ಸಾಹಿತ್ಯದಲ್ಲಿ ಅಭಿಪ್ರಾಯ ಸ್ವಾತಂತ್ರ್ಯವಿತ್ತು. ಪತಿಯ ನೆರಳಿನಲ್ಲಿ ನಡೆಯುವ ಸತಿಗೂ ಪತಿಯ ತಪ್ಪನ್ನು ಎತ್ತಿ ಹೇಳುವ ಅಭಿಪ್ರಾಯ ಸ್ವಾತಂತ್ರ್ಯ (ಮಾತನಾಡುವ ಹಕ್ಕು) ವಿತ್ತು. ಆಯ್ದಕ್ಕಿ ಮಾರಯ್ಯ ತಂದ ಹೆಚ್ಚಿನ ಅಕ್ಕಿಯನ್ನು ಅವನ ಪುಣ್ಯಸ್ತ್ರೀ – 'ಈಸಕ್ಕಿ ಯಾಕೆ ನಿಮಗೇಕೆ ಬೇಸಿಕ್ಕೆ ಬಾರಯ್ಯ' ಎಂದು ಹೇಳುವಲ್ಲಿ ಲಕ್ಕಮ್ಮೆಯ ಅಭಿಪ್ರಾಯ ಸ್ವಾತಂತ್ರ್ಯದ ವೈಭವವನ್ನು ನೋಡಬೇಕು!

ಅಕ್ಕಮಹಾದೇವಿಯಂತೂ ಭಗವಂತನಿಗೆ ಸವಾಲೆಸೆಯುತ್ತಾಳೆ. 'ಕೇಳುವಡೆ ಕೇಳು ಕೇಳದಿರ್ದಡೆ ಮಾಣು [illegible] ಹಾಡಿದೆನಲ್ಲದೆ ಸೈರಿಸಲಾರೆ!' ಸ್ವಾತಂತ್ರ್ಯದ [illegible]

ೀರೆ. ಅದು ನೈಸರ್ಗಿಕವಾದುದು. ಅದರ ಆನಂದ ನುಭವಿಸಿದವರಿಗೇ ಗೊತ್ತು. ಅಕ್ಕನ ನಿರಾಭಾರ ್ವತಂತ್ರ್ಯ ನೋಡಿ –

ಹಸಿವಾದೊಡೆ ಭಿಕ್ಷಾನ್ನಗಳುಂಟು
ತೃಷೆಯಾದೊಡೆ ಕೆರೆ ಭಾವಿಗಳುಂಟು
ಶಯನಕೆ ಹಾಳು ದೇಗುಲಗಳುಂಟು
ಆತ್ಮ ಸಂಗಾತಕ್ಕೆ ಚೆನ್ನಮಲ್ಲಿಕಾರ್ಜುನ ನೀನೆನಗುಂಟು.

'ಅನ್ಯರ' ಹಂಗೇಕೆನ್ನುವಲ್ಲಿ ಪರಾವಲಂಬನೆಯ ಕಹಿ, ್ವಾವಲಂಬನದ ಸುಖವನ್ನು ಆಕೆ ಒತ್ತಿಹೇಳುತ್ತಾಳೆ.

ಪ್ರಜಾತಂತ್ರದಲ್ಲಿ ಪ್ರಜನ ಹಕ್ಕು ಮತ್ತು ಕರ್ತವ್ಯಗಳ ುರಿತು ಹೇಳಲಾಗುತ್ತದೆ. ಲಿಖಿತ ಇಲ್ಲವೆ ಅಲಿಖಿತ ಂವಿಧಾನದಲ್ಲಿ ಅವುಗಳ ಸ್ಪಷ್ಟ ಉಲ್ಲೇಖವಿರುತ್ತದೆ. ಅದರಂತೆ ೧೨ನೆಯ ಶತಮಾನದ ಶರಣರು ಹಕ್ಕು ಮತ್ತು ರ್ತವ್ಯಗಳೆರಡನ್ನೂ ಹೇಳುತ್ತಾರೆ. ಸ್ವಾತಂತ್ರ್ಯ, ಸಮಾನತೆ, ಾಗೂ ಸೋದರತ್ವಗಳ ಜೊತೆಗೆ ಕಾಯಕ ಮತ್ತು ಾಸೋಹದಂತಹ ಉದಾತ್ತ ತತ್ವಗಳನ್ನು ಜಾರಿಗೊಳಿಸು ುದರ ಮೂಲಕ ಪ್ರಜಾತಂತ್ರವನ್ನು ನಿಜವಾದ ಅರ್ಥದಲ್ಲಿ ರಣರು ಆಚರಣೆಯಲ್ಲಿ ತಂದಿದ್ದರು.

ಅಭಿವ್ಯಕ್ತಿ ಸ್ವಾತಂತ್ರ್ಯ, ಧಾರ್ಮಿಕ ಸ್ವಾತಂತ್ರ್ಯ, ಆರ್ಥಿಕ ್ವಾತಂತ್ರ್ಯ, ವೃತ್ತಿ ಸ್ವಾತಂತ್ರ್ಯ, ಶೋಷಣೆ ವಿರುದ್ಧ ಹಕ್ಕು, ್ೈಕ್ಷಣಿಕ ಮತ್ತು ಸಾಂಸ್ಕೃತಿಕ ಹಕ್ಕು – ಈ ಮುಂತಾದ ಹಕ್ಕುಗಳನ್ನು ಶರಣರು ಪಡೆದುಕೊಂಡಿದ್ದರು. ಇದಲ್ಲದೆ ಡಾಂಭಿಕತೆ, ಶೋಷಣೆ, ಮೂಢನಂಬಿಕೆಗಳ ಬಗ್ಗೆಯೂ ಚಿಂತಿಸುತ್ತಿದ್ದರು. ಶರಣರು ತಮ್ಮದೇ ಸಂವಿಧಾನವನ್ನು ನಿರ್ಮಾಣ ಮಾಡಿಕೊಂಡಿದ್ದರು. ಅಲಿಖಿತ ಸಂವಿಧಾನದ ಪ್ರಧಾನ ವ್ಯಕ್ತಿ ಅಲ್ಲಮ, ಅನುಭವ ಮಂಟಪವೇ ಆ ಸಂವಿಧಾನ. ಪ್ರಜರು ಮಾಡಬೇಕಾದ ಕರ್ತವ್ಯಗಳೇನು ? ಸುಶಿಕ್ಷಿತ ಸುಸಂಸ್ಕೃತ ಪ್ರಜನಿಂದ ಮಾತ್ರ ಕಲ್ಯಾಣ ರಾಜ್ಯ ಕಟ್ಟುವುದು ಸಾಧ್ಯವಾಗುತ್ತದೆಂಬುದನ್ನು ಅವರು ಅರಿತಿದ್ದರು. ಇದಕ್ಕೆ ಬಸವಣ್ಣನ ಒಂದು ವಚನ ಸಾಕ್ಷಿಯಾಗುತ್ತದೆ.

ಕಳಬೇಡ ಕೊಲಬೇಡ
ಹುಸಿಯ ನುಡಿಯಲುಬೇಡ
ಮುನಿಯಬೇಡ ಅನ್ಯರಿಗಸಹ್ಯಪಡಬೇಡ
ತನ್ನ ಬಣ್ಣಿಸಬೇಡ ಇದಿರು ಹಳಿಯಲು ಬೇಡ

ಎಂದು ಹೇಳುತ್ತಾನೆ. ಇವು ಪ್ರಜರ ಅಂತರಂಗ, ಬಹಿರಂಗ ಶುದ್ಧಿಗೆ ಕಾರಣವಾಗುತ್ತವೆ. ಇಂಥ ಪ್ರಜರಿಂದ ಮಾತ್ರ ಕಲ್ಯಾಣ ರಾಜ್ಯ ಕಟ್ಟಬಹುದು. ಅಂದಾಗ ವ್ಯಕ್ತಿ ಸ್ವಾತಂತ್ರ್ಯದ ಉಸಿರನ್ನು ಉಸಿರಾಡುವನು. ಪ್ರಜಾತಂತ್ರದ ಮೂಲ ಆಶಯ ಇದೇ ಎಂಬುದನ್ನು ಶರಣರು ಮನಗಂಡಿದ್ದರು.

ವಸ್ತುವಿನ ಆಯ್ಕೆಯಲ್ಲಿ ಸ್ವಾತಂತ್ರ್ಯವನ್ನು ಪಡೆದುಕೊಂಡ ಹರಿಹರನಲ್ಲಿಯೂ ಪ್ರಜಾತಂತ್ರ ಮನೋಭಾವವನ್ನು ನಾವು ಕಾಣಬಹುದು. ಸ್ವಾತಂತ್ರ್ಯ (ಅಭಿಪ್ರಾಯ ಸ್ವಾತಂತ್ರ್ಯ) ಪ್ರಜಾತಂತ್ರದ ಮೂಲ ಜೀವಧಾತು. ಹರಿಹರನು ನರಸಿಂಹ ಬಲ್ಲಾಳನ ಅರಮನೆಯಲ್ಲಿ ಕರಣಿಕ ವೃತ್ತಿಯನ್ನು ಮಾಡಿಕೊಂಡಿದ್ದನೆಂದು ಹೇಳುತ್ತಾನೆ. ಆ ಕೆಲಸ ಅವನ ಸ್ವತಂತ್ರ ಮನೋಭಾವಕ್ಕೆ ಒಗ್ಗದ ಕಾರಣ ತಿರುಗಿ ಹಂಪೆಗೆ ಬಂದು ನೆಲೆಸಿದ. ನೃಸಿಂಹ ಬಲ್ಲಾಳನ ಸೇವೆಗಿಂತ ಹಂಪೆಯಾಳ್ದನ ಸೇವೆ ಅವನಿಗೆ ತೃಪ್ತಿಯನ್ನು ಕೊಟ್ಟಿದೆ. 'ಸೇವೆಯ ಕಷ್ಟವೃತ್ತಿಯಂ ನೀಗಿದೆನಿಂದು ನಿಮ್ಮ ದೆಸೆಯಿಂ ಕರುಣಾಕರ ಹಂಪೆಯಾಳ್ದನೇ' ಎಂದು ತನ್ನ ಪಂಪಾಶತಕ ದಲ್ಲಿ ಹೇಳಿದ್ದಾನೆ. ಹರಿಹರನಲ್ಲಿ ಅರಸೊತ್ತಿಗೆ ಆಡಳಿತ ಬೇಸರವನ್ನುಂಟುಮಾಡಿ ಅವನ ಮನ ಸ್ವಾತಂತ್ರ್ಯದ ಪ್ರಜಾತಂತ್ರ್ಯದತ್ತ ತುಡಿಯುತ್ತಿತ್ತು. ಆದ್ದರಿಂದ ತನ್ನ ಬಸವರಾಜದೇವರ ರಗಳೆಯಲ್ಲಿ 'ನೆಲನಾಳ್ದನನ ಹೆಣವೆಂದರೆ ಒಂದಡಕೆಗೆ ಕೊಂಬರಿಲ್ಲ' ಎಂದು ಅರಸೊತ್ತಿಗೆಯನ್ನು ಪರ್ಯಾಯವಾಗಿ ಟೀಕಿಸುತ್ತಾನೆ.

ಹರಿಹರನು 'ನರರೀವುದೇಂ ನರರಿಂದಪ್ಪುದೇಂ ನೆನೆವೊಡೆ ಕಡು ಪೆಂಪಿನ ಹಂಪೆಯಾಳ್ದನಂ ನೆನೆ' ಎಂದು ಪರಮಾತ್ಮನನ್ನು ಮೆಚ್ಚಿ ಕಾವ್ಯ ಬರೆಯಬೇಕೆಂದು ಹೇಳಿದರೂ ರಾಘವಾಂಕನ ಅಭಿವ್ಯಕ್ತಿ ಸ್ವಾತಂತ್ರ್ಯ ಮತ್ತು ವಸ್ತುವಿನ ಆಯ್ಕೆಯ ಸ್ವಾತಂತ್ರ್ಯ ಸುಮ್ಮನೇ ಕೂಡಲಿಲ್ಲ.

ರಾಘವಾಂಕನು ವಸಿಷ್ಠ – ವಿಶ್ವಾಮಿತ್ರರ ಸಂವಾದದ ಮೂಲಕ ಅಭಿಪ್ರಾಯ ಸ್ವಾತಂತ್ರ್ಯವನ್ನು ಮೆರೆದಿದ್ದಾನೆ.

# ಅಮ್ಮಾ ಚಿತ್ರ ಬರೆಯಲಾ ?



ಪುಟ್ಟ ಮಗಳು ಸೆರಗು ಜಗ್ಗಿ
ಕೇಳುವಳು, 'ಅಮ್ಮಾ ಚಿತ್ರ ಬರೆಯಲಾ ?'

ಬಾಕ್ಸ್ ತುಂಬ ಬಣ್ಣ
ಪೆನ್ಸಿಲ್ ಕಡ್ಡಿ ಮೊನೆ
-ಯಲ್ಲಿ ಕನಸು ಕೆತ್ತಿ
ಚೂಪಾಗಿಸಿದೆ.

ಗೀಚು ಗೀಚು ಮಾಡಿ
ಮನೆ ಎಂದಿತು ಮಗು
ನೀರು ಹರಿಸಿತು ಅಲ್ಲೇ
ಮೇಲೊಂದು ದೋಣಿ ತೇಲಿ
ಕೆಳಗೊಂದು ಮೀನು ಜಾರಿ
ನಿಂತಿತು.

ಮನೆ ಸುತ್ತ ನಂದನವನ
ಹಸಿರು ಮೋಡಹೊತ್ತ ಮರ
ಎಲೆಗೊಂದೊಂದು ಬಣ್ಣ
ಹಗುರ ಹತ್ತಿ ತೇಲಿದಂತೆ
ಕೆಂಪು ಹಸಿರು ನೀಲಿಯಂತೆ

ಗುಡ್ಡ ನಕ್ಕಿತು ಹಿಂದೆ
ಕಾಡು ಅರಳಿತು ಮುಂದೆ
ಮರದ ತಲೆಗೆ ಹೂವು
ಬಂತು, ಗುಚ್ಛವಾಗಿ ಪಕ್ಷಿ
ಹಾರಿ ಹೋಯ್ತು

ಮಗಳೇ, ಚಿತ್ರ ಮುಗಿಯಿತಾ ?

ಗುಡ್ಡ ಹಸಿರು ಕರಗಿ
ಯಾವ ಕಾಲವಾಯ್ತು ?
ಕಲ್ಲು ಎಬ್ಬಿಸಿ ಚಕ್ಕೆ ಚೂರಾಗಿ
ಬೆಟ್ಟ ಸಿಡಿದು ಜೋರಾಗಿ
ಶಬ್ದದ ಧೂಳು ಮಸುಕಾಗಿ

ಹಸಿರು ಎಲೆವನೆ ಮುಂದೆ
ದೋಣಿಯೂ ಸಾಗದು
ಮೀನೂ ಈಜದು
ನಾನೊಮ್ಮೆ ಬರೆದ ಚಿತ್ರ
ಬಹುಮಾನ ಪಡೆದು
ಮೂಲೆ ಹಿಡಿದಿದೆ

ಮಗಳೀಗ, ಅದೇ ದೋಣಿ
ಅದೇ ಗುಡ್ಡ
ಅದೇ ನೀರು
ಅದೇ ಉದಯರವಿ-ಯ
ಚಿತ್ರ ಬರೆಯಲು
ತಯಾರು



ಅವಳ ಮನೆಯ ಸುತ್ತ
ಕನಸು ಹರಿದಾಡಿದೆ
ನೀರು ಹರಿಯುತಲಿದೆ
ಗುಡ್ಡ ಚೂಪಾಗಿ ಮುಗಿಲು
ತಾಕಿದೆ
ಮಧ್ಯೆ ರವಿಯ ಕೆಂಪು

ಮಗಳೇ ಚಿತ್ರ ಬರಿ,
ಬಿಡಬೇಡ.

ಆರ್. ತಾರಿಣಿ ಶುಭದಾಯಿನಿ
ಇಂಗ್ಲಿಷ್ ಉಪನ್ಯಾಸಕಿ, ಸರ್ಕಾರಿ ಕಲಾ ಕಾಲೇಜು ಚಿತ್ರದುರ್ಗ - ೫೭೭೫೦೧

ಭೂಲೋಕದಲ್ಲಿ ಹುಸಿಯದ ವ್ಯಕ್ತಿ ಹರಿಶ್ಚಂದ್ರನೇ ಎಂದು ವಸಿಷ್ಠ ಹೇಳುವದು, ವಿಶ್ವಾಮಿತ್ರ ಅದನ್ನು ಪ್ರಶ್ನಿಸುವುದು ಇದು ಒಂದರ್ಥದಲ್ಲಿ ಡೆಮೊಕ್ರೆಟಿಕ್ ಆಗಿಯೇ ಸಾಗುತ್ತದೆ. ಇವರ್‍ಯಾರೂ ತಮ್ಮ ತಮ್ಮ ಅಭಿಪ್ರಾಯಗಳನ್ನು ಹತ್ತಿಕ್ಕಿಸಿಕೊಳ್ಳುವುದಿಲ್ಲ.

ಮಹಾಕವಿ ರಾಘವಾಂಕನು ಹರಿಶ್ಚಂದ್ರನ ಮೂಲಕ ಪ್ರಜಾವಾತ್ಸಲ್ಯವನ್ನು ತೋರಿದ್ದು ಕವಿಗಿರುವ ಪ್ರಜಾಪ್ರಭುತ್ವದ ಮೇಲಿನ ಪ್ರೀತಿಯನ್ನು ತೋರಿಸುತ್ತದೆ. ಕಾಡುಮೃಗಗಳು ನಾಡೊಳಗೆ ನುಗ್ಗಿ ಕೀಟಲೆ ಕೊಡುವ ಸಂದರ್ಭದಲ್ಲಿ ಅರಸ ಪ್ರಜಾಪಾಲನೆಗಾಗಿ ಬೇಟೆಗೆ ಹೋಗುವ ಪ್ರಸಂಗ ಇದಕ್ಕೊಂದು ಉದಾಹರಣೆಯಾಗಿದೆ. ವಿಶ್ವಾಮಿತ್ರ ಸೃಷ್ಟಿಸಿದ ಹೊಲತಿಯರು ಅರಸನನ್ನು ಲಗ್ನವಾಗುವಂತೆ ಕೇಳುವ ಸಂಗತಿ ಶೂದ್ರರೂ ಉಚ್ಚವರ್ಣದವರನ್ನು ವಿವಾಹವಾಗುವ ಸ್ವಾತಂತ್ರ್ಯವನ್ನು ವ್ಯಕ್ತಪಡಿಸುತ್ತದೆ. ವಚನಕಾಲದ ವರ್ಣಸಂಕರಣದ ಕಾವು ಇನ್ನೂ ಬಿಸಿಯಿತ್ತು. ಇದೇ ಸ್ವಾತಂತ್ರ್ಯದ ಗಾಳಿಯು ಇನ್ನೂ ಸೂಸುತ್ತಿತ್ತು.

ಕುಮಾರವ್ಯಾಸ ತನ್ನ ಭಾರತದಲ್ಲಿ ಸಂಧಾನದ ಸಂದರ್ಭದಲ್ಲಿ ಪಾಂಡವರ ಅಭಿಪ್ರಾಯಗಳನ್ನು ಕೇಳುವದು ಒಂದರ್ಥದಲ್ಲಿ ಜನಾಭಿಪ್ರಾಯವೇ. ಮನಸ್ಸು ಮಾಡಿದ್ದರೆ ಕೃಷ್ಣ ಸರ್ವಾಧಿಕಾರವನ್ನು ನಡೆಸ ಬಹುದಿತ್ತು. ಪಾಂಡವರ ಅಭಿಮತ ಕೇಳದೆ ಧರ್ಮ ಸಂಸ್ಥಾಪನಾರ್ಥ ಯುದ್ಧ ಘೋಷಿಸಬಹುದಿತ್ತು. ಆದರೆ ಹಾಗೆ ಅವನು ಮಾಡುವುದಿಲ್ಲ. ಧರ್ಮನನ್ನಾದಿ ಮಾಡಿ ನಕುಲಸಹಿತ ಎಲ್ಲರನ್ನು ಅವರವರ ಅಭಿಪ್ರಾಯ ಕೇಳುವುದರ ಮೂಲಕ ಪ್ರಜಾತಂತ್ರವನ್ನು ಮೆರೆಯುತ್ತಾನೆ. ಇದರ ಜೊತೆಗೆ ವ್ಯಕ್ತಿಗೌರವದ ಹಿರಿಮೆಯನ್ನು ಹೇಳಿಕೊಟ್ಟಿದ್ದಾನೆ.

ಕುಮಾರವ್ಯಾಸನು 'ಅಕ್ಷಯಾಂಬರ' ಪ್ರಸಂಗದಲ್ಲಿ ದ್ರೌಪದಿಯ ಮೂಲಕ ಹೇಳಿಸಿದ ಮಾತು ಅರ್ಥಪೂರ್ಣವಾಗಿದೆ. ತುಂಬಿದ ಸಭೆಯಲ್ಲಿ ಮಾನವತಿಯಾದ ದ್ರೌಪದಿಯ ಸೀರೆಯನ್ನು ಸೆಳೆಯುವಾಗ ದ್ರೌಪದಿಯು ಸಭೆಯನ್ನು ಪ್ರಶ್ನಿಸುವ ಮೂಲಕ ತನ್ನ ಸ್ವಾತಂತ್ರ್ಯವನ್ನು ಮೆರೆದಿದ್ದಾಳೆ.

ಹಿರಿಯರಿಲ್ಲದ ಸಭೆ ಮನುಷ್ಯರ<br>
ನೆರವಿಯದು ಸಭೆಯಲ್ಲ ಮೂರ್ಖರು<br>
ಹಿರಿಯರಲ್ಲ ಯಥಾರ್ಥಭಾಷಣ ಭೀತಚೇತನರು<br>
ಹಿರಿಯರಿದೆ ಸಾಮಾಜಿಕರು ಸ<br>
ಚ್ಚರಿತರಿದೆಲಾ ಸ್ತ್ರೀಮತವನು<br>
ತ್ತರಿಸಲಾಗದೆ ಧರ್ಮಶಾಸ್ತ್ರದೊಳೆಂದಳಿಂದುಮುಖಿ.

ಪ್ರಜೆ ಯಾರು ? ಅವನು ಹೇಗಿರಬೇಕು ? ಸುಶಿಕ್ಷಿತ ಸುಸಂಸ್ಕೃತ ಪ್ರಜೆಯಿದ್ದರೆ ದುರಂತ ತಪ್ಪುವುದೆಂಬ ಸಲಹೆ ಪ್ರಜಾತಂತ್ರದ ಹಿರಿಮೆಯನ್ನು ಹೇಳುತ್ತದೆ.

ಕುಮಾರವ್ಯಾಸನೇ ಚಿತ್ರಿಸಿದ ಇನ್ನೊಂದು ಪ್ರಸಂಗ ನೆತ್ತದಲಿ ದ್ರೌಪದಿಯನ್ನು ಸೋತದ್ದು. ಕವಿ ಇಲ್ಲಿ ಪ್ರಜರ ಹಿತರಕ್ಷಣೆ ಮಾಡುವ ಔಚಿತ್ಯವನ್ನು ನಿರೂಪಿಸುತಾನೆ. ಆ ಮೂಲಕ ಪ್ರಜರಿಗೆ ಹಕ್ಕಿದ್ದರೆ ಕ್ಷೇಮ, ಅಂಥ ಸರಕಾರವೇ ಶ್ರೇಷ್ಠ ಸರಕಾರವೆಂಬುದನ್ನು ಪರ್ಯಾಯವಾಗಿ ತಿಳಿಸುತಾನೆ.

ಪತಿಗಳೆನ್ನನು ಮಾರಿ ಧರ್ಮ<br>
ಸ್ಥಿತಿಯ ಕೊಂಡರು ಭೀಷ್ಮ ಮೊದಲಾ<br>
ದತಿರಥರು ಪರಹಿತವ ಬಿಸುಟರು ವ್ಯರ್ಥಭೀತಿಯಲಿ.

ಎಲ್ಲಿ ಪ್ರಜರ ಯೋಗಕ್ಷೇಮ ನೋಡುವುದಾಗುವುದಿಲ್ಲವೊ ಅಲ್ಲಿ ಧರ್ಮಕ್ಕೇನರ್ಥ ? ಭೀಷ್ಮ ಮೊದಲಾದ ಅತಿರಥರು 'ಪರಹಿತವ ಬಿಸುಟರು ವ್ಯರ್ಥಭೀತಿಯಲಿ'. ಇವರಿಗೆ ಅರಸನ ಸರ್ವಾಧಿಕಾರತ್ವದ ಭೀತಿ. ಒಳಗೊಳಗೆ ಇವರ ಸ್ವಾತಂತ್ರ್ಯ ನರಳುತ್ತಿದೆ. ಮುಖ ತಿರುವುತ್ತಾರೆ. ಸರ್ವಾಧಿಕಾರದಿಂದ ಅರಸ ಅಹಂಕಾರಿಯಾಗುವ ಅಪಾಯವಿದೆ. ಭೀಷ್ಮನಂತಹರೂ ದುರ್ಯೋಧನನ ಸರ್ವಾಧಿಕಾರಕ್ಕೆ ಹೆದರುತ್ತಾರೆ. ಇಂಥಲ್ಲಿ 'ಧರ್ಮ'ವನ್ನು ಉಳಿಸಿಕೊಂಡು ಈ ಐವರು ಗಂಡಂದಿರು ಸಾಧಿಸುವುದಾದರೂ ಏನು ?

**ಸ್ವಯಂವರ ಪದ್ಧತಿ**

ಸ್ವಯಂವರ ಪದ್ಧತಿಯು ವ್ಯಕ್ತಿ ಸ್ವಾತಂತ್ರ್ಯದ ಕುರುಹು. ಮದುವೆಯ ಸಂದರ್ಭದಲ್ಲಿ ಗಂಡು-ಹೆಣ್ಣಿನ ಅಭಿಪ್ರಾಯ ಕೇಳಬೇಕಾದುದು ವಿಹಿತ. ಆದರೆ ಇಂದೂ ಕೆಲವು ಕಡೆ ಹೆಣ್ಣಿನ ಅಭಿಪ್ರಾಯ ಕೇಳದೆ ವಿವಾಹ ಮಾಡುವುದುಂಟು. ಒಲ್ಲದ ಮನಸ್ಸಿನಿಂದ ವಿವಾಹವಾದ ಆ ಹೆಣ್ಣಿನ ಯಾತನಾಮಯ ಬದುಕು ಅಸಹನೀಯ !

ಕುಮಾರವ್ಯಾಸನು ದ್ರೌಪದಿಯ ಸ್ವಯಂವರದ ಪ್ರಸಂಗದಲ್ಲಿ 'ಗಂಡ'ನ್ನು ಆರಿಸುವ ಸ್ವಾತಂತ್ರ್ಯವನ್ನು ಹೆಣ್ಣಿಗೆ ಕೊಡುತ್ತಾನೆ. ಪ್ರಜಾಪ್ರಭುತ್ವ ಸರಕಾರದಲ್ಲಿ 'ಗಂಡಿಗೆ' ಹೆಣ್ಣು ಆರಿಸುವ ಸ್ವಾತಂತ್ರ್ಯವಿದ್ದರೆ ನಮ್ಮ ಕವಿಗಳು ಇದಕ್ಕೂ ಮುಂದೆ ಹೋಗಿ ಹೆಣ್ಣಿಗೆ 'ಗಂಡನ್ನು' ಆರಿಸುವ (ಸ್ವಯಂವರ) ಅವಕಾಶವನ್ನು ಕೊಟ್ಟಿದ್ದಾರೆ.

ದ್ರೌಪದಿಯ ಸಹೋದರ ದೃಷ್ಟದ್ಯುಮ್ನ ಅರಮನೆಯ ಉತ್ತಮಾಸನಗಳಲ್ಲಿ ಕುಳಿತ ರಾಜರತ್ತ ದ್ರೌಪದಿಯನ್ನು ಕರೆದು ತೋರಿಸುತ್ತಾನೆ. ಅವರ ಯೋಗ್ಯತೆಗಳನ್ನೆಲ್ಲ ಅರುಹುತ್ತಾನಾದರೂ ದ್ರೌಪದಿ ಯಾರನ್ನೂ ಮೆಚ್ಚದೆ ಕೊನೆಗೆ ಅರ್ಜುನನ ಶೌರ್ಯಕ್ಕೆ ಮೆಚ್ಚಿ ಲಗ್ನವಾಗುತ್ತಾಳೆ. ಶೌರ್ಯವೇ ಒಂದು ಮೌಲ್ಯವಾದ ಸಂದರ್ಭದಲ್ಲಿ ವೀರ ಪುರುಷನನ್ನು ಆಯ್ಕೆ ಮಾಡಿಕೊಳ್ಳುವ ಸ್ವಾತಂತ್ರ್ಯ ಅಂದಿನ ಮಹಿಳೆಯರಿಗಿದ್ದುದು ಗಮನಾರ್ಹ ಸಂಗತಿ. ಇದಕ್ಕೆ ಲಕ್ಷ್ಮೀಶನ ಜೈಮಿನಿ ಭಾರತದಲ್ಲಿ ಬರುವ ಸೀತಾಸ್ವಯಂವರದಲ್ಲಿಯ ಸೀತೆಯ ಸ್ವಾತಂತ್ರ್ಯವೂ ಪ್ರಜಾತಂತ್ರದ ತಂತು !

ಜನ್ನನ ಯಶೋಧರ ಚರಿತ್ರೆಯಲ್ಲಿ ಅಮೃತಮತಿಯು ಅಷ್ಟಾವಂಕನನ್ನು ಪ್ರೀತಿಸಿದ ಸಂದರ್ಭ ಅವಳ 'ಪ್ರೀತಿ' ಸ್ವಾತಂತ್ರ್ಯ ಸ್ವೇಚ್ಛಾಚಾರವೆಂದು ಮೇಲ್ನೋಟಕ್ಕೆ ತೋರಬಹುದು. ಆದರೆ ಜನ್ನ ಅವಳ ದೈಹಿಕ ಬಯಕೆಯನ್ನೀಡೇರಿಸದ ಪುರುಷನನ್ನು ತಿರಸ್ಕರಿಸುವ ಸ್ವಾತಂತ್ರ್ಯವನ್ನು ಅಮೃತಮತಿಗೆ ನೀಡಿದ್ದಾನೆ.

– 'ಕಮಲದ ಹೂವಿನಿಂದ ಅಮೃತಮತಿಗೆ ಹೊಡೆದರೂ ಅವಳು ಮೂರ್ಛೆಹೋಗುತ್ತಾಳೆ. ಅವನ ಚೇಷ್ಟೆ ಪ್ರಣಯ ಚೇಷ್ಟೆ ಅಲ್ಲವೆಂದು ಅವಳಿಗೆ ನೋವಾಗುತ್ತದೆ'. ಹಿಂದಿನ ರಾತ್ರಿ ಬೀಟೆಯ ಕಾಲಿನಿಂದ ಬದಗನಿಂದ ಒದಿಸಿಕೊಂಡ ಅವಳನ್ನು ನೋಡಿದ ಯಶೋಧರ 'ಅಕಟಕಟ ಎತ್ತಿರೆ ಸುಕುಮಾರಿಯನು' ಎಂದು ಅವಳನ್ನು ಮಾತಿನಿಂದ ಚುಚ್ಚುತ್ತಾನೆ. ಆದರೆ ಅಮೃತಮತಿಯ ಪ್ರೀತಿ ಮಾತ್ರ ಅಷ್ಟಾವಂಕನಲ್ಲಿ ಗಟ್ಟಿಗೊಂಡಿದೆ. ಅವಳು ತನ್ನ ಸ್ವಾತಂತ್ರ್ಯಕ್ಕೆ ಧಕ್ಕೆ ತಂದುಕೊಳ್ಳದೆ ತನ್ನ ಇಂಗಿತವನ್ನು ಅಷ್ಟಾವಂಕನಲ್ಲಿ ತೋಡಿಕೊಳ್ಳುತ್ತಾಳೆ. 'ಬಡಿ ಮುನಿಯದಿರ್' ಎಂದು ಹೇಳುವಲ್ಲಿ ತನ್ನ ಅನನ್ಯ ಪ್ರೀತಿಯನ್ನು ಅವಳು ಮುಕ್ತವಾಗಿ ಹೇಳಿಕೊಂಡಿದ್ದಾಳೆ.

ದಾಸರಲ್ಲಿ ಪುರಂದರ-ಕನಕದಾಸರು ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಪಡೆದಿದ್ದಾರೆ. ವ್ಯಕ್ತಿಯ ದೌರ್ಬಲ್ಯವನ್ನು ಅವನ ಹಿರಿಯ ಗುಣಗಳೆರಡನ್ನೂ ಪ್ರಸ್ತಾಪಿಸುತ್ತ ಕೃಷ್ಣ ಭಕ್ತಿಯಲ್ಲಿ ಇವರು ತಮ್ಮನ್ನು ಕರಗಿಸಿಕೊಳ್ಳುತ್ತಾರೆ.

ಕನಕ ಕಿಂಡಿಯ ಘಟನೆಯ ಐತಿಹಾಸಿಕತೆಯ ಕುರಿತು ಆಲೋಚಿಸುವುದಕ್ಕಿಂತ ಸನ್ನಿವೇಶದ ಪ್ರಸ್ತುತತೆಯ ಬಗ್ಗೆ ಪ್ರಜಾತಾಂತ್ರಿಕತೆಯ ಹಿನ್ನೆಲೆಯಲ್ಲಿ ಚರ್ಚಿಸುವದು ಹೆಚ್ಚು ಸೂಕ್ತವೆನಿಸುತ್ತದೆ. ಕೃಷ್ಣದರ್ಶನಕ್ಕೆ ಪುರೋಹಿತರು ಅಡೆತಡೆಯನ್ನುಂಟುಮಾಡಿದಾಗ ಕನಕದಾಸರು ಭಕ್ತಿಯಿಂದ ಭಗವಂತನಲ್ಲಿ ಮೊರೆಯಿಡುತ್ತಾರೆ. ಶ್ರೀಸಾಮಾನ್ಯ ಪ್ರಜೆಯೊಬ್ಬನ ಪ್ರತೀಕವಾಗಿ ಭಗವಂತನನ್ನು ತನ್ನ ಅನನ್ಯ ಭಕ್ತಿಯಿಂದ ಜನರತ್ತ ಕರೆದು ತೋರುತ್ತಾನೆ. ತನ್ನ ಭಕ್ತಿಯನ್ನು ಒರೆಗೆ ಹಚ್ಚಿ ಕೃಷ್ಣನ ಕೃಪೆಗೆ ತಾನು ಪಾತ್ರವಾಗುವುದರ ಜೊತೆಗೆ ಜನಶಕ್ತಿಯನ್ನು ತನ್ನೊಳಗೆ ಗರ್ಭೀಕರಿಸಿಕೊಂಡೇ ಭಗವಂತನಿಗೆ ಸವಾಲು ಹಾಕುತ್ತಾನೆ.

ಜನಪ್ರತಿನಿಧಿಯಾದ ಇನ್ನೊಬ್ಬ ಕವಿ ಸರ್ವಜ್ಞ ತಾನೇ ಹೇಳಿಕೊಂಡಂತೆ :

ಸರ್ವಜ್ಞನೆಂಬುವನು ಗರ್ವದಿಂದಾದವನೆ<br>
ಸರ್ವರೊಳು ಒಂದೊಂದು ನುಡಿಗಲಿತು ವಿದ್ಯೆಯ<br>
ಪರ್ವತವೇ ಆದ ಸರ್ವಜ್ಞ.

ಪ್ರಜ್ಞಾವಂತ ಪ್ರಜರಿಂದ ಒಂದೊಂದು ಸಂಗತಿ ಕಲಿತುದಾಗಿ ಹೇಳಿದ ಸರ್ವಜ್ಞ ತನ್ನ ಈ ತ್ರಿಪದಿಯಲ್ಲಿ 'ಜನಾಭಿಪ್ರಾಯದ' ಗೌರವವನ್ನು ಎತ್ತಿ ಹಿಡಿಯುತ್ತಾನೆ. ಜನಸಾಮಾನ್ಯರ ವಿದ್ವತ್ತಿಗೂ ಗೌರವ ಸೂಚಿಸುವ ಸರ್ವಜ್ಞನು ಜನತಾ ವಿಚಾರಗಳ ಬಲದಿಂದ ತನ್ನ ಜ್ಞಾನದ ಕ್ಷಿತಿಜವನ್ನು ವಿಸ್ತರಿಸಿಕೊಂಡಿದ್ದಾಗಿ ಹೇಳುವುದರ ಮೂಲಕ ಪ್ರಜಾಶಕ್ತಿಗೆ ಗೌರವವನ್ನೂ ಕೊಡುತ್ತಾನೆ.

ವ್ಯಕ್ತಿಯ ವೈಯಕ್ತಿಕ ಸುಖದಷ್ಟೆ ಸಮಾಜದ ಸುಖಕ್ಕೂ ಮಹತ್ವವಿದೆ. 'ತನ್ನಂತೆ ಪರರ ಬಗೆದಡೆ ಕೈಲಾಸ ನೆರೆಮನೆಯಕ್ಕು' ಎಂದು ಹೇಳುವುದರ ಮೂಲಕ ಪ್ರಜೆ ಸುಖದಿಂದಿದ್ದರೆ ಅವರ ರಾಜ್ಯ ಕಲ್ಯಾಣ ರಾಜ್ಯವಾಗುತ್ತದೆ ಎಂದು ಹೇಳಿದ್ದಾನೆ.

ಸರ್ವಜ್ಞ ತಾನು ಇಡೀ ಸಮಾಜದ ಸೊತ್ತೆಂದು ಹೇಳುತ್ತಾನೆ :

ಊರೆಲ್ಲ ನೆಂಟರು ಕೇರಿಯೆಲ್ಲವು ಬಳಗ<br>
ಧಾರುಣಿಯು ಎಲ್ಲ ಕುಲದೈವವಾಗಿನ್ನು<br>
ಯಾರನ್ನು ಬಿಡಲಿ ಸರ್ವಜ್ಞ

ಎಂದು ಹೇಳುವುದರ ಮೂಲಕ ಇವನು ಪ್ರಜಾಪ್ರೀತಿಯವನಾಗುತ್ತಾನೆ.

ಹೀಗೆ ಕನ್ನಡ ಸಾಹಿತ್ಯ ಚರಿತ್ರೆಯುದ್ದಕ್ಕೂ ಅಲ್ಲಲ್ಲಿ ಪ್ರಜಾತಾಂತ್ರಿಕ ಮೌಲ್ಯಗಳು ಕಾಣಬರುತ್ತವೆ. ಆದರೆ ೧೨ನೇ ಶತಮಾನದಲ್ಲಿ ಜಂಜಿತವಾದ ಪ್ರಜಾತಾಂತ್ರಿಕ ಮೌಲ್ಯಗಳು ಕಣ್ಣಿಗೆ ಹೊಡೆಯುತ್ತವೆ. ಅಲ್ಲಿ ನೇರವಾಗಿ ಶರಣರು ವಾಕ್‌ಸ್ವಾತಂತ್ರ್ಯ, ಧಾರ್ಮಿಕ ಸ್ವಾತಂತ್ರ್ಯ, ಸಮಾನತೆ, ಭ್ರಾತೃತ್ವ ಹೀಗೆ ಪ್ರಜಾತಾಂತ್ರಿಕ ಅಂಶಗಳನ್ನು ಹೇಳುತ್ತಾರೆ. ೧೨ನೇ ಶತಮಾನದಲ್ಲಿಯೇ ಒಂದು ಒಳ್ಳೆ ಸರಕಾರದ ಲಕ್ಷಣಗಳನ್ನು ಗುರುತಿಸಿದ್ದು ಅವರ ಮುಂದಾಲೋಚನೆಗೆ ಸಾಕ್ಷಿಯಾಗಿದೆ !

ಡಾ|| ಎಂ. ಬಿ. ಹೂಗಾರ
[illegible]

# ಮಾನವೀಯತೆ ಮುಂದೆ ಧರ್ಮ ನಿಲ್ಲುವುದೇ ?



**ಮಾ**ನವೀಯತೆ ಎಂದರೇನು ? ಹೀಗೆ ಕೇಳುವ ಜನರಿದ್ದಾರೆ. ಮಾನವೀಯತೆ ನಶಿಸುತ್ತಿದೆ ಎಂಬುದಕ್ಕೆ ನನಿತ್ಯ ನಡೆಯುವ ಘಟನೆಗಳೇ ಸಾಕ್ಷಿ. ಉದಾಹರಣೆಗೆ, ಸಹಾಯ ಮಾಡಿದ ಮಾಲಿಕನ ಮನೆ ೋಚುವುದು, ಅಮ್ಮ... ಹಸಿವು ಎಂದು ಮನೆಯ ಮುಂದೆ ಬೇಡುವ ಅನಾಥನನ್ನು ಬೈದು ೊರದಬ್ಬುವುದು... ಹೀಗೆ ಹಲವಾರು ಘಟನೆಗಳು ನಡೆಯುವುದು ಸರ್ವೇಸಾಮಾನ್ಯ.

ಒಂದು ಕಾಲದಲ್ಲಿ ವಿದೇಶಿಯರಿಗೆ ಭಾರತವು ಮೂಢರು, ಅನಕ್ಷರಸ್ಥರು, ಸಂಪ್ರದಾಯಿಗಳು, ಾವಾಡಿಗರು ವಾಸಿಸುವ ದೇಶ ಎಂದು ಕುಪ್ರಸಿದ್ಧವಾಗಿತ್ತು. ಆದರೆ ಅದೇ ವಿದೇಶೀಯರಿಗೆ ಭಾರತವು ಾನವೀಯ ಮೌಲ್ಯಗಳು, ರಕ್ತ ಸಂಬಂಧಗಳಲ್ಲಿ ಬಲವಾದ ನಂಬಿಕೆ, ಆದರ್ಶಗಳು ತುಂಬಿರುವ ದೇಶ ಂದೂ ಪ್ರಸಿದ್ಧವಾಗಿತ್ತು. ಸ್ವಾಮಿ ವಿವೇಕಾನಂದ, ಮದರ ಥೆರೇಸಾ, ಮಹಾತ್ಮಾ ಗಾಂಧಿ ೊದಲಾದ ಮಹಾನ್ ವ್ಯಕ್ತಿಗಳು ಜೀವಿಸಿದ ನಾಡು ಎಂದು ಕರೆಯಿಸಿಕೊಂಡಿದೆ.




ಆದರೆ ಕಾಲ ಬದಲಾದಂತೆ ಜನರ ಜೀವನ ಶೈಲಿಯ ಜೊತೆಗೆ ವರ್ತನೆಗಳೂ ದಲಾಗುತ್ತಿವೆ. ಭಯೋತ್ಪಾದನೆ, ಕೋಮುಗಲಭೆಗಳು, ಪಾಶ್ಚಾತ್ಯೀಕರಣ, ಹಿಂಸಾ ್ರವೃತ್ತಿ ತುಂಬಿತುಳುಕುತ್ತಾ ನಮ್ಮ ಭಾರತ ರಕ್ತಪಾತಗಳಲ್ಲಿ ತೇಲುತ್ತಿದೆ. ಇದನ್ನೆಲ್ಲಾ ನಾವು ೇಳುವುದಕ್ಕೆ ಒಂದು ಕಾರಣವಿದೆ. ಇವಕ್ಕೆಲ್ಲಾ ಮೂಲ ಧರ್ಮ. ಧರ್ಮ ಸಹಿಷ್ಣುತೆ ಾರ್ವತ್ರಿಕ ಆಗಿದ್ದರೆ ಮಾನವೀಯತೆ ಉಳಿಯುತ್ತಿತ್ತೇನೋ, ಆದರೆ ಮನುಷ್ಯ ರ್ಮಾಂಧನಾದರೆ ಅಥವಾ ಎಂತಹ ಆದರ್ಶ ವ್ಯಕ್ತಿಯೇ ಆದರೂ... ಅವನು ತನ್ನ ಧರ್ಮದ ್ರೇಯಕ್ಕಾಗಿ ಯಾವುದೇ ಕಾರ್ಯವನ್ನೂ ಮಾಡಬಲ್ಲ. ಒಮ್ಮೆ ಧರ್ಮದ ಅಡಿಯಾಳಾದರೆ ಅದು ಅವನನ್ನು ಿಡುವುದಿಲ್ಲ. ಧರ್ಮ ಅಫೀಮು ಇದ್ದಂತೆ. ಈಗ ಭಾರತದಲ್ಲಿ 'ಭಾರತೀಯತೆ' ಎಂದರೆ ಮಾನವೀಯತೆ ಂಬ ಸಂಕೇತ ಮತ್ತು ಈಗಿನ ಅತಿರೇಕಕ್ಕೆ ಏರಿರುವ ಧರ್ಮ(ಅಂಧತೆ)ಯ ನಡುವೆ ಮಹಾಯುದ್ಧವೇ ಡೆಯುತ್ತಿದೆ. ಇವುಗಳಲ್ಲಿ ಭಾರತ 'ಶಾಂತಭಾರತ'ವಾಗಿ ಉಳಿಯಬೇಕಾದರೆ ಧರ್ಮ ಸಹಿಷ್ಣುತೆಯಿಂದ ಾನವೀಯ ಮೌಲ್ಯಗಳು ಉಳಿಯಬೇಕು.

ಶಾಂತಿಯಿಂದ ನೆಮ್ಮದಿ ಜೀವನ ನಮ್ಮದಾಗಬೇಕಾದರೆ ನಮಗೆ ಶಾಂತ ಭಾರತ ಬೇಕಲ್ಲವೆ? ಅದಕ್ಕೆ ರ್ಮ ಸಹಿಷ್ಣು ಆಗೋಣವೆ ?

ಇದಕ್ಕೆ ಪೂರಕವಾದಂತೆ ನನ್ನ ಅನುಭವಕ್ಕೆ ಬಂದ ಕೆಲವು ಘಟನೆಗಳನ್ನು ತಿಳಿಸಲಿಚ್ಛಿಸುತ್ತೇನೆ. ನಾನು ರ್ಮಾಂಧನಲ್ಲದಿದ್ದರೂ ನನ್ನ ಮನಸ್ಸಿನಲ್ಲೂ ಒಂದು ಕಡೆ ನನ್ನ ಧರ್ಮವೇ ಶ್ರೇಷ್ಠ ಂಬ ಅಹಂ ಇತ್ತು. ಆದರೂ ನಾನು ಎಂದೂ ಬೇರೆ ಧರ್ಮವನ್ನು ದೂಷಿಸಿಲ್ಲ.

ಮಾನವೀಯತೆ ತೋರಲು ಯಾವ ಧರ್ಮವಾದರೇನು ? ಮನಸ್ಸಿರಬೇಕು ಎಂಬುದಕ್ಕೆ ನನ್ನದೇ ಎರಡು ುದಾಹರಣೆಗಳನ್ನು ಕೊಡಲು ಇಷ್ಟಪಡುತ್ತೇನೆ.

ಅಂದು ಬೆಳಿಗ್ಗೆ ೧೦ ಗಂಟೆ ಆಗಿರಬಹುದು. ಬಿಹಾರದ ರಾಜಧಾನಿ ಪಾಟ್ನ ರೈಲ್ವೆ ಸ್ಟೇಷನ್‌ನಿಂದ ಾಷ್ಟ್ರೀಯ ಭಾವೈಕ್ಯತಾ ಶಿಬಿರಕ್ಕೆ (ಎನ್.ಎಸ್.ಎಸ್.) ಎಂದು ನಮ್ಮ ೧೦ ಹುಡುಗರ ಕರ್ನಾಟಕ ತಂಡ ೊರಬಂದೆವು. ನಮಗೆ ಸರಿಯಾಗಿ ಹಿಂದಿ ಬರಲ್ಲಾ ಅನ್ನುವುದು, ಅಲ್ಲಿನ ಆಟೋ ಚಾಲಕರಿಗೆ ನಮ್ಮ ನ್ನಡ-ಹಿಂದಿ ಮಿಶ್ರಿತ ಭಾಷೆಯಿಂದ ತಿಳಿಯಿತು ಅನ್ಸುತ್ತೆ. ೫-೬ ಜನ ಆಟೋ ಚಾಲಕರು ನಮ್ಮನ್ನು ನೋಡಿ, ಮ್ಮಲ್ಲೇ ಚರ್ಚಿಸಿದ ನಂತರ ಒಬ್ಬ ಆಟೋ ಚಾಲಕ ನಮ್ಮ ಹತ್ತಿರ ಬಂದು, ಹಿಂದಿಯಲ್ಲಿ ''ನೋಡಿ, ನೀವು ಸ್‌ಸ್ಟ್ಯಾಂಡಿಗೆ ಹೋಗಬೇಕಲ್ಲವೆ ? ಇಲ್ಲಿಗೆ ತುಂಬಾ ದೂರ, ಆಟೋದಲ್ಲಿ ಬನ್ನಿ. ಆದರೆ ಒಬ್ಬರಿಗೆ ೧೫ ೂ.ನಂತೆ ೧೫೦ ರೂಪಾಯಿ ಕೊಡಿ'' ಎಂದ. ನಾವು ''ಇಲ್ಲ... ಹೇಗೂ ನಿಮ್ಮ ಆಟೋಗೆ ಮೀಟರ್ ಇಲ್ಲ ದರೂ ಪರವಾಗಿಲ್ಲ. ಬಸ್‌ಸ್ಟ್ಯಾಂಡ್ ೨ ಕಿ.ಮೀ. ಆಗಬಹುದು ಎಂದಿದ್ದೀರ, ಅಂದಾಜಿನ ಮೇಲೆ ಒಟ್ಟಾರೆ ೦ ರೂಪಾಯಿ ಕೊಡ್ತೀವಿ'' ಎಂದೆವು. ಅದಕ್ಕೆ ಆಟೋದವನು ಮೂತಿ ತಿರುಗಿಸಿಕೊಂಡು ''೮೦ ರೂ.ಗೆ ಾರು ಬರ್ತಾರೆ ನಾನು ನೋಡೇಬಿಡ್ತೀನಿ'' ಎಂದು ಹೋದ. ಬಸ್‌ಸ್ಟ್ಯಾಂಡಿಗೆ ನಡೆದುಕೊಂಡು ೋಗೋಣ ಎಂದರೆ, ನಮಗೆ ದಾರಿ ಗೊತ್ತಿರಲಿಲ್ಲ. ಅಲ್ಲಿಯವರನ್ನು ಕೇಳೋಣ ಎಂದರೆ ನಮಗೆ ಹಿಂದಿ ರ್ಥವಾಗುತ್ತದೆಯಾದರೂ ಮಾತಾಡೋದಕ್ಕೆ ಬರಲ್ಲ.

''ಒಳ್ಳೇ ಫಜೀತಿ ಆಯಿತಲ್ಲ...'' ಎಂದು ಬೇಸರ ಪಡುತ್ತಾ ನಾವು ಗೊಣಗುತ್ತಿದ್ದಾಗ, ಬಿಳಿ ಬ್ಬಾ-ಪೈಜಾಮ್ ಧರಿಸಿದ್ದ ಸುಮಾರು ೫೦ ವರ್ಷದ ಕುರುಚಲು ಗಡ್ಡಧಾರಿಯೊಬ್ಬ ಒಂದು ಕೈಯಲ್ಲಿ ಬ್ಯಾಗು ಮತ್ತೊಂದು ಕೈಯಲ್ಲಿ ಕೋಲು ಹಿಡಿದುಕೊಂಡು ಅದರುತ್ತಾ, ನಿಧಾನಕ್ಕೆ ಕುಂಟುತ್ತಾ ನಮ್ಮ ಬಳಿಗೆ ಬರಲು ಮೆಟ್ಟಿಲು ಇಳಿಯುವಾಗ ಜಾರಿ ಬಿದ್ದ. ನಮ್ಮಲ್ಲಿ ಕೆಲವರು ಓಡಿಹೋಗಿ ಅವನನ್ನು ಮೇಲಕ್ಕೆ ಎತ್ತಿ, ''ನಿಧಾನ ಸಾರ್... ನೋಡಿಕೊಂಡು ಬನ್ನಿ'' ಎಂದು ಕನ್ನಡದಲ್ಲಿ ಅಂದಾಗ, ಆತ ''ಪರವಾಗಿಲ್ಲ... ನಾನೂ ನಿಮ್ಮ ಹತ್ತಿರ ಬರೋಕೆ ಬಂದಿದ್ದು'' ಎಂದು ಕನ್ನಡದಲ್ಲೇ ಉತ್ತರ ನೀಡಿ, ''ದೂರದಿಂದಲೇ ನಿಮ್ಮ ಮತ್ತು ಆಟೋ ಚಾಲಕನ ಮಾತನ್ನು ಕೇಳಿಸಿಕೊಂಡು... ನಿಮಗೆ ಸಹಾಯ ಮಾಡಲು ಬಂದೆ'' ಎಂದ.

''ಇಲ್ಲಿ ಆಟೋ ಚಾಲಕರು ಹೊಸಬರಿಗೆ ತುಂಬಾ ಮೋಸ ಮಾಡ್ತಾರೆ. ಅದೂ ಬೇರೆ ಭಾಷೆ ಗೊತ್ತಿಲ್ಲದೆ ಇದ್ದರೆ ತುಂಬ ಮೋಸ ಹೋಗ್ತೀವಿ. ಇಲ್ಲಿಗೆ ಬಸ್‌ಸ್ಟ್ಯಾಂಡ್ ೨ ಕಿ.ಮೀ. ಕೂಡ ಇಲ್ಲ... ಒಂದು ಕಿ.ಮೀ. ಆಗತ್ತೆ ಅಷ್ಟೇ. ನನಗೆ ದಾರಿ ಗೊತ್ತು. ನನಗೆ ಹಿಂದಿ ಬರುತ್ತೆ, ಆದ್ದರಿಂದ ಆಟೋ ಚಾಲಕರ ಹತ್ತಿರ ಮಾತಾಡ್ತೀನಿ... ಓ.ಕೆ. ನಾ ?'' ಎಂದು ಕೇಳಿದ.

ಆ ವ್ಯಕ್ತಿ ಮಾತು ಮುಂದುವರೆಸಿ, ಏನೋ ಸಂತೋಷದಿಂದ ತೊದಲುತ್ತಾ... ಅದರುತ್ತಾ ''ಎಮ್.ಎ.ಎಮ್. ಖಾನ್ ಅಂತ ನನ್ನ ಹೆಸರು. ಇಲ್ಲಿಯೇ ಪೂರ್ಣಿಯದವನು. ನಾನು ಬೆಂಗಳೂರು ಸಮೀಪದ ಹೊಸಕೋಟೆಯಲ್ಲಿ ಸಂಬಂಧಿಕರ ಜೊತೆ ಟೆಲಿಫೋನ್ ಬೂತ್ ಇಟ್ಟುಕೊಂಡಿದ್ದೀನಿ. ದುಡ್ಡು ಕೂಡಿಟ್ಟುಕೊಂಡು ಆಗಾಗ್ಗೆ ನಮ್ಮ ಮನೆಗೆ ಕೊಟ್ಟು ಮತ್ತೆ ಹೋಗ್ತೀನಿ...'' ಎಂದ.

ವಿ. ಕಣ್ಣಪ್ಪ ಶೆಟ್ಟಿ ಮುಡಿಯನೂರು

ನಮಗೆ ಎಲ್ಲಿಲ್ಲದ ಸಂತೋಷ. ಏಕೆಂದರೆ, ಅಷ್ಟೊಂದು ಸಹಾಯ ಮಾಡಿ, ನಮಗೆ ಹಣ ಉಳಿಸಿ, ಇಲ್ಲಿ ಯಾವ ಥರ ನಡೆದುಕೊಳ್ಳಬೇಕು ಎಂದು ವಿವರಿಸಿ ಮಾರ್ಗದರ್ಶಕನಾದ ವ್ಯಕ್ತಿ ಅಂಗವಿಕಲ, ಮತ್ತೊಂದು ಕಾರಣ ಆತ ಮುಸ್ಲಿಂ ಎಂದು.

ನಾವೆಲ್ಲ ಹಿಂದೂ ಅಂತ ಗೊತ್ತಿದ್ದರೂ ಮತ್ತು ಆತ ಮುಸ್ಲಿಂ ಆಗಿದ್ದರೂ ಅವನಲ್ಲಿ ಧರ್ಮಾಂಧತೆ ಇರಲಿಲ್ಲ, ಬದಲಿಗೆ ಧರ್ಮಸಹಿಷ್ಣು ಆಗಿದ್ದ. ಆತನಲ್ಲಿ ಧರ್ಮಕ್ಕಿಂತ ಮಾನವೀಯತೆ ಮೆರೆದಿತ್ತು.

''ಸಾರ್, ಮಧ್ಯಾಹ್ನ ಆಗಿಹೋಗ್ತಾ ಇದೆ. ಬೆಳಗ್ಗೆಯಿಂದ ಇಲ್ಲೇ ಇದ್ದೀರ... ನೀವು ಏನೂ ತಿಂದದ್ದು ನಾವು ನೋಡಲಿಲ್ಲ... ಹೋಟೆಲ್‌ನಿಂದ ಬರುವಾಗ ನಿಮಗೆ ಅಂತ ಚಪಾತಿ ಕಟ್ಟಿಸಿಕೊಂಡು ಬಂದಿದ್ದೀವಿ... ತಗೊಳ್ಳಿ... ತಿನ್ನಿ'' ಎಂದೆವು.

ಆಗ ಆತ ಮೆಲ್ಲಗೆ, ''ನೋಡಿಪ್ಪಾ... ಈಗ ರಂಜಾನ್ ಅಲ್ವಾ... ನಾವು ಸೂರ್ಯ ಮುಳುಗಿದ ಮೇಲೇನೇ ಏನಾದರೂ ತಿನ್ನುವುದು'' ಎಂದ. ''ನಮಗೆ ಇಷ್ಟೆಲ್ಲಾ ಸಹಾಯ ಮಾಡಿ ತುಂಬಾ ಹತ್ತಿರದ ವ್ಯಕ್ತಿ ಆಗಿದ್ದೀರ. ಇನ್ನು ಸ್ವಲ್ಪ ಹೊತ್ತು ಮಾತ್ರ ನಮ್ಮ ಜೊತೆಯಲ್ಲಿ ಇರ್ತೀರ... ನಾವು ನಿಮಗೆ ಯಾವ ಸಹಾಯಾನೂ ಮಾಡಲಿಲ್ಲ... ಸಹಾಯ ಅಂತಿಲ್ಲದಿದ್ದರೂ... ನಮ್ಮ ಸಂತೋಷಕ್ಕಾಗಿ ಪ್ರೀತಿಯಿಂದ ತಂದ ಈ ಊಟಾನು ನೀವು ತಿನ್ನಲಿಲ್ಲವಲ್ಲ ಅಂತ ತುಂಬ ಬೇಸರವಾಗ್ತಿದೆ'' ಎಂದೆವು.

ಸಂತೋಷಗೊಂಡರೂ ಏನೋ ಮುಜುಗರ ಪಡುತ್ತ ಆತ ''...ನೋಡಿಪ್ಪಾ ನಮ್ಮ ಧರ್ಮದಂತೆ ರಂಜಾನ್ ದಿನಗಳಲ್ಲಿ ಸೂರ್ಯಾಸ್ತದ ಮುಂಚೆ ತಿನ್ನಬಾರದು. ಆದರೆ ನೀವು ತೋರಿಸುತ್ತಿರುವ ಪ್ರೀತಿಗೆ ... ಅಲ್ಲಾನಲ್ಲಿ ಕ್ಷಮೆ ಕೇಳುತ್ತಾ... ಇದನ್ನು ಅಲ್ಲಾನ ಪ್ರಸಾದ ಅಂತ ಸ್ವೀಕರಿಸುತ್ತೇನೆ...'' ಎನ್ನುತ್ತ ಒಂದೊಂದು ತುತ್ತಿಗೂ ನಮ್ಮನ್ನೂ... ಆಕಾಶಾನೂ ನೋಡುತ್ತಾ... ತಿನ್ನತೊಡಗಿದ. ಧರ್ಮದ ಆಚರಣೆ ಮೀರಿದರೂ ಆತನ ಹೃದಯವೈಶಾಲ್ಯತೆಯಿಂದ ಆತನಲ್ಲಿ ನಮಗೆ ದೊಡ್ಡ ಮಾನವೀಯತೆಯ ಆಗರವೇ ಕಾಣುತ್ತಿತ್ತು...

ಕೈ ತೊಳೆದುಕೊಂಡ ಎಮ್.ಎ.ಎಮ್. ಖಾನ್ ''ನನ್ನ ಊರಿನ ಬಸ್ ಬಂದಿದೆ... ನೋಡಿಪ್ಪಾ ಎಲ್ಲರೂ ಕ್ಷೇಮವಾಗಿ ಹೋಗಿಬನ್ನಿ... ನಿಮಗೆ ದಾರೀಲಿ ಏನಾದರೂ ತೊಂದರೆ ಆದರೆ ಈ ನಂಬರ್‌ಗೆ ಫೋನ್ ಮಾಡಿ... ಬಂದುಬಿಡ್ತೀನಿ. ...ಆದರೆ ಒಂದು ಮಾತು, ಪ್ರೀತಿ... ವಿಶ್ವಾಸ... ಸಹಾಯ... ಈ ಮಾನವೀಯ ಮೌಲ್ಯಗಳನ್ನು ಎಂತಹ ಕಷ್ಟದ ಕಾಲದಲ್ಲೂ ಮರೆಯದಿರಿ...'' ಎಂದು ಕೈ ತೋರುತ್ತಾ... ಕುಂಟುತ್ತಾ... ತೊದಲು ನುಡಿಗಳಿಂದಲೆ ನಡಗುತ್ತಾ... ನಿಧಾನವಾಗಿ ಮರೆಯಾದ.

ತೇವಗೊಂಡ ಕಣ್ಣು, ಅವರ ಮನದಾಳದ ಮಾತು ಹೃದಯಕ್ಕೆ ನುಗ್ಗಿತು... ಏನನ್ನೋ ಕಳೆದುಕೊಂಡಂತೆ ಮೂಕರಾದೆವು.

ಇದು ನಡೆದದ್ದು ೨೦೦೪ ಅಕ್ಟೋಬರ್ ೨೭ರಂದು.

ಅವಸರದಲ್ಲಿ ಓಡುತ್ತಿದ್ದ ನನ್ನನ್ನು ರಭಸವಾಗಿ ಬಂದ ಬಸ್ ತಡೆದು ನಿಲ್ಲಿಸಿತು. ಸದ್ಯ ಅಪಘಾತ ತಪ್ಪಿತೆಂದು ಅಂದುಕೊಂಡೆ. ಅಂದು ಮಧ್ಯಾಹ್ನ ೧೨ ಗಂಟೆ. ದಿನಾಂಕ ೯ ನವೆಂಬರ್ ೨೦೦೫. ಮಾರ್ಕೆಟ್‌ನಿಂದ ಅಪ್ಸರಾ ಚಿತ್ರಮಂದಿರದ ಕಡೆ ನಿಧಾನವಾಗಿ ಜನರಮಧ್ಯೆ ನುಸುಳಿಕೊಂಡು ಬರುತ್ತಿದ್ದೆ.

ತಲೆಯ ಮೇಲೆ ಟೋಪಿ, ಬಿಳಿ ಜುಬ್ಬಾ ಪೈಜಾಮ್... ೨೫ ವಯಸ್ಸು ಇರಬಹುದು. ಒಬ್ಬ ವ್ಯಕ್ತಿ ರಸ್ತೆ ಬದಿಯ ಮೋರಿ ಕಡೆಗೆ ಹೋಗುತ್ತಿದ್ದಾನೆ. ಸೂಕ್ಷ್ಮವಾಗಿ ಗಮನಿಸಿದೆ. ಆತನ ಕೈಯಲ್ಲಿ ಒಂದು ಬಿಳಿ ಸ್ಟಿಕ್ ಇತ್ತು. ಆತ ಕುರುಡನಾಗಿದ್ದ ಎಂಬುದಕ್ಕೆ ಬೇರೇನೂ ಪುರಾವೆ ಬೇಕಾಗಿಲ್ಲ. ''ಪಾಪ ಕುರುಡ... ಎಲ್ಲಿಗೆ ಹೋಗ್ಬೇಕೋ ಏನೋ... ರಸ್ತೆ ದಾಟಿಸ್ತೀನಿ...'' ಎಂದು ಮುಂದೆ ಬಂದೆ. ಆದರೆ ಆತನನ್ನು ನೋಡಿದ ಕೂಡಲೆ ಆತ ಮುಸ್ಲಿಂ ಎಂದು ಯಾರು ಬೇಕಾದರೂ ಗುರುತು ಹಿಡಿಯಬಹುದಿತ್ತು. ನನ್ನಲ್ಲೇ ಏನೋ ದ್ವಂದ್ವ ಇದೆ. ಸುಮಾರು ಜನ ಅಂಗವಿಕಲರಿಗೆ ರಸ್ತೆ ದಾಟಿಸಿ... ಸಹಾಯ ಮಾಡಿದ್ದೀನಿ... ಆದರೆ, ಇವತ್ತು ನನಗೆ ಧರ್ಮ ಕೊರೆಯಲು ಶುರು ಮಾಡಿತು... ಆತ ಮುಸ್ಲಿಂ, ನಾನು ಹಿಂದೂ. ಏತಕ್ಕೆ ಸಹಾಯ ಮಾಡಬೇಕು? ಭಯೋತ್ಪಾದನೆಗೆ ಮುಸ್ಲಿಂರೇ ಕಾರಣ. ಕೋಮುಗಲಭೆಗೆ ಅವರೇ ಕಾರಣ. ದೇಶದಾದ್ಯಂತ ನಡೆಯುತ್ತಿರುವ ಬಾಂಬ್ ಸ್ಫೋಟಕ್ಕೆ ಅವರೇ ಕಾರಣ ಎಂದು ದಿನಾಲು ಪೇಪರ್, ಟಿವಿಗಳಲ್ಲಿ ಬರುತ್ತೆ. ಅಂತಹ ವಿದ್ರಾವಕ ಧರ್ಮದವರಿಗೆ ಸಹಾಯ ಮಾಡಬಾರದು ಎಂದೆನಿಸಿತು. ಆತನ ಮೇಲೆ ಕರುಣೆ ತೋರಿ ಸಹಾಯ ಮಾಡಲು ಧರ್ಮ ನನ್ನನ್ನು ಹಿಡಿದಿಟ್ಟಿತು. ಆದರೆ ಇದ್ದಕ್ಕಿದ್ದಂತೆ ಏನಾಯಿತೋ... ಏನೋ ನೆನಪಾಗಿ ''ಛೇ... ಛೇ... ನಾನು ಧರ್ಮಾಂಧನಾಗಿ ನನ್ನಲ್ಲಿದ್ದ ಸಹಾಯ ಮಾಡುವ ಮನಸ್ಸನ್ನು ನಾನೇ ಕೊಲ್ಲುವುದೇ! ಇನ್ನೊಬ್ಬರಿಗೆ ಸಹಾಯ ಮಾಡಲು ಮಾನವೀಯತೆ ಬೇಕೆ ಹೊರತು ಧರ್ಮದ ಹೆಸರಲ್ಲಿ ಮನುಷ್ಯತ್ವ ಕಳೆದುಕೊಳ್ಳುವುದಲ್ಲ... ಯಾರೋ ತಿಳಿಗೇಡಿಗಳು ಮಾಡುವ ತಪ್ಪಿಗೆ ಇಡೀ ಮುಸ್ಲಿಂ ಸಮುದಾಯವನ್ನು ದೂಷಿಸುವುದು ಸರಿಯಲ್ಲ'' ಎನ್ನಿಸಿತು.

ತಟ್ಟನೆ ಆತನ ಕೈ ಹಿಡಿದು ''...ಸಾರ್ ಎಲ್ಲಿಗೆ ಹೋಗಬೇಕು'' ಎಂದು ಕೇಳಿದೆ. ಅವನು ಉರ್ದು ಮಿಶ್ರಿತ ಕನ್ನಡದಲ್ಲಿ ''ನಮಾಜ್ ಮಾಡಲು ಟೈಂ ಆಗ್ತಿದೆ... ಮಾರ್ಕೆಟ್‌ನ ಬಸ್‌ಸ್ಟ್ಯಾಂಡ್ ಪಕ್ಕದಲ್ಲಿರೊ ದೊಡ್ಡ ಮಸೀದಿಗೆ ಹೋಗಬೇಕು'' ಎಂದ.

''ಇನ್ನೂ ದೂರ ಇದೆ. ಬನ್ನಿ... ಯಾರನ್ನಾದರೂ ಜೊತೆಯಲ್ಲಿ ಕರೆದುಕೊಂಡು ಬರಬಾರ್ದ... ನೋಡಿ ಈಗ ನಿಮಗೆ ಎಷ್ಟು ತೊಂದರೆ ಆಗ್ತಿದೆ'' ಎಂದೆ. ಆತನನ್ನು ಮಸೀದಿ ಬಳಿ ಕರೆದುಕೊಂಡು ಬಂದೆ. ಮಸೀದಿ ಬಾಗಿಲ ಮುಂದೆ, ಮಸೀದಿಯ ಆವರಣದಲ್ಲಿ ತುಂಬಾ ಮುಸ್ಲಿಂ ಜನರು ಸೇರಿದ್ದರು... ಆ ದಿನ ಯಾವುದೋ ಧಾರ್ಮಿಕ ಕಾರ್ಯಕ್ರಮ ಅಂತ ಕಾಣಿಸತ್ತೆ... ಮುಸ್ಲಿಂ ವ್ಯಕ್ತಿಯನ್ನು ತಿಲಕಧಾರಿಯಾದ ಒಬ್ಬ ಹಿಂದೂ ಕರೆದುಕೊಂಡು ಮಸೀದಿ ಬಾಗಿಲಿಗೆ ಬಂದಾಗ... ಅಲ್ಲಿನ ಮುಸ್ಲಿಂ ವ್ಯಕ್ತಿಗಳು ಆಶ್ಚರ್ಯದಿಂದ ನನ್ನನ್ನೇ ದಿಟ್ಟಿಸಿ ನೋಡುತ್ತಿದ್ದ ಅವರ ಕಣ್ಣುಗಳಲ್ಲಿ ಕುತೂಹಲ.

ಮತ್ತೊಬ್ಬ ಮುಸ್ಲಿಂ ವ್ಯಕ್ತಿ ನಾನು ಕರೆದುಕೊಂಡು ಬಂದ ಆತನನ್ನು ಒಳಗೆ ಕರೆದುಕೊಂಡು ಹೋದರು.

ಅಲ್ಲಿಂದ ಹಿಂತಿರುಗಿ ಬರುವಾಗ ವಾತಾವರಣವೇ ಬದಲಾದಂತೆ ಕಂಡಿತು. ಏನನ್ನೋ ಸಾಧಿಸಿದ ಸಂತೋಷದಿಂದ, ದುರುಳ ಭಾವನೆ ಹೃದಯದಿಂದ ಹೊರಹಾಕಿ, ನಿರ್ಮಲ, ನಿರಾಳವಾಗಿ ಮನಸ್ಸು ಉಲ್ಲಾಸವಾಗತೊಡಗಿತು. ರಕ್ತಪಾತ, ಹಿಂಸೆ, ನೋವುಗಳಿಂದ ಮುಕ್ತರಾಗಿ ಪರಸ್ಪರ ಪ್ರೀತಿ, ವಿಶ್ವಾಸ, ಸಹಕಾರದಿಂದ ನೆಮ್ಮದಿ ಜೀವನ ಎಷ್ಟೊಂದು ಮನಸ್ಸಿಗೆ ಹಿತವನ್ನುಂಟುಮಾಡುತ್ತದೆ, ಅಲ್ಲವೆ?

ವಿ. ಕಣ್ಣಪ್ಪ ಶೆಟ್ಟಿ ಮುಡಿಯನೂರು
ಮೊದಲನೇ ಎಮ್‌ಎಸ್‌ಡಬ್ಲ್ಯು, ಎಸ್.ಎಲ್.ಎನ್. ಹಾಸ್ಟೆಲ್
ಕೋಟೆ, ಬೆಂಗಳೂರು - ೫೬೦ ೦೦೨

## ಶೂನ್ಯ (ಸಂ)ಭಾವನೆ

ಮಂದಾರ ಹೂವೊಂದು ಉದ್ಗರಿಸಿ
ತುಂಬಿ ತಿರುಗಲು
ಅಲ್ಲಿ,
ರಣಹದ್ದು ಬಂದೊಂದು
ರಪ್ಪನೆ ಬಡಿದಿರೇ,
ಬುದ್ಧನ ಮರದಡಿಯಲಿ
ಜೀವನದ ಆದಿ ಅಂತ್ಯಗಳ ಬಗ್ಗೆ
ಜಿಜ್ಞಾಸೆ ಮೂಡಿರೇ,
ಅಲ್ಲಿ
ವಾಂಛೆಗಳಿಗೇನು ಕೆಲಸ?

ಎಲ್ಲವೂ ಶೂನ್ಯ ಶೂನ್ಯ
ಗಡಿಯಾರದೊಳಗಿನ ಮುಳ್ಳುಗಳು
ದಿಗಂತದೆಡೆಗಿನ ದಿಕ್ಸೂಚಿಗಳು

ಎ. ರೆಹಮಾನ್ ಮಸ್ಕಿ
ಗುಲಬರ್ಗಾ

## ನವಕರ್ನಾಟಕ ಪ್ರಕಾಶನದ

### ವಿಶೇಷ ಕೊಡುಗೆ

13-1-2008ರ ಬೆಳಗ್ಗೆ 10 ಗಂಟೆಗೆ

### ಲೋಕಾರ್ಪಣೆ

ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ವರ್ಲ್ಡ್ ಕಲ್ಚರ್
ಬಿ. ಪಿ. ವಾಡಿಯಾ ರಸ್ತೆ, ಬಸವನಗುಡಿ, ಬೆಂಗಳೂರು-4

ತಮಗೆ ಆದರದ ಸ್ವಾಗತ

## ನೊಬೆಲ್ ಪುರಸ್ಕೃತರು

**ಸಮಗ್ರ ಮಾಹಿತಿ ಕೋಶ**

ರಚನೆ : ಸಿ. ಆರ್. ಕೃಷ್ಣರಾವ್

ಡೆಮಿ ¼ ಆಕಾರದ 300 ಪುಟಗಳು

ನೊಬೆಲ್ ಪುರಸ್ಕೃತರು

ಸಮಗ್ರ ಮಾಹಿತಿ ಕೋಶ















ಸಿ. ಆರ್. ಕೃಷ್ಣರಾವ್

**ಪ್ರತಿಯೊಂದು ಮನೆ, ಶಾಲಾ - ಕಾಲೇಜು ಗ್ರಂಥಾಲಯದಲ್ಲಿ ಇರಲೇಬೇಕಾದ ಉಪಯುಕ್ತ ಕೃತಿ**

ಮುಖಬೆಲೆ ರೂ. 400
ಪ್ರಕಟಣಪೂರ್ವ ರಿಯಾಯಿತಿ
ಬೆಲೆ ರೂ. 280 ಮಾತ್ರ

ಪ್ರಾರಂಭದಿಂದ ಇಲ್ಲಿಯವರೆಗೆ ವಿಶ್ವಶಾಂತಿ, ಸಾಹಿತ್ಯ, ಭೌತ ವಿಜ್ಞಾನ, ರಸಾಯನ ವಿಜ್ಞಾನ, ವೈದ್ಯ ವಿಜ್ಞಾನ ಮತ್ತು ಅರ್ಥಶಾಸ್ತ್ರ ಕ್ಷೇತ್ರಗಳಿಗಾಗಿ ಪ್ರಶಸ್ತಿ ಪಡೆದ 760ಕ್ಕೂ ಹೆಚ್ಚಿನ ಗಣ್ಯರ ಚಿತ್ರಗಳ ಸಹಿತ ಅವರ ಬದುಕು ಸಾಧನೆಗಳ ಸಮಗ್ರ ಮಾಹಿತಿ ಕೋಶ

*ಅಂಚೆ ವೆಚ್ಚ ರೂ. 20 ಸೇರಿಸಿ ಒಟ್ಟು ರೂ. 300ರ ಡಿ.ಡಿ. ಅಥವಾ ಎಂ.ಒ. ಕಳಿಸಿ ನಿಮ್ಮ ಹೆಸರನ್ನು ಕೂಡಲೇ ನೋಂದಾಯಿಸಿಕೊಳ್ಳಿ*




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**

11, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ 5159, ಕುಮಾರ ಪಾರ್ಕ್ ಪೂರ್ವ
ಬೆಂಗಳೂರು - 560 001. ಫೋನ್ : 30578022, 22203580 ಫ್ಯಾಕ್ಸ್ : 30578023
e-mail : navakarnataka@vsnl.com web : www.navakarnatakabooks.com

ಶಾಖೆಗಳು : ಬೆಂಗಳೂರು © 22251382 :: ಮಂಗಳೂರು © 2441016 :: ಮೈಸೂರು © 2424094 :: ಗುಲ್ಬರ್ಗಾ © 224302

Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Editor : Dr. G. Ramakrishna

**HOSATHU** Kannada Monthly / December 2007 Rs. 12
Registered CPMG / KA / BGE – 7 / 2006-08. Posted at Bangalore PSO on the 28th of every month
WPP No. 14. Licenced to post without prepayment. RNI Regn. No. KARKAN/1999/614.